ದ.ರಾ. ಬೇಂದ್ರೆ
ಶ್ರೀನಿವಾಸ
ಚಿದಾನಂದ ಮೂರ್ತಿ
ಶಾಂತಿನಾಥ ದೇಸಾಯಿ
ರಾ.ಶಿ.
ಯಶವಂತ ಚಿತ್ತಾಲ
ತ.ರಾ.ಸು.
ಪು.ತಿ.ನ.
ದೇವನೂರ ಮಹಾದೇವ
ಹಾ.ಮಾ.ನಾಯಕ
ಗಿರೀಶ್ ಕಾರ್ನಾಡ್
ಎಚ್. ತಿಪ್ಪೇರುದ್ರಸ್ವಾಮಿ
ರಂ.ಶ್ರೀ. ಮುಗಳಿ
ಶಿವರಾಮ ಕಾರಂತ
ಕುವೆಂಪು
ಗೊರೂರು ರಾಮಸ್ವಾಮಿ ಅಯ್ಯಂಗಾರ್
ದೇವುಡು
ಚಂದ್ರಶೇಖರ ಕಂಬಾರ

ಪ್ರತಿಯೊಂದು ಮನೆಯ, ಶಾಲೆಯ ಗ್ರಂಥ ಭಂಡಾರದಲ್ಲಿ ಇರಲೇಬೇಕಾದ ಕೃತಿಗಳು

# ನವಕರ್ನಾಟಕ ಸಾಹಿತ್ಯ ಸಂಪದ

ಸಂಪಾದಕರು : ಡಾ|| ಪ್ರಧಾನ್ ಗುರುದತ್ತ

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ
ಬದುಕು–ಬರೆಹಗಳ ಪರಿಚಯ – ಖ್ಯಾತ ಲೇಖಕ, ವಿಮರ್ಶಕರಿಂದ.

ಈವರೆಗೆ ಪ್ರಕಟವಾಗಿರುವ 36 ಸಂಪುಟಗಳ ಶೀರ್ಷಿಕೆ ಮತ್ತು ಲೇಖಕರು :

| | |
|---|---|
| ಕುವೆಂಪು | ಡಾ|| ಪ್ರಧಾನ್ ಗುರುದತ್ತ |
| ರಂ. ಶ್ರೀ. ಮುಗಳಿ | ಡಾ|| ತಾಳ್ತಜೆ ವಸಂತಕುಮಾರ |
| ದ. ರಾ. ಬೇಂದ್ರೆ | ಎನ್ಕೆ. ಕುಲಕರ್ಣಿ |
| ಶಿವರಾಮ ಕಾರಂತ | ಮಾಲಿನಿ ಮಲ್ಯ |
| ವಿ. ಕೃ. ಗೋಕಾಕ | ಡಾ|| 'ಜೀವಿ' ಕುಲಕರ್ಣಿ |
| ದೇವುಡು | ಡಾ|| ಸಿ. ಎಸ್. ಶಿವಕುಮಾರಸ್ವಾಮಿ |
| ಬಿ. ಪುಟ್ಟಸ್ವಾಮಯ್ಯ | ಡಾ|| ಕೃಷ್ಣಮೂರ್ತಿ ಹನೂರು |
| ಡಿ. ವಿ. ಗುಂಡಪ್ಪ | ಡಿ. ಆರ್. ವೆಂಕಟರಮಣನ್ |
| ಎ. ಎನ್. ಮೂರ್ತಿರಾವ್ | ಡಾ|| ಪಿ. ಶಾಂತಾರಾಮ ಪ್ರಭು |
| ಚದುರಂಗ | ಡಾ|| ಎಂ. ಎಸ್. ವೇದಾ |
| ವ್ಯಾಸರಾಯ ಬಲ್ಲಾಳ | ಡಾ|| ಡಿ. ವಿಜಯಲಕ್ಷ್ಮಿ |
| ಚಂದ್ರಶೇಖರ ಕಂಬಾರ | ಡಾ|| ಬಸವರಾಜ ಮಲಶೆಟ್ಟಿ |
| ಬಿ. ಜಿ. ಎಲ್. ಸ್ವಾಮಿ | ಡಾ|| ಮುಳುಕುಂಟೆ ರಮೇಶ್ |
| ರಾ.ಶಿ. | ಡಾ|| ಎಚ್. ಎಸ್. ಗೋಪಾಲ ರಾವ್ |
| ದೇವನೂರ ಮಹಾದೇವ | ಎನ್. ಪಿ. ಶಂಕರನಾರಾಯಣ ರಾವ್ |
| ಪು.ತಿ.ನ. | ಡಾ|| ಪ್ರಭುಶಂಕರ |
| ಶ್ರೀನಿವಾಸ (ಮಾಸ್ತಿ ವೆಂಕಟೇಶ ಅಯ್ಯಂಗಾರ್) | ಪ್ರೊ|| ಜಿ. ಎಸ್. ಸಿದ್ದಲಿಂಗಯ್ಯ |
| ತ.ರಾ.ಸು. | ನಾ. ಪ್ರಭಾಕರ |
| ಪೂರ್ಣಚಂದ್ರ ತೇಜಸ್ವಿ | ಡಾ|| ಎಚ್. ಎಂ. ಮಹೇಶ್ವರಯ್ಯ |
| ಹಾ. ಮಾ. ನಾಯಕ | ಡಾ|| ಪ್ರಧಾನ್ ಗುರುದತ್ತ |
| ಚಿದಾನಂದಮೂರ್ತಿ | ಡಾ|| ಸಂಗಮೇಶ ಸವದತ್ತಿಮಠ |
| ಗಿರೀಶ್ ಕಾರ್ನಾಡ್ | ಡಾ|| ಮೀರಾ ಮೂರ್ತಿ |
| ಯಶವಂತ ಚಿತ್ತಾಲ | ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ |
| ಕೆ. ಎಸ್. ನರಸಿಂಹಸ್ವಾಮಿ | ಡಾ|| ರಾಮೇಗೌಡ |
| ಶಾಂತಿನಾಥ ದೇಸಾಯಿ | ಡಾ|| ಪ್ರೀತಿ ಶುಭಚಂದ್ರ |
| ಎಸ್. ಎಲ್. ಭೈರಪ್ಪ | ದೇಶ ಕುಲಕರ್ಣಿ |
| ಪಿ. ಲಂಕೇಶ್ | ಡಾ|| ಹಾಲತಿ ಸೋಮಶೇಖರ್ |
| ಎ. ಆರ್. ಕೃಷ್ಣಶಾಸ್ತ್ರಿ | ಬಿ. ವಿ. ಶ್ರೀಧರ |
| ಕೀರ್ತಿನಾಥ ಕುರ್ತಕೋಟಿ | ಡಾ|| ಕೃಷ್ಣಮೂರ್ತಿ ಚಂದರ್ |
| ಗೋಪಾಲಕೃಷ್ಣ ಅಡಿಗ | ಬಾಲಸುಬ್ರಹ್ಮಣ್ಯ ಕಂಜರ್ಪಣೆ |
| ವಿ. ಸೀತಾರಾಮಯ್ಯ | ಪ್ರೊ|| ಎಂ. ರಾಮಚಂದ್ರ |
| ಎಲ್. ಎಸ್. ಶೇಷಗಿರಿ ರಾವ್ | ಡಾ|| ಪಿ. ವಿ. ನಾರಾಯಣ |
| ಎಚ್. ತಿಪ್ಪೇರುದ್ರಸ್ವಾಮಿ | ಡಾ|| ಎನ್. ಎಸ್. ತಾರಾನಾಥ |
| ಎಸ್. ವಿ. ರಂಗಣ್ಣ | ಡಾ|| ಸಿ. ಪಿ. ಕೃಷ್ಣಕುಮಾರ್ |
| ಗೊರೂರು ರಾಮಸ್ವಾಮಿ ಅಯ್ಯಂಗಾರ್ | ಡಾ|| ಪ್ರಧಾನ್ ಗುರುದತ್ತ |
| ಬಿ. ಸಿ. ರಾಮಚಂದ್ರ ಶರ್ಮ | ಲಿಂಗದೇವರು ಹಳೆಮನೆ |

ಪ್ರತಿ ಸಂಪುಟದ ಬೆಲೆ ರೂ. 60. ಅಂಚೆವೆಚ್ಚ ರೂ. 20 ಪ್ರತ್ಯೇಕ.
ಒಮ್ಮೆಗೆ 12 ಅಥವಾ ಹೆಚ್ಚು ಸಂಪುಟಗಳನ್ನು ತರಿಸಿಕೊಳ್ಳುವವರಿಗೆ ಅಂಚೆವೆಚ್ಚ ಉಚಿತ.
'ಹೊಸತು' ಪತ್ರಿಕೆಗೆ ಮೂರು ವರ್ಷಗಳ ಚಂದಾ ನೀಡಿದವರಿಗೆ ಈ ಸಂಪುಟಗಳ ಬೆಲೆಯ
ಮೇಲೆ ಶೇ. 20ರ ರಿಯಾಯಿತಿ. ಇಂದೇ ಎಂ. ಓ. ಅಥವಾ ಡಿ. ಡಿ. ಕಳಿಸಿ :

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಬೆಂಗಳೂರು - 560 001
✆ 22203580, 30578022 ಫ್ಯಾಕ್ಸ್: 30578023 E-mail : navakarnataka@vsnl.com

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302



# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಕೆದಿಲಾಯ, ಮೋನಪ್ಪ, ಎನ್. ಆರ್. ಬೊಮ್ಮಳ್ಳಿ,
ಶ್ರೀಹರಿ, ಸೃಜನ್, ಕಮಲಂ ಅರಸು

ಮುಖಪುಟ : ಕಾವೇರಿ. ವರ್ಣಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಕಾ**ವೇರಿ ನ್ಯಾಯಮಂಡಲಿಯ ತೀರ್ಪನ್ನು ಅಧಿಕೃತವಾಗಿ ಗೆಝೆಟ್‌ನಲ್ಲಿ ಪ್ರಕಟಿಸಿ ಆಜ್ಞೆ ಹೊರಡಿಸಬೇಕೆಂದು ಜಯಲಲಿತಾ ಆಗ್ರಹಿಸಿದ್ದುದಕ್ಕೆ ತಮಿಳುನಾಡು ಮುಖ್ಯಮಂತ್ರಿ ಕರುಣಾನಿಧಿ ಪತ್ರಿಕಾ ಜಾಹಿರಾತು ನೀಡಿ ತೊಂಭತ್ತು ದಿನಗಳ ಗಡುವು ಮುಗಿಯುವವರೆಗೆ ಕೇಂದ್ರ ಸರ್ಕಾರವು ಅದನ್ನು ಮಾಡಬರುವುದಿಲ್ಲವೆಂದು ಸೂಚಿಸಿದ್ದಾರೆ. ಕರ್ನಾಟಕದ ಜನರ ತಿಳಿವಳಿಕೆಗಾಗಿ ಸರ್ಕಾರವು ಈವರೆಗೆ ತೀರ್ಪಿನಲ್ಲಿ ಯಾವ ಅಂಶಗಳು ಪ್ರತಿಕೂಲವಾಗಿವೆಯೆಂಬುದನ್ನು ಸಾರ್ವಜನಿಕವಾಗಿ ಹೇಳಿಲ್ಲ. ಗುಟ್ಟಾಗಿ ನಡೆಯಬೇಕಾದ ಅವಶ್ಯಕತೆ ಸರ್ಕಾರಕ್ಕಿಲ್ಲ. ಹೋರಾಟ ಮಾಡುತ್ತಿರುವವರು ಯಾವ ಅಂಶಗಳಿಗಾಗಿ ಹೋರಾಟ ಮಾಡುತ್ತಿದ್ದಾರೆಂಬುದು ಸ್ವತಃ ಅವರಿಗೇ ಕೆಲವೇಳೆ ತಿಳಿದಿರುವುದಿಲ್ಲ. ತೀರ್ಪಿನ ಬಗ್ಗೆ ತನ್ನ ತಕರಾರು ಎಂತಹದ್ದೆಂಬುದನ್ನು ಸರ್ಕಾರವು ಕೂಡಲೆ ಬಹಿರಂಗಗೊಳಿಸಬೇಕು ಮತ್ತು ಅವಧಿ ಮುಕ್ತಾಯವಾಗುವ ಮುನ್ನ ತೀರ್ಪಿನ ಬದಲಾವಣೆಗಾಗಿ ಮಂಡಲಿಯ ಮುಂದೆ ವಾದ ಹೂಡಬೇಕು.

ಈಚಿನ ದಿನಗಳಲ್ಲಿ ನೀರಾವರಿ ತಜ್ಞರಾದ ಶ್ರೀ ಹೃಷೀಕೇಶ್, ಕ್ಯಾಪ್ಟನ್ ರಾಜಾ ರಾವ್, ಡಾ|| ಮಹದೇವಪ್ಪ ಮುಂತಾದವರು ತೀರ್ಪಿನ ಲೋಪಗಳನ್ನು ಕುರಿತು ಚರ್ಚೆಗಳಲ್ಲಿ ಭಾಗವಹಿಸಿದ್ದಾರೆ. ಅವರೆತ್ತಿರುವ ಆಕ್ಷೇಪಗಳನ್ನು ಸಂಕ್ಷೇಪವಾಗಿ ಹೀಗೆ ಸಂಗ್ರಹಿಸಬಹುದು : (ಅ) ಪರಿಸರ ರಕ್ಷಣೆಗೆಂದು ತಮಿಳುನಾಡಿಗೆ ನೀಡಲಾಗಿರುವ ಹತ್ತು ಟಿಎಂಸಿ ನೀರು ಅನಗತ್ಯ; ನೀರನ್ನು ಪೋಲುಮಾಡುವುದನ್ನು ನಿಲ್ಲಿಸಿದರೆ ಈ ಅಧಿಕ ಮೊತ್ತದ ನೀರು ಬೇಕಾಗುವುದಿಲ್ಲ. (ಆ) ಸಮುದ್ರಕ್ಕೆ ಹೋಗುವ ನಾಲ್ಕು ಟಿಎಂಸಿ ನೀರಿಗೆ ತಮಿಳುನಾಡೇ ಜವಾಬ್ದಾರಿ ಹೊರಬೇಕು; ಅದಕ್ಕಾಗಿ ಎಂದು ಅಷ್ಟು ನೀರನ್ನು ಮಂಡಲಿಯು ನೀಡಕೂಡದು; (ಇ) ೧೮೯೨ ಮತ್ತು ೧೯೨೪ರ ಒಪ್ಪಂದಗಳ ಬಾಧೆಯು ಸರ್ವೋಚ್ಚ ನ್ಯಾಯಾಲಯಕ್ಕೆ ಹೋದರೂ ತೀರುವುದಿಲ್ಲ; ನದಿಯು ಹರಿಯುವ ಮೇಲ್ಭಾಗದ ರಾಜ್ಯಗಳಿಗೆ ಅಂತರರಾಷ್ಟ್ರೀಯ ಕಾನೂನು ಮಾತ್ರ ರಕ್ಷಣೆ ನೀಡಬಲ್ಲದಾದ್ದರಿಂದ ಅದರ ಅನ್ವಯಕ್ಕೆ ಯತ್ನಿಸಬೇಕು. (ಅಂದರೆ·ನಮ್ಮ ಎರಡು ರಾಜ್ಯಗಳು ಬೇರೆ ಬೇರೆ ರಾಷ್ಟ್ರಗಳಾಗಬೇಕೆಂದು ಇದರರ್ಥವಲ್ಲ). (ಈ) ತಮಿಳುನಾಡಿನಲ್ಲಿ ೧೯೭೪ರ ನಂತರವೂ ಹೆಚ್ಚಿನ ಜಮೀನನ್ನು ನೀರಾವರಿಯಡಿ ತರಲಾಗಿದೆ; ಕರ್ನಾಟಕಕ್ಕೆ ಮಾತ್ರ ನಿರ್ಬಂಧ ಹೇರುವುದು ಸರಿಯಲ್ಲ. (ಉ) ನಲವತ್ತು ಸಾವಿರ ಎಕರೆಯನ್ನು ಮೀರದಂತೆ ಕಬ್ಬಿನ ಬೆಳೆಯನ್ನು ನಿಯಂತ್ರಿಸುವ ಮಂಡಲಿಯ ತೀರ್ಪು ಕರ್ನಾಟಕಕ್ಕೆ ಮಾರಕವಾದ್ದು; ಏಳೆಂಟು ಸಕ್ಕರೆ ಕಾರ್ಖಾನೆಗಳು ಇದರಿಂದಾಗಿ ಮುಚ್ಚಿಹೋಗುವುದು ಖಚಿತ. (ಊ) ಕರ್ನಾಟಕದ ನೀರಾವರಿ ಅವಶ್ಯಕತೆ ೪೦೪ ಟಿಎಂಸಿ ನೀರು; ಮಂಡಲಿ ಕೊಟ್ಟಿರುವುದು ೨೭೦ ಮಾತ್ರ. ಇದರಿಂದಾಗಿ ಮುಂದೆ ಯಾವ ಅಭಿವೃದ್ಧಿಗೂ ಅವಕಾಶವಿರುವುದಿಲ್ಲ. (ಋ) ಅಂತರ್ಜಲದ ಬಳಕೆಗೆ ತಮಿಳುನಾಡು ಒಪ್ಪಿದರೆ, ನೀರನ್ನು ಹೊರತೆಗೆಯಲು ವಿದ್ಯುಚ್ಛಕ್ತಿಯನ್ನು ನೀಡಿ ಕರ್ನಾಟಕದ ಪಾಲಿನ ನೀರನ್ನು ಹೆಚ್ಚಿಸಬಹುದು; ಇದನ್ನು ಕೇಂದ್ರ ಸರ್ಕಾರವು ಮಾಡಬೇಕು. (ೠ) ಭೂಮಿಯ ಕಬಳಿಕೆಯಾಗುತ್ತದೆಂಬ ಕಾರಣದಿಂದ ತಮಿಳುನಾಡು ಹೊಸ ಕಟ್ಟೆಗಳನ್ನು ಕಟ್ಟಲು ನಿರಾಕರಿಸುತ್ತಿದೆ. ಆದರೆ ಕಟ್ಟೆಗಳ ಅವಶ್ಯಕತೆ ಇದ್ದರೆ ಇದು ಅನಿವಾರ್ಯ. ತಮಿಳುನಾಡಿನ ಭೂಮಿಯ ಕಬಳಿಕೆಯನ್ನು ತಡೆಯಲು ಕರ್ನಾಟಕದಲ್ಲಿ ಕಟ್ಟೆಗಳನ್ನು ಕಟ್ಟಿ ನೀರು ಹಾಯಿಸಬೇಕೆನ್ನುವುದು ಕೆಟ್ಟ ತರ್ಕ. ಹಾಗೆ ಅಲ್ಲಿ ಕಟ್ಟೆ ಕಟ್ಟಲು ಇಚ್ಛಿಸದಿದ್ದಲ್ಲಿ ಬೆಳೆಗಳ ಪ್ರಮಾಣವನ್ನು ತಗ್ಗಿಸಬೇಕೇ ವಿನಾ ಕರ್ನಾಟಕಕ್ಕೆ ನೀರಿನ ಪಾಲನ್ನು ಖೋತಾ ಮಾಡುವುದು ಒಪ್ಪಬಹುದಾದ ವಿಚಾರವಲ್ಲ. (ಎ) ರಾಷ್ಟ್ರೀಯ ನೀರಿನ ನಿಯಮಾವಳಿಗಳನ್ನು ಕೇಂದ್ರವು ರೂಪಿಸಬೇಕು. ಕೇವಲ ೨೦೧೧ರ ಜನಸಂಖ್ಯೆಯನ್ನು ಪರಿಗಣನೆ ಮಾಡಿ ನೀರಿನ ಹಂಚಿಕೆಗೆ ಸೂತ್ರ ನಿರೂಪಿಸುವುದು ಶುದ್ಧಾಂಗ ತಪ್ಪು. ಬೆಂಗಳೂರಿನಂತಹ ನಗರದಲ್ಲಿ ಕಾವೇರಿ ಪಾತ್ರಕ್ಕೆ ಸೇರುವುದೆನ್ನಲಾದ ನಗರದ ಮೂರನೆಯ ಒಂದು ಭಾಗಕ್ಕೆ ಮಾತ್ರ ಮಂಡಲಿಯು ನೀರನ್ನು ಕೊಟ್ಟಿದೆ. ಇನ್ನು ಮಿಕ್ಕ ಭಾಗಕ್ಕೆ ಅಂತರ್ಜಲ ಸಾಕಾಗುವುದಿಲ್ಲವೆಂಬುದನ್ನು ಮಂಡಲಿ ತಿಳಿದುಕೊಳ್ಳಬೇಕು ಮತ್ತು ಹಂಚಿಕೆಯಲ್ಲಿ ಇನ್ನೂ ಹೆಚ್ಚಿನ ನೀರನ್ನು ಬೆಂಗಳೂರಿಗೆ ಕೊಡಬೇಕು. ಕೃಷ್ಣಾ ನದಿಯಿಂದ ಕರ್ನಾಟಕವು ಮದ್ರಾಸಿನ ನೀರು ಯೋಜನೆಗೆಂದು ಐದು ಟಿಎಂಸಿ ನೀರು ಕೊಡಲು ಒಪ್ಪಿರುವಾಗ ಮಂಡಲಿಯು ಬೆಂಗಳೂರಿಗೆ ನೀರು ಕೊಡಬೇಕೆಂದು ತಮಿಳುನಾಡಿಗೆ ಸೂಚಿಸಬೇಕು. (ಏ) ಕಡಿಮೆ ನೀರಿನಿಂದ ಕೃಷಿ ಮಾಡಲು ಮಡಗಾಸ್ಕರ್ ಪದ್ಧತಿ ಮತ್ತು ಎಸ್.ಆರ್.ಐ. ಪದ್ಧತಿಗಳನ್ನು ಅನುಸರಿಸುವಂತೆ ತಮಿಳುನಾಡನ್ನು ಒತ್ತಾಯಿಸಬೇಕು. (ಐ) ಈಗಿನ ತೀರ್ಪನ್ನು ಕಾರ್ಯಗತಗೊಳಿಸಲು ಯಾರಿಂದಲೂ ಸಾಧ್ಯ

೯ನೇ ಪುಟಕ್ಕೆ




ಸಂಪುಟ-೮ ಸಂಚಿಕೆ-೯ ಏಪ್ರಿಲ್ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**



# ಕೇಂದ್ರ ಬಜೆಟ್ – ೨೦೦೭ :
# ಅರ್ಥವ್ಯವಸ್ಥೆ ಸರ್ಕಾರದ ಹಿಡಿತದಲ್ಲಿಲ್ಲ ಎಂಬುದರ ಸ್ಪಷ್ಟೀಕರಣ

ಜನಸಾಮಾನ್ಯರನ್ನು ತಲ್ಲಣಗೊಳಿಸುವ ಅನೇಕ ಏರುಪೇರುಗಳು ಬಂಡವಾಳ ವ್ಯವಸ್ಥೆಯಲ್ಲಿ ಪದೇ ಪದೇ ತಲೆದೋರುತ್ತಲೇ ಇರುತ್ತವೆ. ಸಾರ್ವಜನಿಕ ಹಣಕಾಸು ಎಂಬ ಅರ್ಥಶಾಸ್ತ್ರೀಯ ಸಿದ್ಧಾಂತ ವ್ಯವಸ್ಥೆಯೊಳಗೇ ತಾತ್ಕಾಲಿಕವಾಗಿಯಾದರೂ ಕ್ಷೋಭೆಯ ಪರಿಸ್ಥಿತಿಯನ್ನು ತಡೆಗಟ್ಟುವ, ಮುಂದೂಡುವ ಕ್ರಮ ಬಂಡವಾಳ ವ್ಯವಸ್ಥೆಯನ್ನು ಒಂದಿಷ್ಟು ನಿಯಂತ್ರಿಸದಿದ್ದರೆ ಅದು ಪ್ರಜಾಪ್ರಭುತ್ವ ವಿರೋಧೀ ನೆಲೆಗೆ, ಫ್ಯಾಸಿಸ್ಟ್ ನೆಲೆಗೆ, ಸರಿಯುತ್ತದೆ ಎಂಬುದನ್ನು ನೀತಿ ಗುರುತಿಸುತ್ತದೆ. ಸಾರ್ವಜನಿಕ ಹಣಕಾಸು ನೀತಿಯ ಅಗತ್ಯವೇ ಇಲ್ಲ; ಸರ್ಕಾರ ಅರ್ಥ ವ್ಯವಸ್ಥೆಯಿಂದ ದೂರ ಉಳಿಯಬೇಕು; ಅದು ವ್ಯವಸ್ಥೆಗೆ ಪೂರಕವಾದ ಕಾನೂನು ರಕ್ಷಣೆ ಒದಗಿಸಿದರೆ ಸಾಕು; ಮಿಕ್ಕಿದ್ದೆಲ್ಲವನ್ನೂ ಮಾರುಕಟ್ಟೆಯಲ್ಲಿ ನಿರ್ಧರಿಸಲಾಗುತ್ತದೆ ಎಂಬ ಧೋರಣೆ ಇಂದಿನದು; ೧೯೯೧ರಿಂದೀಚೆಗೆ ಈಗಿನ ನೀತಿಯನ್ನು ಗದ್ದುಗೆಗೆ ಏರಿಸಿದ್ದು, ಚಿದಂಬರಂ ಅವರ ಈಗಿನ ಬಜೆಟ್ ಸರ್ಕಾರವನ್ನು ಖಾಸಗೀಗೊಳಿಸುವ ಈ ಪ್ರಕ್ರಿಯೆಯನ್ನು ಸಂಪೂರ್ಣಗೊಳಿಸಿದೆ.

ಸಾರ್ವಜನಿಕ ಹಣಕಾಸು ನೀತಿಯ ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳುವುದು ಎಂದರೆ ಯೋಜಿತ ಆರ್ಥಿಕ ವಿಕಾಸ ಮಾರ್ಗವನ್ನು ಕೈಬಿಡುವುದು; ಆರ್ಥಿಕ ಅಭಿವೃದ್ಧಿಯು ಖಾಸಗೀಕ್ಷೇತ್ರದ ಸಹಜ ವ್ಯಾಪಾರವಾಗುವುದು, ಬೆಲೆ ಏರಿಕೆ, ಹಣದುಬ್ಬರ, ನಿರುದ್ಯೋಗ ಮುಂತಾದುವುಗಳ ಪರಿಹಾರ ಸರ್ಕಾರದ ಜವಾಬ್ದಾರಿ ಅಲ್ಲ ಎನ್ನುವ ಧೋರಣೆ. ಎಂದಿನಂತೆ ಈ ಬಜೆಟ್‌ನಲ್ಲೂ ಬೆಲೆ ಏರಿಕೆ, ಹಣದುಬ್ಬರ, ಕೃಷಿಕ್ಷೇತ್ರದ ಕುಸಿತ ಮುಂತಾದುವನ್ನು ಕುರಿತು ಕೇವಲ ಅನುತಾಪವಿದೆ ಅಥವಾ ಅರೆಮನಸ್ಸಿನ ಪ್ರಯತ್ನಗಳಿವೆ. ಈ ಸಮಸ್ಯೆಗಳ ಮೇಲೆ ರೂಢಮೂಲ ಪ್ರಭಾವ ಬೀರುವಷ್ಟು ಕಾರ್ಯಕ್ರಮಗಳನ್ನು ರೂಪಿಸುವುದೆಂದರೆ ಅದಕ್ಕೆ ಅಗಾಧ ಪ್ರಮಾಣದ ಸಂಪನ್ಮೂಲಗಳನ್ನು ಗಳಿಸಬೇಕು. ವಿಸ್ತರಿಸುತ್ತಿರುವ ಮಾರುಕಟ್ಟೆಯ ಸ್ವರೂಪದಿಂದಾಗಿ ಇರುವ ತೆರಿಗೆ ಮಟ್ಟದಲ್ಲಿ ಅಥವಾ ಇನ್ನೂ ಕೆಳಮಟ್ಟದಲ್ಲೇ ಸರ್ಕಾರದ ಕನಿಷ್ಠ ಹೊಣೆಗಾರಿಕೆಯ ನಿರ್ವಹಣೆಗೆ ಬೇಕಾಗುವಷ್ಟು ಹಣ ಸಂಗ್ರಹವಾಗುತ್ತಿದ್ದು, ಒಂದಿಷ್ಟು ತೆರಿಗೆ ಹೆಚ್ಚುಮಾಡಿ ಮತ್ತಷ್ಟು ಹಣ ಸಂಗ್ರಹಿಸುವ ಒಲವು ಸರ್ಕಾರಕ್ಕಿಲ್ಲ. ಕಳೆದ ಹಲವಾರು ವರ್ಷಗಳಿಂದ ಶೇ. ೨೦೦-೩೦೦ರಷ್ಟು ಅಧಿಕ ಲಾಭ ಗಳಿಸಿದವರಿಂದ ಮತ್ತಷ್ಟು ತೆರಿಗೆ ವಸೂಲಿ ಮಾಡುವುದರಿಂದ ಈಗಿನ ಪ್ರಗತಿಯ ದರವೇನೂ ಕಡಿಮೆಯಾಗದು. ರಾಜಕೀಯವಾಗಿ ಒಪ್ಪಿಕೊಂಡಿರುವ ರಾಷ್ಟ್ರೀಯ ಸಾಮಾನ್ಯ ಕನಿಷ್ಠ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಅಗತ್ಯವಿರುವಷ್ಟು ಸಂಪನ್ಮೂಲವನ್ನು ಸಂಗ್ರಹಿಸುವ ಇಚ್ಛೆಯೇ ಬಜೆಟ್ಟಿನಲ್ಲಿ ವ್ಯಕ್ತವಾಗಿಲ್ಲ. ಬೂರ್ಷ್ವಾಪರ ಅರ್ಥನೀತಿಗೆ ಭಾಜಪದ ಸಹಮತ ಸಂಪೂರ್ಣವಿದ್ದು, ಕಾಂಗ್ರೆಸ್ ಪಕ್ಷಕ್ಕೆ ತನ್ನ ಅಧಿಕಾರಕ್ಕೆ ಎಡಪಕ್ಷಗಳು ಸಮರ್ಥನೆಯನ್ನು ಹಿಂತೆಗೆದುಕೊಂಡಾರೆಂಬ ಭೀತಿಯೂ ಇದ್ದಂತಿಲ್ಲ. ಕೇವಲ ದಂಡೆಯ ಮೇಲೆ ನಿಂತು ಪರಿವೀಕ್ಷಿಸುವುದು ಬಿಟ್ಟರೆ, ಸಾಮಾನ್ಯ ಜನರ ಪರವಾಗಿ ಮಧ್ಯೆ ಪ್ರವೇಶಿಸುವ ಯಾವ ಒಲವೂ ಕಂಡುಬಂದಿಲ್ಲ. ಅಲ್ಲೊಂದು ಇಲ್ಲೊಂದು ಒತ್ತಡಕ್ಕೆ ಮಣಿದ ಕ್ರಮಗಳು ಕಂಡುಬಂದರೂ ಅವು ಕೇವಲ ತೋರಿಕೆಯವು ಅಥವಾ ಅಂಥ ಕ್ರಮಗಳು ಬಂಡವಾಳ ವ್ಯವಸ್ಥೆಯ ರಕ್ಷಣೆಗೆ ಪೂರಕವೆಂಬ ಗ್ರಹಿಕೆಯಿಂದ ರೂಪಿಸಿದವು.

ಈ ಸಲದ ಬಜೆಟ್ಟಿನಲ್ಲಿ ಇರುವ ಹಣದ ಬಹುಭಾಗವನ್ನು ರಕ್ಷಣಾಖಾತೆಗೆ ಮೀಸಲಾಗಿಡಲಾಗಿದೆ. ರಕ್ಷಣಾ ಖಾತೆ ತನ್ನ ಶಸ್ತ್ರಾಸ್ತ್ರ ವ್ಯವಹಾರದ ಪೂರೈಕೆಗೆ ದಿನೇ ದಿನೇ ಖಾಸಗೀ ಕ್ಷೇತ್ರವನ್ನೇ ಅವಲಂಬಿಸುತ್ತಿದ್ದು, ಇದು ಅವರಿಗೆ ಖುಷಿಕೊಡುವ ವಿಷಯವೇ. ಉಳಿದಂತೆ ಬಹುಭಾಗ ಹಣವನ್ನು ಕೃಷಿ, ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಕ್ಕೆ ಹಂಚಲಾಗಿದೆ. ಈ ಕ್ಷೇತ್ರಗಳ ಸಮಸ್ಯೆಯ ತೀವ್ರತೆಯನ್ನು ಗಮನಿಸಿದರೆ, ಅವುಗಳ ಮೇಲೆ ಕನಿಷ್ಠ ಪ್ರಭಾವ ಬೀರಲೂ ಸಾಕಷ್ಟು ಬಂಡವಾಳ ಬೇಕಿದ್ದು, ಈಗ ಲಭ್ಯವಿರುವ ಮೊತ್ತ ಅಂಥ ಹಿರಿಯ ಮೊತ್ತವಲ್ಲ. ಬರೇ ಬೃಹದುದ್ಯಮ ಮತ್ತು ಐಟಿ-ಬಿಟಿ ಕ್ಷೇತ್ರಗಳಲ್ಲಿ ಬೆಳೆಯುತ್ತಿರುವ, ಸಮಾಜದ ಎಲ್ಲಾ ಸ್ತರಗಳನ್ನು ಒಳಗೊಳ್ಳದ, ಆರ್ಥಿಕ ವ್ಯವಸ್ಥೆ ಬದುಕುವುದೇ ಮಾರುಕಟ್ಟೆಯಲ್ಲಿನ ಬೇಡಿಕೆಯ ಆಧಾರದ ಮೇಲೆ. ಕಳೆದ ಹದಿನೈದು ವರ್ಷಗಳಲ್ಲಿ ನಗರ ಕೇಂದ್ರಿತ ಮಧ್ಯಮ ವರ್ಗ ಅಂಥ ಗ್ರಾಹಕ ಸಮೂಹವನ್ನು ಒದಗಿಸಿದ್ದು ಈಗ ಬಂಡವಾಳ ವ್ಯವಸ್ಥೆಯೊಳಗೆ ಗ್ರಾಹಕ ಸಂಸ್ಕೃತಿ ಗ್ರಾಮೀಣ ಸಮೂಹಕ್ಕೆ ವಿಸ್ತರಿಸದೆ ಮಾರುಕಟ್ಟೆಯ ಮತ್ತಷ್ಟು ವಿಕಾಸ ಸಾಧ್ಯವಿಲ್ಲ. ಹೀಗಾಗಿ ಗ್ರಾಮೀಣ ಕ್ಷೇತ್ರ, ಶಿಕ್ಷಣ, ಆರೋಗ್ಯದ ಕುರಿತ ಬಜೆಟ್ ಮೀಸಲು ಅಂತಹ ಕ್ರಾಂತಿಕಾರಿ ಬೆಳವಣಿಗೆಯೇನೂ ಅಲ್ಲ. ಅಲ್ಲೂ ಹಣ ಖರ್ಚಾಗುತ್ತಿದೆಯೇ ವಿನಾ ಇಂದಿನ ವ್ಯವಸ್ಥೆಯಲ್ಲಿ ಫಲಿತಾಂಶ ಯಾವಾಗಲೂ ನಗಣ್ಯವೇ. ಇನ್ನು ಉತ್ಪಾದನೆಯ ವಿಕಾಸಕ್ಕೆ ನೆರವಾಗುವಂಥ ಕ್ರಮಗಳಾಗಿ ಕೆಲವು ಕೈಗಾರಿಕೆಗಳ ಮೂಲವಸ್ತುಗಳ ಸೀಮಾಶುಲ್ಕಗಳ ಕಡಿತ ಮುಂತಾದ ಕ್ರಮಗಳಿವೆ. ಕೃಷಿಕ್ಷೇತ್ರದಲ್ಲಿ ಉತ್ಪಾದನೆ ಕುಸಿದಿದ್ದು, ಮುಖ್ಯವಾಗಿ ಸಾಮಾನ್ಯ ಗ್ರಾಹಕರಿಗೆ ಆಹಾರ ಪದಾರ್ಥಗಳ ಪೂರೈಕೆಯಲ್ಲಿ ಕೊರತೆಯಾಗಿರುವುದು ಬೆಲೆ ಏರಿಕೆಗೆ ಕಾರಣವೆಂದು ಎಲ್ಲರೂ ಒಪ್ಪಿರುವ ವಿಷಯ. ಸರ್ಕಾರದ ಅನೇಕ ಸುಧಾರೀಕರಣ ನೀತಿಗಳ ಪರಿಣಾಮವಾಗಿ, ವ್ಯವಸ್ಥೆಗೆ ಬಂಡವಾಳ ಒದಗಿಸುವ ನೀತಿಯಾಗಿ, ಬಡ್ಡಿದರ ಕಡಿತ ಮುಂತಾದ ಕ್ರಮಗಳಿಂದಾಗಿ ಹೆಚ್ಚಿದ ಹಣದ ಪೂರೈಕೆ ವಿಪರೀತವಾಗಿದೆ. ಅದು ಹಣದುಬ್ಬರವಾಗಿ, ಈಗಾಗಲೇ ಕೊರತೆಯಿರುವ ವಸ್ತುಗಳ ಮೇಲೆ ವಿಪರೀತ ಬೇಡಿಕೆ ಉಂಟುಮಾಡಿದೆ. ಅದು ಬೆಲೆ ಏರಿಕೆಯಾಗಿ ಪರಿಣಮಿಸಿದೆ ಎನ್ನುವುದು ಸ್ಪಷ್ಟ. ಆದರೂ ಹಣದುಬ್ಬರದಿಂದಲೇ ಆರ್ಥಿಕ ವಿಕಾಸ ಶೇ. ೯ರಷ್ಟಾದದ್ದು, ಈ ಗತಿಯನ್ನು ತಡೆಯಬಾರದು, ಏನಿದ್ದರೂ ಪೂರೈಕೆಯ ಕಡೆ ಗಮನ ನೀಡುವುದೇ ಸರಿ ಎಂಬುದು ಚಿದಂಬರಂ ಅವರ ಅಭಿಪ್ರಾಯ !

ಆಹಾರ, ಖಾದ್ಯತೈಲ ಮುಂತಾದವುಗಳ ಆಮದೂ ಸೇರಿದಂತೆ ಬಜೆಟ್ಟಿನಲ್ಲಿ ಸೂಚಿಸಿರುವ ಯಾವುದೇ ಕ್ರಮಗಳು, ವಾಸ್ತವದಲ್ಲಿ ಕಾರ್ಯಗತಗೊಂಡು ಬೆಲೆಯ ಮೇಲೆ ಪರಿಣಾಮ ಬೀರಬೇಕಾದರೂ ಒಂದೆರಡು ವರ್ಷಗಳೇ ಬೇಕಾಗುತ್ತವೆ. ಹೀಗಾಗಿ ಬರುವ ಒಂದೆರಡು ವರ್ಷಗಳಾದರೂ ಹಣದುಬ್ಬರ ಮತ್ತು ಬೆಲೆ ಏರಿಕೆಯ ಬೇಗೆಗೆ ಸಾಮಾನ್ಯ ಜನ ತುತ್ತಾಗುವುದು ಸ್ಪಷ್ಟ. ಪ್ರಧಾನ ಮಂತ್ರಿ ಹಣದುಬ್ಬರ ತಡೆಯಬೇಕೆಂದರೆ ಚಿದಂಬರಂ ಅದಕ್ಕೆ ವಿರೋಧವಾಗಿದ್ದಾರೆ. ಹಣದುಬ್ಬರ ತಡೆಯಲು ಬಡ್ಡಿದರ ಹೆಚ್ಚಿಸಲು ರಿಸರ್ವ್ ಬ್ಯಾಂಕ್ ಮುಂದಾದರೆ ಅದಕ್ಕೂ ಚಿದಂಬರಂ ಒಪ್ಪಿಗೆಯಿಲ್ಲ. ಆಹಾರ ಪದಾರ್ಥಗಳಲ್ಲಿ ವಾಯಿದೆ ಮಾರುಕಟ್ಟೆಯ ವ್ಯವಸ್ಥೆ ಬೇಡ, ಅದರಿಂದ ಬೆಲೆ ಏರುತ್ತಿದೆ ಎಂಬುದು ಸಾಬೀತಾಗಿದ್ದರೂ ಚಿದಂಬರಂ ಅವರಿಗೆ ಅದರಲ್ಲಿ

ವಿಶ್ವಾಸವಿಲ್ಲ. ಇವರಿಬ್ಬರ ನಡುವೆ ಕಾಂಗ್ರೆಸ್ ಪಕ್ಷ ರಾಜಕೀಯವಾಗಿ ಸೊರಗಿದರೆ ಆಶ್ಚರ್ಯವಿಲ್ಲ. ಈ ಬಜೆಟ್ಟಿನಿಂದ ಒಳಗೊಳಗೇ ಸಂತೋಷಪಡುತ್ತಿರುವವರೆಂದರೆ ಭಾರತದಲ್ಲಿ ಈಗಾಗಲೇ ವಿಶ್ವದ ನೂರುಮಂದಿ ಬಿಲಿಯನೈರ್ಸ್ ಗುಂಪಿಗೆ ಹೊಸದಾಗಿ ಸೇರಿರುವ ೩೬ ಜನ ಮತ್ತು ಅವರ ಸಂತತಿ-ಪರಿವಾರದವರು. ಇವರು ನಿಯಂತ್ರಿಸುವ ಮಾಧ್ಯಮಗಳಲ್ಲಿ ಪದೇ ಪದೇ ತಾವು ತೆರಿಗೆ ನೀಡುವವರು, ಆದ್ದರಿಂದ ಸರ್ಕಾರವನ್ನು ನಡೆಸುವವರು ಎನ್ನುವ ಧೋರಣೆ ವ್ಯಕ್ತವಾಗುತ್ತಿದೆ. ವಾಸ್ತವವೇನು ? ಸರ್ಕಾರದ ಆದಾಯದಲ್ಲಿ ಕಾರ್ಪೊರೇಷನ್‌ಗಳು ಕೊಡುವ ತೆರಿಗೆ ಕೇವಲ ಶೇ. ೨೧. ಎಲ್ಲ ವರ್ಗದ ಜನರನ್ನು ತಟ್ಟುವ ಆದಾಯ ಕರ, ಸೀಮಾಶುಲ್ಕ, ಎಕ್ಸೈಸ್ ಸುಂಕ, ಸೇವಾ ತೆರಿಗೆ ಇವುಗಳ ಪಾಲು ಶೇ. ೪೯. ಸಾರ್ವಜನಿಕರಿಂದ ಸಾಲದ ಭಾಗ ಶೇ.೧೯. ಹೀಗಿರುವಾಗ ಈ ಉದ್ಯಮಿಗಳಿಗೇಕೆ ತಾವೇ ಸರ್ಕಾರ ನಡೆಸುವವರು ಎನ್ನುವ ಈ ಅಹಂಕಾರ ? ಸಾಧಾರಣ ಜನ ತಮಗೆ ಬಾಧಕವಾದ ನೀತಿಯನ್ನೇ ಅನುಸರಿಸುವ ಸರ್ಕಾರವನ್ನು ನಡೆಸಲು ತಾವೇ ನೀಡುವ ತೆರಿಗೆಯ ಪಾತ್ರವೇ ಮಹತ್ವದ್ದು. ಆದರೆ ಅವರ ಮತ ರಾಜಕೀಯ ಶಕ್ತಿಯಾಗಿ ಪರಿವರ್ತಿತವಾಗದೆ ಇರುವುದೇ ಬೂರ್ಷ್ವಾ ಪ್ರಜಾಪ್ರಭುತ್ವದ ಲಕ್ಷಣ. ಲಲ್ಲೂ ಪ್ರಸಾದರ ಆಳ್ವಿಕೆಯಲ್ಲಿ ರೈಲು ವ್ಯವಸ್ಥೆಯಲ್ಲಿ ಸ್ವಾಗತಾರ್ಹ ಬದಲಾವಣೆಗಳಾಗಿರುವುದು ವಾಸ್ತವ. ಸಾಮಾನ್ಯ ಜನರಿಂದಲೂ ದಕ್ಷನಾಯಕತ್ವ ಎದ್ದುಬರಬಹುದು ಎಂದು ನಂಬದ ಈ ವ್ಯವಸ್ಥೆ ತನ್ನ ಮಾಧ್ಯಮಗಳ ಮೂಲಕ ಲಲ್ಲೂ ಪ್ರಸಾದರನ್ನು ಲೇವಡಿ ಮಾಡುತ್ತದೆ. ಇಂದಿನ ಚುನಾವಣಾ ವ್ಯವಸ್ಥೆಯಲ್ಲಿ ಪ್ರತಿಬಾರಿಯೂ ಅಧಿಕಾರ ಮೇಲ್ನೋಟಕ್ಕೆ ಹಸ್ತಾಂತರವಾಗುತ್ತಿರುವಾಗ ಒಂದು ವಿಷಯವನ್ನು ಗಮನಿಸಬಹುದು. ಸರ್ಕಾರದ ಬಹುಭಾಗ ನೀತಿಗಳು ಪರಿಣಾಮ ಬೀರಲು ಒಂದೆರಡು ವರ್ಷಗಳೇ ಬೇಕಾಗುತ್ತವೆ. ಹೀಗಾಗಿ ಹಿಂದೆಂದೋ ಪ್ರಾರಂಭಿಸಿದ ಪ್ರಕ್ರಿಯೆಯ ಪರಿಣಾಮ ಸ್ಪಷ್ಟವಾಗಲು ಮುಂದೆ ಬರುವ ಮತ್ತೊಬ್ಬ ಮಂತ್ರಿಯ ಕಾಲ ಬೇಕಾಗುತ್ತದೆ. ಆದರೆ ಕೇಂದ್ರ ಸರ್ಕಾರದ ಅರ್ಥ ಸಚಿವಾಲಯದ ಮಟ್ಟಿಗೆ ಹೇಳುವುದಾದರೆ, ಯಾವುದೇ ಪಕ್ಷ ಅಧಿಕಾರದಲ್ಲಿದ್ದರೂ, ಅಲ್ಲಿಯ ನೀತಿ ಮಾತ್ರ ಏಕಮುಖವಾಗಿರುವಂತೆ ಕಳೆದ ಹದಿನೈದು ವರ್ಷಗಳಿಂದ, ಐಎಮ್‌ಎಫ್, ವರ್ಲ್ಡ್ ಬ್ಯಾಂಕ್‌ಗಳು ತರಪೇತಿ ನೀಡಿದ ಅರ್ಥ ಶಾಸ್ತ್ರೀಯ ಅಧಿಕಾರಿಗಳ ಬಲದಿಂದ ಕಾಯ್ದುಕೊಳ್ಳಲಾಗಿದೆ.

ಕೇಂದ್ರ ಬಜೆಟ್ಟಿನ ಒಟ್ಟಾರೆ ಹಣಕಾಸಿನ ಪ್ರಮಾಣ ರಾಷ್ಟ್ರದ ಆದಾಯದ ಶೇ. ೧೦ರಷ್ಟಿರಬಹುದಷ್ಟೆ. ಅನೇಕ ಕಾರ್ಪೊರೇಷನ್‌ಗಳ ಹಾಗೂ ಕೆಲವು ಶ್ರೀಮಂತರ ವಹಿವಾಟು ಇಂದು ಇದಕ್ಕಿಂತ ಹೆಚ್ಚಿನದು ಹಾಗೂ ರಾಜ್ಯಗಳಲ್ಲಿ ವಿವಿಧ ರಾಜಕೀಯ ಪಕ್ಷಗಳು ಅಧಿಕಾರದಲ್ಲಿದ್ದು, ಅವುಗಳ ಬಜೆಟ್‌ಗಳೂ ಕೇಂದ್ರದ ಬಜೆಟ್ಟೂ ಪರಸ್ಪರ ವಿರೋಧಿ ನೀತಿಗಳಾದಾಗಲಂತೂ ಹಣಕಾಸು ವ್ಯವಸ್ಥೆಯಲ್ಲಿನ ಅರಾಜಕತೆಯ ಚಿತ್ರ ಸಂಪೂರ್ಣವಾಗುತ್ತದೆ. ಆದ್ದರಿಂದ ಕೇಂದ್ರದ ಬಜೆಟ್ ಆರ್ಥಿಕತೆಯ ಮೇಲೆ ನಿರ್ಣಾಯಕ ಪರಿಣಾಮ ಬೀರುವ ಕಾಲ ಹೋಯಿತು. ಉತ್ತಮ ಬಜೆಟ್ಟು ಅಂದರೆ ಅದು ಲಭ್ಯವಿರುವ ಆದಾಯವನ್ನು ಅಗತ್ಯ ಸಾರ್ವಜನಿಕ ಸೇವೆಗೆ ಹಂಚಬೇಕು; ನಗರ ಮತ್ತು ಗ್ರಾಮೀಣ, ಹಿಂದುಳಿದ ಮತ್ತು ಮುಂದುವರಿದ ಪ್ರದೇಶಗಳನ್ನು ಗಮನಿಸಿ ಹಂಚಬೇಕು; ಹಿಂದುಳಿದ ವರ್ಗದವರನ್ನು, ಅಲ್ಪಸಂಖ್ಯಾತರನ್ನು, ದಲಿತರನ್ನು ಗಮನಿಸಬೇಕು; ಲಿಂಗಭೇದದ ಶೋಷಣೆಯನ್ನು ಗಮನಿಸಬೇಕು; ನಿರುದ್ಯೋಗಿ, ಉದ್ಯೋಗಿ, ಬಡತನರೇಖೆಯ ಕೆಳಗಿನ ಮತ್ತು ಮೇಲಿನವರನ್ನು ಗಮನಿಸಬೇಕು. ಇದಕ್ಕೆಲ್ಲಾ ಬೇಕಾದಷ್ಟು ಆದಾಯವನ್ನು ಬೆಳವಣಿಗೆಗೆ ಧಕ್ಕೆಯಾಗದಂತೆ ಸಂಗ್ರಹಿಸಬೇಕು. ನಿರಂತರ ಆದಾಯ ವೃದ್ಧಿಯಾಗುವಂತೆ ತೆರಿಗೆ ಸ್ವರೂಪವನ್ನು ರಚಿಸಬೇಕು. ಕೊನೆಯದೆರಡಕ್ಕೂ ಗಮನ ನೀಡದ ಬಜೆಟ್ ಹೇಗೆ ತಾನೆ ಉಳಿದ ಜವಾಬ್ದಾರಿಗಳನ್ನು ನಿರ್ವಹಿಸಲಾದೀತು ? ಹೊಸ ಡಿವಿಡೆಂಡ್ ಟ್ಯಾಕ್ಸ್ ತಪ್ಪಿಸಿಕೊಳ್ಳಲು ದೇಶದ ಎಲ್ಲಾ ಉದ್ಯಮಿಗಳೂ ಮಾರ್ಚ್ ೩೧ರೊಳಗೆ ಡಿವಿಡೆಂಡ್ ಪ್ರಕಟಿಸಲು ಮುಂದಾಗಿರುವಾಗ ಈ ಕ್ಷೇತ್ರದವರಿಂದ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಗೆ ಏನು ತಾನೆ ನಿರೀಕ್ಷಿಸಬಹುದು ? ಪ್ರೀತಿಗೆ ಬೆಳೆಸುವ ಸ್ಥಿತಿವಂತರ ನಾಯಿ ಬೆಕ್ಕುಗಳ ಆಮದುಮಾಡಿಕೊಂಡ ಆಹಾರಕ್ಕೆ ತೆರಿಗೆಯಲ್ಲಿ ಕಡಿತ ನೀಡುವ, ನಗರವಾಸಿಗಳ ಪೇಯಗಳಿಗೆ ತೆರಿಗೆ ಕಡಿಮೆ ಮಾಡುವ ನೀತಿಯಲ್ಲಿ ಎಲ್ಲರನ್ನೂ ಒಳಗೊಳ್ಳುವ ನೀತಿಯನ್ನು ಹೇಗೆ ತಾನೆ ಗುರುತಿಸುವುದು ? ಅಗಾಧ ಪ್ರಮಾಣದ ಹಣವನ್ನು ಯಾಚಿಸುವ ಮೂಲಭೂತ ಸೌಕರ್ಯಗಳ ವಿಕಾಸವಾಗದೆ, ನಿರಂತರ ಆರ್ಥಿಕ ಬೆಳವಣಿಗೆ ಸಾಧ್ಯವಾಗದು. ಆದರೆ ಈ ಕ್ಷೇತ್ರದ ಹೂಡಿಕೆಯಲ್ಲಿ ತಕ್ಷಣದಲ್ಲಿ ವಿಪರೀತ ಲಾಭವಿಲ್ಲ. ಖಾಸಗಿ ಕ್ಷೇತ್ರಕ್ಕೆ ಇದು ಆಕರ್ಷಕವಲ್ಲ. ಸರ್ಕಾರಕ್ಕೆ ಆದಾಯದ ಕೊರತೆ. ಇದಕ್ಕೆ ಪರಿಹಾರವೇನು ? ಅಗತ್ಯ ವಸ್ತುಗಳ ಬೆಲೆ ನಿಯಂತ್ರಿಸುವ ಕಾನೂನುಗಳನ್ನು ಕೈಬಿಟ್ಟಿರುವವರಿಂದಾಗಿ ಸಿಮೆಂಟ್ ಮಾಲೀಕರ ಮುಂದೆ ಅಂಗಲಾಚಿಬೀಳುವ ಪರಿಸ್ಥಿತಿ ಬಂದಿರುವಾಗ, ಸರ್ಕಾರದಿಂದ ಬೆಲೆ ನಿಯಂತ್ರಿಸಲು ಸಾಧ್ಯವೇ ? ಇಂದಿನ ಬೆಲೆ ಏರಿಕೆಯ ಪರಿಸ್ಥಿತಿ ಕೇವಲ ಒಂದೆರಡು ಆಹಾರ ಪದಾರ್ಥಗಳ ಕೊರತೆಯ ಪರಿಣಾಮ ಎನ್ನುವುದು ಗಂಭೀರ ಪರಿಸ್ಥಿತಿಯ ಸರಳೀಕರಣ. ವಾಸ್ತವದಲ್ಲಿ ಹದಿನೈದು ವರ್ಷಗಳಿಂದ ಚಾಲ್ತಿಯಲ್ಲಿರುವ ಖಾಸಗೀಕರಣ, ಉದಾರೀಕರಣ, ಜಾಗತೀಕರಣ ಪ್ರಕ್ರಿಯೆಯ ಪರಿಣಾಮ ಇದು. ಮಾರುಕಟ್ಟೆಯ ಪರಸ್ಪರ ವೈರುದ್ಧ್ಯಮಯ ಪ್ರತಿಗಾಮಿ ಶಕ್ತಿಗಳು ಹತೋಟಿ ತಪ್ಪಿ ಬೆಳೆದಿರುವುದನ್ನು ನಿಯಂತ್ರಿಸಲಾಗಿಲ್ಲ. ಐಎಮ್‌ಎಫ್ ಹಾಕಿದ ಗೆರೆಯನ್ನು ಮೀರದ ಚಿದಂಬರಂ ಬಜೆಟ್ಟಿನ ಅಂತರ್ಗತ ವಿತ್ತೀಯ ಕೊರತೆಯನ್ನು ಅದರ ಆಣತಿಯಂತೆ ಕಡಿಮೆ ಮಾಡಿದ್ದಾರೆ. ಸರ್ಕಾರದ ಲೆಕ್ಕ ಅವರ ದೃಷ್ಟಿಯಿಂದ ಸಮರ್ಪಕ ಮತ್ತು ಹಣದುಬ್ಬರಕ್ಕೆ ಸರ್ಕಾರವನ್ನು ಆಪಾದಿಸಬೇಕಾಗಿಲ್ಲ. ಈ ಸಾರಿಯ ಷೇರುಪೇಟೆಯ ಕುಸಿತಕ್ಕೆ ಬಜೆಟ್‌ನೊಡನೆ ಬಹಳ ಸಂಬಂಧವಿಲ್ಲ. ವಿಶ್ವದ ಷೇರುಮಾರುಕಟ್ಟೆಯ ಕುಸಿತದಿಂದಾಗಿ, ಡಾಲರುಗಳೊಡನೆ ಸಂಬಂಧವಿರುವ ಎಲ್ಲಾ ಮಾರುಕಟ್ಟೆಗಳ ಮೇಲೂ ಪರಿಣಾಮವಾಗಿದೆ. ಬೆಲೆ ನಿಯಂತ್ರಿಸುವ ಪ್ರಯತ್ನ ಮಾರುಕಟ್ಟೆಯ ಮೇಲೆ ಯಾವ ಪರಿಣಾಮವನ್ನೂ ಬೀರಿಲ್ಲ ಹಾಗೂ ಹೊಸ ತೆರಿಗೆಗಳಿಂದ ಸಂಗ್ರಹವಾಗುವ ಹಣ ನಿಕೃಷ್ಟವಾದುದು. ರಿಸರ್ವ್ ಬ್ಯಾಂಕ್ ಉದ್ದೇಶಪೂರ್ವಕವಾಗಿ ಮಧ್ಯೆ ಪ್ರವೇಶಿಸದಿದ್ದರೆ ಡಾಲರಿನ ಬೆಲೆ ರೂಪಾಯಿಗೆ ತೀರ ಕಡಿಮೆಯಾಗುವ ಸಂಭವವಿದೆ. ಅದನ್ನು ತಡೆದರೆ ಆಂತರಿಕ ಹಣದುಬ್ಬರ ಎದುರಿಸುವುದು ಅನಿವಾರ್ಯ. ಅಂತರರಾಷ್ಟ್ರೀಯವಾಗಿ ಅಮೆರಿಕಾದ ಮತ್ತು ಜಪಾನಿನ ಅರ್ಥವ್ಯವಸ್ಥೆ ಹಾಗೂ ಕೃತಕವಾಗಿ ನಿಯಂತ್ರಿತವಾಗಿರುವ ಚೀನಾದ ಹಣಕಾಸು ವ್ಯವಸ್ಥೆಯಲ್ಲಿ ಮಹತ್ತರವಾದ ಅಪಮೌಲ್ಯಗಳಾಗುವ ನಿರೀಕ್ಷೆಯಿದ್ದು, ಅದು ನಮ್ಮ ಆರ್ಥಿಕತೆಯ ಮೇಲೆ ಪ್ರತಿಕೂಲ ಪರಿಣಾಮ ಬೀರುವ ನಿರೀಕ್ಷೆಯೂ ಇದೆ. ಇವನ್ನೆಲ್ಲಾ ಈ ಅಲ್ಪ ಪ್ರಮಾಣದ ಬಜೆಟ್‌ನಿಂದ ನಿಯಂತ್ರಿಸಲಾಗದು. ಹಣದುಬ್ಬರ, ಬೆಲೆ ಏರಿಕೆ, ಇವೆಲ್ಲಾ ಬಂಡವಾಳ ವ್ಯವಸ್ಥೆ ತನಗೆ ಅಗತ್ಯವಿರುವ ಬಂಡವಾಳವನ್ನು ಸಾಧಾರಣಜನತೆಯಿಂದ ಸಂಗ್ರಹಿಸುವ ಸೂಕ್ಷ್ಮ ವಿಧಾನವಷ್ಟೆ. ನಿರುದ್ಯೋಗಸೃಷ್ಟಿ ಅದರ ಬೆನ್ನೆಲುಬು.


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಜನವರಿ ಸಂಚಿಕೆ

'ಹೊಸತು' ವಿಶೇಷಾಂಕವು ತುಂಬ ಅರ್ಥಪೂರ್ಣವಾಗಿ ಬಂದಿದೆ. ಬಹಳ ಒಳ್ಳೆಯ ಲೇಖನಗಳಿವೆ. ಒಟ್ಟಾರೆಯಾಗಿ ನಮ್ಮ ನಡುವಿನ ಬಹುಮುಖ್ಯ 'ಭಿನ್ನಮತ'ದ ಪತ್ರಿಕೆಯಾಗಿ 'ಹೊಸತು' ಇದೆ. ಪ್ರವಾಹದೊಂದಿಗೆ ಒಂದಾಗುವುದಕ್ಕೆ ಪ್ರತಿಯಾಗಿ 'ಹೊಸತು' ಅದರ ವಿರುದ್ಧದ ದಿಕ್ಕಿನಲ್ಲಿ ಒಂಟಿಯಾದರೂ ಪರವಾಗಿಲ್ಲ ಮುಂದುವರಿಯುತ್ತಿದೆ.

ಹಂಪಿ *ಡಾ॥ ಟಿ. ಆರ್. ಚಂದ್ರಶೇಖರ್*

ಒರಿಯಾ ಲೇಖಕಿ ಸುಸ್ಮಿತಾ ಬಾಗಟೆಯವರು ಈಗ ಬೆಂಗಳೂರಿನಲ್ಲಿಯೇ ನೆಲೆಸಿದ್ದಾರೆ. 'ಹೊಸತು'ವಿನಲ್ಲಿ ಬಂದ ಅವರ ಕತೆಯ ಅನುವಾದವನ್ನು ಗಿರೀಶ ಕಾರ್ನಾಡರಿಗೆ ತೋರಿಸಿದರಂತೆ. ಕತೆಯ ಭಾಷೆಯ ಬಗೆಗೆ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತ 'ಹೊಸತು'ವಿನ ವೈಶಿಷ್ಟ್ಯವನ್ನೂ ಕಾರ್ನಾಡರು ಅವರಿಗೆ ತಿಳಿಸಿದರಂತೆ.

ಉಡುಪಿ *ಡಾ॥ ಮಾಧವಿ ಎಸ್. ಭಂಡಾರಿ*

### ವಿಜ್ಞಾನೇಶ್ವರ – ಮರ್ತೂರು

'ಹೊಸತು' ಜನವರಿ ಸಂಚಿಕೆಯಲ್ಲಿ ಡಾ॥ ಎಂ. ಎಂ. ಕಲ್ಬುರ್ಗಿಯವರು ವಿಜ್ಞಾನೇಶ್ವರನ ಬಗ್ಗೆ ಬರೆದಿದ್ದಾರೆ. ಅವನು ಶಾಸನದ ರೀತ್ಯಾ 'ವೈದಿಕ ಶೈವ ಬ್ರಾಹ್ಮಣನಲ್ಲ' 'ಆಗಮಿಕ ಶೈವ ಬ್ರಾಹ್ಮಣ'; 'ಶಾಸನೋಕ್ತ ವಿಜ್ಞಾನೇಶ್ವರನು ಮಿತಾಕ್ಷರದ ವಿಜ್ಞಾನೇಶ್ವರನಲ್ಲ' ಮತ್ತು 'ಶಾಸನೋಕ್ತ ವಿಜ್ಞಾನೇಶ್ವರ ಮರ್ತೂರು ಗ್ರಾಮದವನಲ್ಲ' ಎಂಬ ಮೂರು ಸಂಗತಿಗಳನ್ನು ಮಂಡಿಸಿದ್ದಾರೆ.

ವಿಜ್ಞಾನೇಶ್ವರರು ಬೀದರ ಜಿಲ್ಲೆಯ ಮಾಸಿಮಡು ಗ್ರಾಮದವರು ಎಂದು ಶ್ರೀ ಶ್ರೀನಿವಾಸ ಸಿರನೂರಕರರು ಸೂಚಿಸಿದ್ದಾರೆ. ಡಾ॥ ಕಲ್ಬುರ್ಗಿ ಅವರು ಕೊಟ್ಟಿರುವ ವಿಜ್ಞಾನೇಶ್ವರ ಹಾಗೂ ಬೀಚಿರಾಜರ 'ವಂಶರೇಖೆ' ಸಿರನೂರಕರರು ಕೊಟ್ಟದ್ದೇ ಆಗಿದೆ. ಬೀಚಿರಾಜನ ತಂದೆ ಕಂಚ ಹಾಗೂ ವಿಜ್ಞಾನೇಶ್ವರ ಇವರು ಏಕವ್ಯಕ್ತಿ ಎಂದು ಹೇಳಲು ಎಲ್ಲಿಯೂ ಆಧಾರವಿಲ್ಲ. ವಿಜ್ಞಾನೇಶ್ವರನು ಚಕ್ರವರ್ತಿಯಿಂದ ನಮಿಸಲ್ಪಟ್ಟಿದ್ದಾನೆ. ನಮನಕ್ಕೆ ಅರ್ಹರಾದ ವ್ಯಕ್ತಿ ಸಾಕಷ್ಟು ಮಹಾನುಭಾವರೆಂಬುದರಲ್ಲಿ ಸಂದೇಹವಿಲ್ಲ. ಏಕಕಾಲಕ್ಕೆ ಒಬ್ಬರಿಗಿಂತ ಹೆಚ್ಚು ಜನ ವಿಜ್ಞಾನೇಶ್ವರರು ಇದ್ದು ಅವರೆಲ್ಲರೂ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನಿಂದ ನಮಿಸಲ್ಪಟ್ಟರು ಎಂದು ಹೇಳುವುದಕ್ಕೆ ಆಧಾರಗಳನ್ನು ಡಾ॥ ಕಲ್ಬುರ್ಗಿಯವರು ಒದಗಿಸಿಲ್ಲ. 'ಮಿತಾಕ್ಷರ' ಗ್ರಂಥವು ಹುಟ್ಟಿದ ಕಾಲದಲ್ಲಿಯೆ ಭಾರತದ ಉತ್ತರದ ತುದಿ ಕಾಶ್ಮೀರದಿಂದ ದಕ್ಷಿಣದ ತುದಿ ಕನ್ಯಾಕುಮಾರಿ ಸ್ಥಳದವರೆಗೆ ಪ್ರಸಿದ್ಧಿಯನ್ನು ಹೊಂದಿತ್ತು. ಮಿತಾಕ್ಷರದ ಕರ್ತೃ ಸನ್ಯಾಸಿಗಳಾದುದರಿಂದ ದೇಶದ ಆ ತುದಿಯಿಂದ ಈ ತುದಿಯವರೆಗೆ ಪ್ರವಾಸಗೈದಿರಲು ಸಾಧ್ಯವಿದೆ ಮತ್ತು ಅನೇಕ ಕಡೆಗಳಲ್ಲಿ ಅವರ ನೆನಪಿನ ಹೆಜ್ಜೆ ಗುರುತುಗಳು ಇರಲೂ ಸಾಧ್ಯವಿದೆ. ಮರ್ತೂರಿನ ಶಾಸನದಲ್ಲಿ 'ವಿಜ್ಞಾನೇಶ್ವರ' ವ್ಯಕ್ತಿಯ ಅಸ್ತಿತ್ವಕ್ಕೆ ಕಾರಣ ಏನು ? ಮರ್ತೂರಿನ ಶಾಸನವು ಕ್ರಿ. ಶ. ೧೧೨೫ರಲ್ಲಿ ಬರೆಯಲಾಗಿದೆ.

ಆರನೆಯ ವಿಕ್ರಮಾದಿತ್ಯ ಸಾಕಷ್ಟು ವಯಸ್ಕನಾಗಿದ್ದ. ಆತನಿಂದ ಮರ್ತೂರಿನ ಶಾಸನದ ವಿಜ್ಞಾನೇಶ್ವರ ನಮಸ್ಕರಿಸಲ್ಪಟ್ಟಿದ್ದಾನೆ, ಎಂದರೆ ಮರ್ತೂರಿನ ಶಾಸನದ ವಿಜ್ಞಾನೇಶ್ವರ ಹಾಗೂ ವಿಕ್ರಮಾದಿತ್ಯ ಈ ಇಬ್ಬರೂ ಬಹಳ ಕಾಲದಿಂದ ಪರಿಚಿತರು. ಮರ್ತೂರಿನಲ್ಲಿ ಅವರ ಹೆಸರಿನ ಪ್ರಸಕ್ತಿಯು ಏಕೆ ಬಂದಿದೆ ? ಮರ್ತೂರಿಗೂ ಅವರಿಗೂ ಏನಾದರೂ ಸಂಬಂಧ ಇರಲೇಬೇಕು. ಮತ್ತೆ ನನಗೆ ತಿಳಿದ ಹಾಗೆ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಇಬ್ಬರು ಪ್ರಸಿದ್ಧರಾದ 'ವಿಜ್ಞಾನೇಶ್ವರ' ಎಂಬ ಹೆಸರಿನ ವ್ಯಕ್ತಿಗಳು ಇದ್ದುದಕ್ಕೆ ಎಲ್ಲಿಯೂ ದಾಖಲೆ ಇಲ್ಲ, ಇದುವರೆಗೆ ಉಪಲಬ್ಧವಾದ ಸಾಮಗ್ರಿಯಲ್ಲಿ.

ಮರ್ತೂರಿನ ಶಾಸನದ ನಾಂದೀಪದ್ಯ ಆಧಾರದ ಮೇಲೆ ಡಾ॥ ಕಲ್ಬುರ್ಗಿ ಅವರು ವಿಜ್ಞಾನೇಶ್ವರ ವೈದಿಕ ಶೈವ ಬ್ರಾಹ್ಮಣನಲ್ಲ, ಆಗಮಿಕ ಶೈವ ಬ್ರಾಹ್ಮಣ ಎಂದು ಬರೆದಿದ್ದಾರೆ. ಬೀಚಿರಾಜ ಶಿವಾಲಯವನ್ನು ಕಟ್ಟಿಸಿದಂತೆ ಆ ಊರಿನಲ್ಲಿ ಕೇಶವಾಲಯವನ್ನೂ ಕಟ್ಟಿಸಿ ಆ ಎರಡೂ




ದೇವಾಲಯಗಳಿಗೆ ದತ್ತಿಯನ್ನು ಅವುಗಳ ಅಸ್ತಿತ್ವಕ್ಕೆ – ಖರ್ಚಿಗೆ – ಕೈಂಕರ್ಯಕ್ಕೆ ಕೊಡಲಾಗಿದೆ. ವಿಜ್ಞಾನೇಶ್ವರ ಹಾಗೂ ಅವರ ಶಿಷ್ಯ ಇಬ್ಬರೂ ಶಿವಭಕ್ತರಿದ್ದಂತೆ ವಿಷ್ಣು ಭಕ್ತರೂ ಆಗಿದ್ದಾರೆ. ಅರ್ಥಾತ್ ಅವರಲ್ಲಿ ವೈದಿಕಬ್ರಾಹ್ಮಣ ಸಮಾಜದ ಮಾಹೇಶ್ವರಭಕ್ತಿಯೂ ಇದೆ. ಅಂತೆಯೇ ವೈದಿಕ ಬ್ರಾಹ್ಮಣರ ಭಾಗವತ ಭಕ್ತಿಯೂ ಇದೆ. ಒಬ್ಬ ವ್ಯಕ್ತಿ 'ಪರಮ ಮಾಹೇಶ್ವರ' ಇದ್ದಂತೆ 'ಪರಮ ಭಾಗವತನೂ' ಆಗಿರಬಹುದು. ಇದಕ್ಕೆ ಸಾಕ್ಷಿ ಚಾಳುಕ್ಯ ದೊರೆ ಮಂಗಲೀಶನ ಮಹಾಕೂಟದ ಶಾಸನ. ಆತ ಪರಮ ಮಾಹೇಶ್ವರನಾದಂತೆ ಪರಮ ಭಾಗವತನೂ ಆಗಿದ್ದ; ಮಹಾಕೂಟದ ಶಾಸನವನ್ನು ಪರಿಶೀಲಿಸಬಹುದು. ಕಾರಣ ವಿಜ್ಞಾನೇಶ್ವರನು ಡಾ॥ ಕಲ್ಬುರ್ಗಿ ಅವರು ವಿವರಿಸಿದಂತೆ ವೀರಶೈವದ ಪೂರ್ವರೂಪದ ಆಗಮಿಕ ತತ್ವದ ವೀರಶೈವ ಅಥವಾ ಶೈವ ಬ್ರಾಹ್ಮಣ್ಯದ ಶಾಖೆಯವನಲ್ಲ.

ಕರ್ನಾಟಕದಲ್ಲಿ ಯಾಜ್ಞವಲ್ಕ್ಯ ಸ್ಮೃತಿಯ ಅನುಯಾಯಿಗಳ ದೊಡ್ಡ ಪಂಗಡವೇ ಇದ್ದಿತು. ಮರ್ತೂರು ಇರುವ ಅದೇ ಗುಲ್ಬರ್ಗ ಜಿಲ್ಲೆಯ ತಿಂಥಣಿಯಲ್ಲಿ ದೊರಕಿದ ವಿಕ್ರಮಾದಿತ್ಯನ ಅಜ್ಜ ಜಯಸಿಂಹನ ತಾಮ್ರ ಪಟ ಶಾಸನವೇ ಸಾಕ್ಷಿ. ತಿಂಥಣಿ (ಸಿರಿವೊಳಲ) ಗ್ರಾಮದಲ್ಲಿ ಸಾವಿರ ಸಾವಿರ ವಿದ್ಯಾರ್ಥಿಗಳು ಓದುತ್ತಿದ್ದ ಘಟಿಕ ಸ್ಥಾನವಿತ್ತು. ಅಲ್ಲಿನ ಸ್ಥಾನಪತಿಗೆ ಚಕ್ರವರ್ತಿ ಗೌರವಾರ್ಥವಾಗಿ ತನ್ನ ಮೇಲೆ ಹಿಡಿಯಲಾಗುತ್ತಿದ್ದ ಶ್ವೇತಚ್ಛತ್ರವನ್ನೇ ನೀಡಿದನು. ವಿಜ್ಞಾನೇಶ್ವರನು ಹುಟ್ಟಿ ಬೆಳೆದದ್ದೂ ಅಂತಹ ಒಂದು ಪರಿಸರದಲ್ಲಿ. ಮರ್ತೂರಿನ ದೇವಾಲಯಗಳ ನಿರ್ಮಾಣವೇ ವಿಜ್ಞಾನೇಶ್ವರನಿಗಾಗಿ. ದೇವಾಲಯಗಳನ್ನು ಅವನಿಗಾಗಿ ನಿರ್ಮಿಸಿದ್ದಲ್ಲವೆಂದರೆ ಶಾಸನದಲ್ಲಿ ಎರಡನೆಯ ಬಾರಿಗೆ (ಶಾಸನಪಂಕ್ತಿಗಳು : ೫೧-೫೨) ಹೇಳುವ ಅವಶ್ಯಕತೆಯೇ ಇದ್ದಿಲ್ಲ. ಮರ್ತೂರಿನ ದೇವಸ್ಥಾನಗಳ ಸ್ಥಾನಪತಿ ಯಾರು ? ನಮ್ಮ ಪ್ರಕಾರ ಶಿವ ಹಾಗೂ ಕೇಶವ ಎರಡೂ ದೇವತೆಗಳಲ್ಲಿ ಭಕ್ತಿಯನ್ನಿಟ್ಟಿದ್ದ ವಿಜ್ಞಾನೇಶ್ವರ; ಆತ ವೈದಿಕ ಶೈವ ಬ್ರಾಹ್ಮಣ. ಶಾಸನೋಕ್ತ ವಿಜ್ಞಾನೇಶ್ವರನು ಚಕ್ರವರ್ತಿಯಿಂದ ಪೂಜಿಸಲ್ಪಟ್ಟವನು. ಇಬ್ಬರು ಈ ಹೆಸರಿನ ವ್ಯಕ್ತಿಗಳು ಇದ್ದರೆನ್ನುವುದಕ್ಕೆ ಆಧಾರವಿಲ್ಲ. ವಿಜ್ಞಾನೇಶ್ವರನ ಊರು ಮರ್ತೂರು ಎಂದು ಹೇಳಿರುವುದಕ್ಕೆ ಬಾಧ್ಯಸ್ಥರು ಡಾ॥ ಕಲ್ಬುರ್ಗಿಯವರೂ ಕೂಡ.

ಮರ್ತೂರು ಶಾಸನದ ವ್ಯಕ್ತಿ ವಿಜ್ಞಾನೇಶ್ವರನ ವ್ಯಕ್ತಿತ್ವ ಎಂತಹದು ? ಶಾಸನವೇ ಉತ್ತರ ಹೇಳುತ್ತದೆ :

ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪಸಮಾಧಿಶೀಲಸಂಪನ್ನರು (ಪಂಕ್ತಿಗಳು – ೫೧ ಹಾಗೂ ೫೨) ಎಂದು.

ಎಂದರೆ ನೈಷ್ಠಿಕ ಬ್ರಹ್ಮಚಾರಿಗಳು; ಬ್ರಹ್ಮಚಾರಿಗಳಿಗೆ ಔರಸ ಪುತ್ರರು ಇದ್ದರೆಂದು ಹೇಳುವುದು ಸರಿಯಲ್ಲ. ನೈಷ್ಠಿಕ ಬ್ರಹ್ಮಚಾರಿಗಳು, ಬ್ರಹ್ಮಚರ್ಯವನ್ನು ಬಿಟ್ಟರೆ ಅವರನ್ನು ಒದೆದು ಓಡಿಸಬೇಕೆಂದು ನಾಡಿನ ನೂರಾರು ಶಾಸನಗಳಲ್ಲಿ ಬರೆದಿದೆ.

ಮಿತಾಕ್ಷರಕ್ಕೂ ಶಾಸನಕ್ಕೂ ಇರುವ ಸಂಬಂಧವನ್ನು 'ಮಿತಾಕ್ಷರದ ವಿಜ್ಞಾನೇಶ್ವರರು ಮತ್ತು ಮರ್ತೂರಿನ ಶಾಸನ' ಎಂಬ ಪುಸ್ತಿಕೆಯಲ್ಲಿ ತೋರಿಸಲಾಗಿದೆ. 'ನತ ನೃಪತಿ ಶಿರೋರತ್ನ ಭಾಭಾಸುರಾಂಘ್ರಿಃ' ಎಂಬ ಮಿತಾಕ್ಷರದ ಮಾತು ಶಾಸನದಲ್ಲಿ –

*ಅರಿರಾಯ ಮಕುಟ ತಾಡಿತ*
*ಚರಣನೆನಲು ನೆಗಳ್ದ ವಿಕ್ರಮಾಂಕನ ರತ್ನೋ*
*ತ್ಕರ ನಿಚಿತ ಮಕುಟ ತಾಡಿತ*
*ಚರಣಂ ವಿಜ್ಞಾನದೇವರೇಂ ಕೇವಳಮೇ ॥*

ಎಂಬಲ್ಲಿ ಪ್ರತಿಫಲಿಸಿ ನಿಂತಿದೆ.

ವಿಜ್ಞಾನೇಶ್ವರನು ತನ್ನ ವೃದ್ಧಾಪ್ಯದಲ್ಲಿ ಮರ್ತೂರಿನಲ್ಲಿ ಇದ್ದ ಕಾರಣದಿಂದ ಅಲ್ಲಿ ಶಿವಾಲಯ ಹಾಗೂ ಕೇಶವಾಲಯಗಳು ಕಟ್ಟಲ್ಪಟ್ಟವು. ಮಾಸೆಯಮಡು ಗ್ರಾಮಕ್ಕೂ ವಿಜ್ಞಾನೇಶ್ವರನಿಗೂ ಯಾವುದೇ ಸಂಬಂಧವಿದ್ದುದಕ್ಕೆ ಆಧಾರವಿಲ್ಲ. ಸಂಬಂಧ ಇದ್ದಿದ್ದರೆ ಆ ಊರಿನಲ್ಲೆ ಈ ದೇವಾಲಯಗಳು ಹುಟ್ಟುತ್ತಿದ್ದವು. ಕಂಚನೇ ವಿಜ್ಞಾನೇಶ್ವರ ಎಂದು ಹೇಳುವುದಕ್ಕೂ ಎಲ್ಲಿಯೂ ಆಧಾರವಿಲ್ಲ. ಹೀಗೆಯೇ ಬೀಚಿರಾಜನೇ ನೈಷ್ಠಿಕ ಬ್ರಹ್ಮಚಾರಿಯ ಗುಣಗಳನ್ನು – ಆಚರಣೆಗಳನ್ನು ಆಚರಿಸಿದನೆಂದು ಹೇಳಲು ಆಧಾರವಿಲ್ಲ; ಏಕೆಂದರೆ ಆತನಿಗೆ 'ಚಾಮಲ' (ಶ್ಯಾಮಲ) ದೇವಿ ಎಂಬ ಹೆಂಡತಿ ಇದ್ದಾಳೆ. ಅರ್ಥಾತ್ ಯಮನಿಯಮಾದಿ

ಬ್ರಹ್ಮಚಾರಿಗೆ ಅನ್ವಯವಾಗುವ ವಿಶೇಷಣಗಳನ್ನು ವಿಜ್ಞಾನೇಶ್ವರನಿಗೇ ಅನ್ವಯಮಾಡಿ ಹೇಳಬೇಕಾಗುತ್ತದೆ; ಅಂತೆಯೇ ಆ ನೈಷ್ಠಿಕ ಬ್ರಹ್ಮಚಾರಿಯ ಗುಣಗಳು ಬೀಚಿರಾಜನ ತಂದೆಗೂ ಅನ್ವಯವಾಗುವುದಿಲ್ಲ. ಸ್ಪಷ್ಟ ಸಂಗತಿ ಏನೆಂದರೆ ಬೀಚಿರಾಜನಾಗಲೀ ಆತನ ಖಾಸಾ ತಂದೆ ಕಂಚನಾಗಲೀ ನೈಷ್ಠಿಕ ಬ್ರಹ್ಮಚಾರಿಗಳಲ್ಲ. ನೈಷ್ಠಿಕ ಬ್ರಹ್ಮಚರ್ಯವನ್ನು ಪರಿಪಾಲಿಸಿದವರು ಶಾಸನದ ಪ್ರಕಾರ ವಿಜ್ಞಾನೇಶ್ವರರೇ. ಆದುದರಿಂದ ಈಗ ಮರ್ತೂರಿನಲ್ಲಿ ಕಟ್ಟಿದ ವಿಜ್ಞಾನೇಶ್ವರನ ಸ್ಮಾರಕ ಸಂಸ್ಥೆ ಯಾರದೇ ತಪ್ಪಿನಿಂದ ಹುಟ್ಟಿಲ್ಲ – ತಪ್ಪಾಗಿಯೂ ಇಲ್ಲ.

ಮೈಸೂರು *ಸೀತಾರಾಮ ಜಾಗೀರ್‌ದಾರ್*

## ಹಾವೇರಿ ಜಿಲ್ಲೆಯ ಹೆಮ್ಮೆಯ ದಾರ್ಶನಿಕರು

"ಕಣ್ಣಿಲ್ಲದಿರುವುದಕ್ಕಿಂತಲೂ ಕೆಟ್ಟದಾದುದು ಯಾವುದು?" ಎಂಬ ಪ್ರಶ್ನೆಗೆ ಓರ್ವ ದಾರ್ಶನಿಕರು ಉತ್ತರಿಸುವಂತೆ "ಕಣ್ಣಿದ್ದು ಕೂಡ ದೂರದೃಷ್ಟಿ ಇಲ್ಲದಿರುವುದು." ಹೌದು. ಆ ದೂರದೃಷ್ಟಿಯನ್ನು ಕೊಡುವವರೇ ದಾರ್ಶನಿಕರು. ಸತ್ಯದಲ್ಲಿ ಎರಡು ಪ್ರಕಾರಗಳು. ಒಂದು ತಾತ್ಕಾಲಿಕ ಸತ್ಯ. ಇನ್ನೊಂದು : ಶಾಶ್ವತ ಸತ್ಯ. ಶಾಶ್ವತ ಸತ್ಯವು ದರ್ಶನವಾಗಬೇಕಾದರೆ ದಾರ್ಶನಿಕರೊಂದಿಗೆ ತಲಸ್ಪರ್ಶಿ ಒಡನಾಟ ಅತ್ಯಗತ್ಯ. ಕವಿ ಚೆನ್ನವೀರ ಕಣವಿಯವರು, "ಭಾಷಾ ಬಾಂಧವ್ಯ ರಕ್ತ ಸಂಬಂಧದಷ್ಟು ಹತ್ತಿರವಾದದ್ದು. ಯಾರ ಚೇತನ ಪ್ರಬುದ್ಧ ಹಂತ ತಲುಪಿದೆಯೋ ಅಂತಹ ಸುಸಂಸ್ಕೃತ ಚೇತನವುಳ್ಳವರಿಗೆ ಭಾಷೆ ಜೀವದಷ್ಟು ಪ್ರಿಯವಾಗುತ್ತದೆ" ಎಂದು ನುಡಿಯುತ್ತಾರೆ. ಸೆಪ್ಟೆಂಬರ್ ೧ರಿಂದ ೪, ೨೦೦೬ರಂದು ಅಮೇರಿಕಾದ ಬಾಲ್ಟಿಮೋರನಲ್ಲಿ ಜರುಗಿದ ೪ನೇ ಅಕ್ಕ ವಿಶ್ವ ಕನ್ನಡ ಸಮ್ಮೇಳನವನ್ನು ಉದ್ಘಾಟಿಸಿದ ಧರ್ಮಾಧಿಕಾರಿ ಡಾ|| ಡಿ. ವೀರೇಂದ್ರ ಹೆಗ್ಗಡೆಯವರು, ಕವಿರಾಜಮಾರ್ಗಕಾರನು 'ಕಾವೇರಿಯಿಂದ ಗೋದಾವರಿ ವರೆಗಿರ್ಪ ನಾಡು' ಎಂದು ಸಾರಿದ್ದ ಮಾತನ್ನು ತುಸು ಬದಲಾಯಿಸಿ 'ಕಾವೇರಿಯಿಂದಮಾ ನಯಾಗಾರವರೆಗಿರ್ದ ಕನ್ನಡಿಗರು' ಎಂದು ಅಭಿಮಾನದಿಂದ ಹಾಡಬಹುದೆಂದು ಹೇಳಿ ಕನ್ನಡದ ವಿಶ್ವಸ್ವರೂಪ ಕೊಂಡಾಡಿದರು. ಹೌದು, ಹಾವೇರಿ ಜಿಲ್ಲೆಯ ದಾರ್ಶನಿಕರ ಬದುಕು ಮತ್ತು ಬರಹಗಳು ಭಾಷೆ ಮತ್ತು ಸಾಹಿತ್ಯದ ವಿಶ್ವಸ್ವರೂಪದ ದಿಗ್ದರ್ಶನ ಮಾಡಿಸುತ್ತವೆಂಬುದು ಹೆಮ್ಮೆಯ ಸಂಗತಿ.

ಈ ಜಿಲ್ಲೆಯ ದಾರ್ಶನಿಕರು ಸುಲಿದ ಬಾಳೆ ಹಣ್ಣಿನೋಪಾದಿಯ ಕನ್ನಡದಲ್ಲಿ ಮಾನವ ಬದುಕಿನ ವಿಶ್ವಮಾನ್ಯ ಮೌಲ್ಯಗಳನ್ನು ಸಾರಿ ಹಾವೇರಿಯ ಮಡಿಲು ಕನ್ನಡ ಭಾಷೆ ಮತ್ತು ಸಾಹಿತ್ಯ ಶ್ರೀಮಂತಿಕೆಯಿಂದ ಸಂಭ್ರಮಿಸುವ ಚೈತನ್ಯ ಉಣಬಡಿಸಿದ್ದಾರೆ.

**ಊರುಗೋಲು, ತಂಬೂರಿ**

ಸರ್ವಜ್ಞನ ಊರುಗೋಲು, ಕವಿ ಕನಕದಾಸ ಹಾಗೂ ಸಂತ ಶಿಶುನಾಳ ಷರೀಫರ ತಂಬೂರಿ ವಾದ್ಯಗಳು ಬದುಕನ್ನು ದರ್ಶಿಸುವ ದಿಕ್ಸೂಚಿಗಳೆಂದೇ ನನ್ನ ಭಾವನೆ. ಊರುಗೋಲು ಮಾನವ ಬದುಕಿನ ಆಧಾರ ಹಾಗೂ ಭವಿಷ್ಯ ಸೂಚಕವಾಗಿದೆ. ಭೂತ, ವರ್ತಮಾನ ಹಾಗೂ ಭವಿಷ್ಯತ್ತಿನಲ್ಲಿ ಮಾನವ ಬದುಕಿಗೆ ಸೂಕ್ತ ರಾಗ-ತಾಳ ಒದಗಿಸಲು ತಂಬೂರಿಯ ಸುಸ್ವರದೊಂದಿಗೆ ಹೊರಹೊಮ್ಮುವ 'ಕೀರ್ತನೆ' ಮತ್ತು 'ಏಕತಾರಿ ಪದಗಳು' ಮಾರ್ಗದರ್ಶಕವಾಗಿವೆ. ತ್ರಿಪದಿಗಳು ತ್ರಿಕಾಲ ಜ್ಞಾನವನ್ನು ಪ್ರತಿಫಲಿಸುತ್ತವೆ. ಹಾವೇರಿ ಜಿಲ್ಲೆಯ ಗರ್ಭ ಶ್ರೀಮಂತ ಗರ್ಭ. ಕನ್ನಡ ಮಾತೆಯ ಮುಕುಟ ಸಿಂಗರಿಸುವ ಶ್ರೇಷ್ಠ ದಾರ್ಶನಿಕರಾದ ಕವಿ ಕನಕದಾಸರು, ಸರ್ವಜ್ಞ ಹಾಗೂ ಸಂತ ಶಿಶುನಾಳ ಷರೀಫರು ಹಾವೇರಿ ನಾಡಿನ ಮಡಿಲ ಕುಡಿಗಳು.

**ಕನಕದಾಸರು**

'ಬಾಳೆಹಣ್ಣು ತಿಂದದ್ದು', 'ನಾನು ಹೋದರೆ ಹೋದೇನು' ಎಂಬ ನುಡಿ, 'ದೇವರನ್ನು ತನ್ನೆಡೆಗೆ ತಿರುಗಿಸಿದ್ದು' (ಕನಕನ ಕಿಂಡಿ) ಈ ಎಲ್ಲ ಚಮತ್ಕಾರಗಳನ್ನು ಮನುಕುಲಕ್ಕೆ ದರ್ಶಿಸಿದವರು ಸಂತ ಕವಿ ಕನಕದಾಸರು. ಹದಿನಾರನೆಯ ಶತಮಾನದ ಪ್ರಾರಂಭದಲ್ಲಿ ಅಂದರೆ ಸುಮಾರು ೧೫೫೦ರಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ್ದ ಅಂದಿನ ಧಾರವಾಡ ಜಿಲ್ಲೆಯ (ಇಂದಿನ ಹಾವೇರಿ ಜಿಲ್ಲೆ) ಶಿಗ್ಗಾಂವ ತಾಲೂಕಿನ ಬಾಡ ಗ್ರಾಮವು ಅವರ ಜನ್ಮಸ್ಥಳ. ಬಾಡ, ಬಂಕಾಪುರ ಹಾಗೂ ಕಾಗಿನೆಲೆ ಸಹಿತ ೭೮ ಗ್ರಾಮಗಳಿಗೆ ನಾಡಗೌಡನಾಗಿದ್ದವನು ಬೀರಪ್ಪ. ಈ ಬೀರಪ್ಪನವರು ಮತ್ತು ಸಾಧ್ವಿ ಬಚ್ಚಮ್ಮ ದಂಪತಿಗಳ ವರಪುತ್ರ ತಿಮ್ಮಪ್ಪ. ಈ ತಿಮ್ಮಪ್ಪನಾಯಕನೇ ಕನಕನಾಯಕನಾಗಿ ಸಿರಿ-ಸಂಪತ್ತನ್ನು ಮೆರೆದು ತದನಂತರ ಈ ತಾತ್ಕಾಲಿಕ ಸತ್ಯವನ್ನು ತೊರೆದು ಅಧ್ಯಾತ್ಮ ಸಿರಿಗೆ ತಲೆಬಾಗಿ ಕನಕದಾಸನಾಗಿ ಮನುಕುಲಕ್ಕೆ ಮಾದರಿಯಾದರು. ಇಂದಿನ ಬ್ಯಾಡಗಿ ತಾಲೂಕಿನ ಕಾಗಿನೆಲೆ ಅವರ ಸಾಧನೆಯ ಕೇಂದ್ರತಾಣವಾಯಿತು.

ಕನಕದಾಸರು ಜೀವನ ತತ್ವ ದರ್ಶಿಸುವುದು ಅವರ ಕೀರ್ತನೆಗಳ ಮೂಲಕ. ಭಕ್ತಿ-ಭಾವವೇ ಅಲ್ಲಿ ಪ್ರಧಾನ. 'ಮೋಹನ ತರಂಗಿಣಿ' ಅವರ ಮೊದಲ ಕಾವ್ಯ ಕೃತಿಯೆಂದು ತಿಳಿದುಬಂದಿದೆ. ಸುಮಾರು ೪೨ ಸಂಧಿಗಳು, ೨೮೦೦ ಸಾಂಗತ್ಯಗಳಿವೆ. ಇಲ್ಲಿ ಶ್ರೀಕೃಷ್ಣ ಸೂತ್ರಧಾರ, ಅವನ ಲೀಲೆಗಳು ಪತಿ-ಪತ್ನಿಯರ ಸಂವಾದದಲ್ಲಿ ವ್ಯಕ್ತವಾಗಿವೆ. ಈ ಕಾವ್ಯ ಹಾಗೂ ಅನೇಕಾನೇಕ ಕೀರ್ತನೆಗಳು ಕನ್ನಡ ಭಾಷೆಯ ಶ್ರೇಷ್ಠತೆ ಹಾಗೂ ಜೀವನ ದರ್ಶನ ವಿಧಾನಕ್ಕೆ ಕನ್ನಡಿ ಹಿಡಿಯುತ್ತವೆ.

**ಸರ್ವಜ್ಞ**

ಸರ್ವಜ್ಞ ಕವಿಯ ಕಾಲವು ೧೬ನೇ ಶತಮಾನ. ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನ ಮಾಸೂರು ಸರ್ವಜ್ಞನ ಜನ್ಮಸ್ಥಳವೆಂದು ನಂಬಲಾಗಿದೆ. 'ತ್ರಿಪದಿ'ಗಳ ಮೂಲಕ ಜೀವನ ದರ್ಶನ ಮಾಡಿಸುವುದು ಸರ್ವಜ್ಞನ ಶ್ರೇಷ್ಠತೆ. 'ಋಷಿ ಅಲ್ಲದವನು ಕಾವ್ಯ ಬರೆಯಲಾರ' ಎಂಬ ಮಾತು ಸರ್ವಜ್ಞನ ವಿಷಯದಲ್ಲಿ ಸತ್ಯವಾದುದು. ಸರಳ ಹಾಗೂ ಸುಲಲಿತ ಶೈಲಿ ಸರ್ವಜ್ಞನ ಬರಹದ ವೈಶಿಷ್ಟ್ಯತೆ. ಶಬ್ದಾಲಂಕಾರಗಳು, ತ್ರಿಪದಿಗಳು ಹಾಸುಹೊಕ್ಕಾಗಿವೆ. ರಸಗಳ ವಿಷಯದಲ್ಲಿ ಸರ್ವಜ್ಞ ಪರಿಪೂರ್ಣ. ಜಾನಪದ ಸಾಹಿತ್ಯದಲ್ಲಿ ಕಂಡುಬರುವ ತ್ರಿಪದಿ ಶೈಲಿಯನ್ನು ಆಯ್ದುಕೊಂಡು ಅಪ್ರಸಿದ್ಧವಾದ ಛಂದಸ್ಸನ್ನು ಜನಮನಕ್ಕೆ ತಲುಪಿಸಿದ್ದಾನೆ. ಸರ್ವಜ್ಞನ ಕೈ ಸ್ಪರ್ಶದಿಂದ ಕಾಡು ಕೊರಡು ಕಲ್ಪವೃಕ್ಷವಾಗುತ್ತದೆ, ಇದ್ದಿಲು ವಜ್ರವಾಗುತ್ತದೆ. ವಿಶ್ವ ಬಂಧುತ್ವ ಸಾರುವ ಸರ್ವಜ್ಞನು ಸ್ತ್ರೀ-ಪುರುಷ, ಬಡವ-ಬಲ್ಲಿದ, ಮೇಲು-ಕೀಳು ಈ ಭೇದಗಳನ್ನು ಅಳಿಸಿಹಾಕಿ ತನ್ನ ಕೈಯಲ್ಲಿರುವ ಕೋಲಿನಂತೆ ಮನುಕುಲಕ್ಕೆ ಊರುಗೋಲಾಗಿ ನಿಲ್ಲುತ್ತಾನೆ. ಪಂಡಿತ ಪಾಮರರನ್ನು ರಂಜಿಸುತ್ತಾನೆ. ಕನ್ನಡ ಭಾಷೆ ಹಾಗೂ ಸಾಹಿತ್ಯವನ್ನು ಹೇಗೆ ದುಡಿಸಿಕೊಳ್ಳಬೇಕೆಂಬುದಕ್ಕೆ ಸರ್ವಜ್ಞನೇ ಸಾಕ್ಷಿ. ಕನ್ನಡ ನಾಡು-ನುಡಿಗೆ ತ್ರಿಪದಿ ಹಾಗೂ ಮಾನವೀಯ ಮೌಲ್ಯಗಳ ಮೂಲಕ ಸರ್ವಜ್ಞ ನೀಡಿದ ಕೊಡುಗೆ ಸುವರ್ಣ ಕರ್ನಾಟಕ ಆಚರಣೆಯ ಈ ಶುಭ ಸಂದರ್ಭದಲ್ಲಿ ಸುವರ್ಣಾಕ್ಷರಗಳಿಂದ ದಾಖಲಿಸುವಂಥದ್ದು. ಹನ್ನೆರಡನೆಯ ಶತಮಾನದಲ್ಲಿ ಸಂಸ್ಕೃತವನ್ನು ಬಿಟ್ಟು ಜನರ ಭಾಷೆಯಲ್ಲಿಯೇ ಧರ್ಮ ಜಾಗೃತಿ ಹಾಗೂ ಸಾಹಿತ್ಯ ನಿರ್ಮಾಣ ಕಾರ್ಯಗಳು ಜರುಗಿದವು. ಸರ್ವಜ್ಞನು ಈ ಪರಂಪರೆಯನ್ನು ಮುಂದುವರಿಸಿಕೊಂಡು ಬಂದವನು. ದೇಶೀಯ ಭಾಷೆಗೆ ಇರುವ ಅರ್ಥಗ್ರಹಣ ಶಕ್ತಿಯನ್ನು, ನಿರೂಪಣಾ ಶಕ್ತಿಯನ್ನು ತೋರಿಸಿಕೊಟ್ಟವನು.

**ಶಿಶುನಾಳ ಷರೀಫರು**

ಹಾವೇರಿ ಜಿಲ್ಲೆಯ ಶಿಗ್ಗಾಂವ ತಾಲೂಕಿನ ಶಿಶುನಾಳದ ಸತ್ಪುತ್ರರು ಸಂತ ಶಿಶುನಾಳ ಷರೀಫರು ಕ್ರಿ.ಶ. ೧೮೧೯ ಮಾರ್ಚ್ ೭ರಂದು ಜನಿಸಿದರು. ಆಶ್ಚರ್ಯಕರವಾಗಿ ಅದೇ ಮಾರ್ಚ್ ೭ರ ದಿನಾಂಕದಂದು ೧೮೮೯ರಲ್ಲಿ ಬಯಲಲ್ಲಿ ಬಯಲಾದರು. 'ಅಲ್ಲಾಹು ಅಕ್ಬರ್' ಹಾಗೂ 'ಹರ ಹರ ಮಹಾದೇವ' ಮಂತ್ರಗಳನ್ನು ಏಕೀಕರಿಸಿ ಮಾನವೀಯ ಮೌಲ್ಯಗಳನ್ನು ಬಿತ್ತಿಬೆಳೆದರು.

ಆಡುಭಾಷೆ ಕನ್ನಡದಲ್ಲಿ ಕರ್ನಾಟಕದಾದ್ಯಂತ ಕನ್ನಡ ಕಸ್ತೂರಿಯ ಕಂಪನ್ನು ಬೀರಿದರು. ತಂಬೂರಿ ಮತ್ತು ಏಕತಾರಿ ಪದಗಳು ಅವರ ಉಸಿರು. ಹೃದಯಾಂತರಾಳದ ಅಖಂಡ ಜ್ಞಾನವನ್ನು ಸಂದರ್ಭೋಚಿತವಾಗಿ, ಸಮಯೋಚಿತವಾಗಿ, ಸಾಮಾನ್ಯ ಜನರಿಗೂ ಅರ್ಥವಾಗುವಂತೆ ಜನರ ಉದ್ಧಾರಕ್ಕಾಗಿ ಹಾಡಿ ಲೋಕವನ್ನು ಬೆಳಗಿದರು. ಡಾ|| ಶಿವಾನಂದ ಗುಬ್ಬಣ್ಣನವರ ಇವರ 'ಬರಕೋ ಪದಾ

## ರಾಹುಚಕ್ರ – ಒಂದು ವಿವರಣೆ

ಅದ್ಭುತವಾದ ಮುಖಚಿತ್ರವಿರುವ ಜನವರಿ ೨೦೦೭ರ 'ಹೊಸತು' ಸಂಚಿಕೆಯಲ್ಲಿನ, ಶ್ರೀಮತಿ ಬಿ. ಎಸ್. ಶೈಲಜಾ ಅವರ, 'ರಾಹುಗೊಂದು ಕಾಲ ಏಕೆ?' ಎಂಬ ಲೇಖನದಲ್ಲಿ 'ರಾಹುಚಕ್ರ' ಎಂಬೊಂದು ಚಿತ್ರವಿದೆ. ಅದರಲ್ಲಿ ಉತ್ತರಕ್ಕೆ ಮುಖಮಾಡಿದರೆ ಬಲಕ್ಕೆ ಪಶ್ಚಿಮವನ್ನು ಗುರುತಿಸಿದೆ. ಅದು ರಾಹುಚಕ್ರದ ವಿಶೇಷವೋ? ವಿವರಣೆ ದೊರೆಯಬಹುದೆ?

ರಾಹುಕಾಲವೆಂಬ ನಂಬಿಕೆಯನ್ನು ಬಹಳ ಸೂಕ್ಷ್ಮವಾಗಿ 'ಮೂಢ' ಮಾಡಿರುವ ಲೇಖಕಿಯ ಶೈಲಿ ಮೆಚ್ಚುವಂತಹುದು. ಮುಖಪುಟ ಚಿತ್ರವನ್ನು ಆರಿಸಿದ ಸಹನ ಅವರಿಗೆ ವಂದನೆಗಳು.

ಬಿ.ಎಸ್. ಮಯೂರ

ಮೈಸೂರು

ಅಲ್ ಬರೂನಿಯ ಪುಸ್ತಕದಲ್ಲಿರುವ ಚಿತ್ರವನ್ನು ಯಥಾವತ್ತಾಗಿ ನಕಲು ಮಾಡಿದ್ದೇನೆ: ಇದನ್ನು ಬಳಸುತ್ತಿದ್ದುದು ಜೂಜಾಟಕ್ಕಾಗಿ ಎಂಬ ಒಂದೇ ಕಾರಣದಿಂದ. ಇದರ ಯಾವುದೇ ವೈಜ್ಞಾನಿಕ ವಿವರಣೆಯನ್ನು ಹುಡುಕುವುದು ಅನುಚಿತ ಎನಿಸುತ್ತದೆ. ನಕ್ಷೆಯಲ್ಲಿ ಉತ್ತರದ ಬಲಭಾಗಕ್ಕೆ ಪಶ್ಚಿಮವನ್ನು ಗುರುತಿಸಿದೆ ಎಂಬ ಅಂಶವನ್ನು ಗುರುತಿಸಿರುವುದು ಸಂತೋಷ. ನಭಾವಲೋಕನದ ಎಲ್ಲಾ ನಕ್ಷೆಗಳಲ್ಲೂ ಇದೇ ಅಂಶವನ್ನು ಗಮನಿಸಬಹುದು. ಈ ನಕ್ಷೆಯನ್ನು ಮೇಲೆತ್ತಿ ಹಿಡಿದು ವೀಕ್ಷಿಸಬೇಕಾಗಿರುವುದೇ ಇದಕ್ಕೆ ಕಾರಣ. ಇದನ್ನು ರಾಹುಚಕ್ರಕ್ಕೆ ವಿಸ್ತರಿಸುವಂತಿಲ್ಲ ಎಂದು ಗಮನಿಸಿ.

ಬಿ. ಎಸ್. ಶೈಲಜಾ

ಬರಕೋ', ಡಾ॥ ಮಲ್ಲಿಕಾರ್ಜುನ ಸಿಂಧಗಿಯವರ 'ಶ್ರೀ ಶಿಶುನಾಳ ಷರೀಫರ ತತ್ವ ಪದಗಳು', ಡಾ॥ ಡಿ. ಎಸ್. ಕರ್ಕಿ ಹಾಗೂ ಶ್ರೀ ತಲ್ಲೂರು ರಾಮನಗೌಡರ ಷರೀಫರ ಜನಪ್ರಿಯ ಪದಗಳು ಮುಂತಾದ ಕೃತಿಗಳು ಸಂತರ ಜೀವನ ಹಾಗೂ ತತ್ವಗಳ ಮೇಲೆ ಬೆಳಕು ಚೆಲ್ಲುತ್ತವೆ.

ಲೋಕದ ಅಂಕು-ಡೊಂಕನ್ನು ವಚನಗಳ ಮೂಲಕ ತಿದ್ದಿದ ಬಸವಾದಿ ಪ್ರಮಥರಂತೆ, ಸರಳಗನ್ನಡದಲ್ಲಿ ಈ ನೆಲದ ಸತ್ವ, ತತ್ವ, ಸಿದ್ಧಿ, ಬುದ್ಧಿಯ ಪ್ರತಿರೂಪವಾಗಿ ಸಂತರು ಕಂಪು ಬೀರಿದರು. ಶಿವಪಥ ಹಾಗೂ ಗುರುಪಥಗಳ ಸಂಕಲನವೇ ಷರೀಫರ ವ್ಯಕ್ತಿತ್ವವಾಗಿತ್ತು. ಶಿಶುನಾಳಾಧೀಶ ಹಾಗೂ ಗುರು ಗೋವಿಂದ ಭಟ್ಟರು ಸಂತರ ಅರಿವಿನ ಎರಡು ಕಂಗಳು. ಸನ್ಮಾರ್ಗದ ಮೂಲಕ ಸಕಲ ಜೀವಿಗಳಿಗೆ ಲೇಸ ಬಯಸಿ ತನ್ನ ತಾನರಿಯಬೇಕೆಂಬುದು ಇವರ ತತ್ವದ ಸಾರ. ತ್ರಿಕಾಲವಂದ್ಯರಾದ ಷರೀಫ ಶಿವಯೋಗಿಗಳ ಹೆಸರಿನಲ್ಲಿ ಶೈಕ್ಷಣಿಕ ಸೇವೆ, ಸಮಾಜ ಸೇವೆ, ಅನ್ನದಾಸೋಹಗಳು ಶಿಶುನಾಳು ಹಾಗೂ ಇತರ ಸ್ಥಳಗಳಲ್ಲಿ ನಿರಂತರ ನಡೆದಿದೆ.

ಹಾವೇರಿ ಜಿಲ್ಲೆಯ ಈ ಮೇಲಿನ ಪ್ರಮುಖ ಮೂರು ದಾರ್ಶನಿಕರನ್ನು ನೆನೆದಾಗ ಈ ನೆಲದಲ್ಲಿ ಜನಿಸಿದವರು ಪುಣ್ಯವಂತರು ಎಂದೆನಿಸುತ್ತದೆ. ಅಭಿಮಾನ ಉಕ್ಕಿಬರುತ್ತದೆ. ಸರ್ವಜ್ಞನ ಊರುಗೋಲು ಹಾಗೂ ಕವಿ ಸಂತರ ತಂಬೂರಿಗಳು ಈ ಜಿಲ್ಲೆಯ ಕನ್ನಡಿಗರ ಧ್ವನಿಯನ್ನು ಪ್ರತಿಧ್ವನಿಸುತ್ತವೆ. ಮನುಜ ಕುಲದ ಶ್ರೇಷ್ಠತೆ ಸಾರುವ ಹಾಗೂ ಭಾಷೆ ಮತ್ತು ಸಾಹಿತ್ಯದ ಬಾವುಟ ಹಾರಿಸುವ ಸಂಸ್ಕೃತಿ ಈ ನೆಲದಲ್ಲಿ ರಾರಾಜಿಸಿದೆ. ಅಂತೆಯೇ ಸುವರ್ಣ ಕರ್ನಾಟಕ ಆಚರಣೆಗೆ ತಾತ್ವಿಕ ಚಿಂತನೆ ದಾರಿದೀಪವಾಗಿದೆ. ಹಾವೇರಿ ಜಿಲ್ಲೆಯ ಹಾಗೂ ಕನ್ನಡ ನಾಡಿನ ಸಮಸ್ತ ಜನತೆಗೆ ಖ್ಯಾತ ಕವಿ ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರ ಪದ್ಯದ ಈ ಕೆಳಗಿನ ಸಾಲುಗಳು ದಾರ್ಶನಿಕರನ್ನು ಕುರಿತು ಮಾರ್ಗದರ್ಶಕವಲ್ಲವೇ ? ಹೊಳೆವ ಬುದ್ಧಿಗೆ ಇಲ್ಲುಂಟು ಅನಂತ ಅವಕಾಶ/ಹೊಳೆದದ್ದೇ ತಾರೆ ಉಳಿದದ್ದು ಆಕಾಶ.

ಬೆಳಗಾವಿ **ಡಾ॥ ಐ. ಎ. ಲೋಕಾಪುರ**

**ಮಾರ್ಚ್ ಸಂಚಿಕೆ**

'ವಾಸ್ತುಭೂತ'ದ ಬಗ್ಗೆ ಒಂದು ಅನುಭವದ ಮಾತು : ವೃತ್ತಿ ಸಂಬಂಧವಾಗಿ ಸರ್ಕಾರಿ ಗೃಹದಲ್ಲಿ ವಾಸವಿದ್ದೆ. ಸರ್ಕಾರಿ ಗೃಹಗಳಲ್ಲಿ ಸಾಮಾನ್ಯವಾಗಿ ಅಡಿಗೆಮನೆಯಲ್ಲಿ ಹೆಚ್ಚಿನ ಚಜ್ಜಗಳನ್ನು ಅಳವಡಿಸಿ, ಬೇಡವಾದ ಸಾಮಾನುಗಳನ್ನು ಇರಿಸಲು ಅನುಕೂಲವಿರುತ್ತೆ. ಪಕ್ಕದಮನೆಯಲ್ಲಿ ಇದ್ದ ಒಬ್ಬರು ಮೆಕಾನಿಕಲ್ ಎಂಜಿನಿಯರ್‌ರಿಗೆ ವಾಸ್ತುವಿನಲ್ಲಿ ಅತೀವ ನಂಬಿಕೆ. ಅವರ ಅನೇಕ ಕೌಟುಂಬಿಕ ಕಷ್ಟಗಳ ಪರಿಹಾರಕ್ಕಾಗಿ, ಜ್ಯೋತಿಷಿಯೊಬ್ಬರನ್ನು ಕರೆಸಿದ್ದರು. ಅವರು ಬಂದು ಮನೆಯನ್ನೆಲ್ಲ ಒಮ್ಮೆ ಪರಿಶೀಲಿಸಿ, ಅಡಿಗೆ ಮನೆಯ ಚಜ್ಜವನ್ನೂ ನೋಡಿ ಕೆಟ್ಟದಾಗಿ ತಲೆಯಾಡಿಸಿದರು. ಮನೆಯವರು ಆ ಚಜ್ಜದ ಕೆಳಗೆ ದೇವರನ್ನು ಪ್ರತಿಷ್ಠಾಪಿಸಿದ್ದರು. ಜ್ಯೋತಿಷಿಗಳು, ''ಅಲ್ಲಾ, ಚಜ್ಜದ ಕೆಳಗೆ ದೇವರನ್ನು ಇಟ್ಟು, ದೇವರ ತಲೆಯಮೇಲೆ (ಚಜ್ಜದ ಮೇಲೆ) ಇಷ್ಟೊಂದು ಭಾರವನ್ನು ಇರಿಸಿದ್ದೀರಲ್ಲಾ, ನಿಮಗೆ ಕಷ್ಟಗಳು ಬರದೇ ಇರುತ್ತವೆಯೇ'' ಎಂದು ಉದ್ಗರಿಸಿದರು. ''ಕಷ್ಟ ಬಂದಾಗ ನಾವು ದೇವರ ತಲೆಯಮೇಲೇ ಅಲ್ಲವೇ ನಮ್ಮ ಭಾರವನ್ನು ಹೊರಿಸುವುದು'' ಎಂದೆ. ನನ್ನ ಬಗ್ಗೆ ವಿಚಾರಿಸಿ, ಅದೇ ಮನೆಯವನಲ್ಲವೆಂದು ತಿಳಿದನಂತರ ಹೊರಗೆ ಕಳಿಸಿ, ಮನೆಯವರಿಗೆ ತಮ್ಮ ಅಮೂಲ್ಯ ಸಲಹೆಗಳನ್ನು ನೀಡಿದರು, ಆ ಜ್ಞಾನಿಗಳು. ಅನಂತರ ನನ್ನ ಅನೇಕ ವಿವರಣೆಗಳಿಂದಲೂ ತೃಪ್ತರಾಗದ ನನ್ನ ಸ್ನೇಹಿತರು, ಜ್ಯೋತಿಷಿಗಳು ನೀಡಿದ ಸಲಹೆಯಂತೆಯೇ ಆ ಮನೆಗೆ ಸ್ವಂತ ಖರ್ಚಿನಲ್ಲಿ ಅನೇಕ ಬದಲಾವಣೆಗಳನ್ನು ಮಾಡಿಸಿದರು. ತತ್‌ಕ್ಷಣಕ್ಕಂತೂ ಅವರ ಕಷ್ಟಗಳೇನೂ ಪರಿಹಾರವಾದಂತೆ ಕಂಡುಬರಲಿಲ್ಲ.

ಸುಮಾರು ೮-೧೦ ವರ್ಷಗಳ ಹಿಂದೆ, ನನ್ನ ಸಂಬಂಧಿಯೊಬ್ಬರ ಮನೆಯಲ್ಲಿ, ಇಂದು ಟಿ.ವಿ.ಯಿಂದ ತಾರಾಮೌಲ್ಯಗಳಿಸಿರುವ ಇನ್ನೊಬ್ಬ ಜ್ಯೋತಿಷಿ ಹಾಗೂ ವಾಸ್ತುತಜ್ಞರೊಡನೆ ನಡೆದ ಮುಖತಃ ಭೇಟಿ ಮತ್ತು ಸಂಭಾಷಣೆ (ಇದೇ ಕ್ರಮದಲ್ಲಿ ಮತ್ತು ಹೀಗೇ ನಡೆದಿಲ್ಲದಿರಬಹುದು) ಇಂದು ಜ್ಞಾಪಕ ಇರುವಂತೆ ಹೇಳಬಯಸುತ್ತೇನೆ.

ನಾನು : ''ಸ್ವಾಮಿ, ನಾನೊಂದು ಸೈಟ್ ಕೊಳ್ಳಲು ಸಿ.ಐ.ಟಿ.ಬಿ.ಗೆ ಅರ್ಜಿ ಹಾಕಿದ್ದೇನೆ. ಅವರು ಕೊಡುವ ಯಾವುದೇ ಸೈಟನ್ನು ತಕರಾರಿಲ್ಲದೆ ನಾನು ಒಪ್ಪಿಕೊಳ್ಳಲೇಬೇಕು. ಅದರ ವಾಸ್ತು ಸರಿಬರದಿದ್ದರೆ ಹೇಗೆ ?''

ಅವರು : ''ವಾಸ್ತು ಸರಿಯಿರದಿದ್ದರೆ, ಅದಕ್ಕೆ ಪರಿಹಾರವಿದೆ. ವಾಸ್ತುಪುರುಷನ ಓಡಾಟಕ್ಕೆ, ದಾರಿ ಸುಗಮವಾಗುವಂತೆ ಕೆಲವೆಡೆ ಜಾಗ ಬಿಡಬೇಕು. ಅಥವಾ ಪ್ರತಿಬಂಧಿಸಲು ಗೋಡೆ ಕಟ್ಟಬೇಕು.''

ನಾನು : ''ಹಾಗೆ ಬೇಕಾದೆಡೆ ಜಾಗ ಬಿಟ್ಟು, ಬೇಡವಾದಲ್ಲಿ ಗೋಡೆ ಕಟ್ಟಿದರೆ, ಇರುವ ೩೦-೪೦ರ ಸೈಟಿನಲ್ಲಿ ನಮಗೆ ವಾಸಕ್ಕೆ ಜಾಗ ಸಿಗುವುದೇ ?''

ಅವರು : ''ಇರುವುದರಲ್ಲಿ ಅಡ್ಜೆಸ್ಟ್ ಮಾಡಿಕೊಳ್ಳಬೇಕಾಗುತ್ತೆ.''

ನಾನು : ''ಹೀಗೆಯೇ ನಾವು ಈ ದೇಶದಲ್ಲಿ ಅಡ್ಜೆಸ್ಟ್ ಮಾಡಿಕೊಳ್ಳುತ್ತಿದ್ದೇವೆ. ಅಂದಹಾಗೆ ನಮ್ಮ ದೇಶದ ವಾಸ್ತು ಏನನ್ನುತ್ತೆ ?''

ಅವರು : ''ನಾನು ಅದನ್ನೂ ಪರಿಶೀಲಿಸಿದ್ದೇನೆ. ಭಾರತದ ಭವಿಷ್ಯ ಬಹಳ ಉಜ್ವಲವಾಗಿದೆ.''

ನಾನು : ''ಪೂರ್ವಕ್ಕೆ ಯುದ್ಧಾತುರವಾದ ಮುಸ್ಲಿಂ ರಾಜ್ಯ. ಪಶ್ಚಿಮಕ್ಕೆ ತನ್ನ ಜನಗಳನ್ನು ಸಾಕಲಾರದೆ ನಮ್ಮ ದೇಶದೊಳಕ್ಕೆ ತಳ್ಳುತ್ತಿರುವ ಮತ್ತೊಂದು ರಾಜ್ಯ. ಉತ್ತರದಲ್ಲಿ ಹೂಣರು, ದಕ್ಷಿಣದಲ್ಲಿ ಹುಲಿಗಳ ರಾಜ್ಯ. ದೇಶದೊಳಗೆ ಭ್ರಷ್ಟ ರಾಜಕಾರಣಿಗಳು, ಸೋಮಾರಿ ಅಧಿಕಾರಿಗಳು, ನಿರಾಸಕ್ತ ವಿದ್ಯಾವಂತರು, ನಿರುದ್ಯೋಗಿ ಯುವಕರು, ದಂಗೆಯೇಳುವ ಬುದ್ಧಿವಂತರು, ಇನ್ನೂ ಸಬಲರಾಗದ ಅಬಲೆಯರು, ಇತ್ಯಾದಿಗಳಿರುವಾಗ ದೇಶದ ಭವಿಷ್ಯ ಉಜ್ವಲ ಹೇಗೆ ?''

ಅವರು : ''ಇವೆಲ್ಲಾ ಸುಖದ ಮುಂಚಿನ ಕಷ್ಟಗಳು. ಸಿಹಿಯ ರುಚಿ ಸವಿಯಬೇಕಾದರೆ, ಕಹಿಯ ಅನುಭವ ಇರಬೇಕು.''

ನಾನು : ''ವಾಸ್ತುವನ್ನು ನಂಬದೆ, ವಾಸ್ತುವಿನ ಪ್ರಕಾರ ಸರಿಯಿಲ್ಲದ ಮನೆಗಳಲ್ಲಿ ವಾಸಿಸುತ್ತಿರುವ ಅನೇಕರಿದ್ದಾರಲ್ಲ ?''

ಅವರು : ''ವಾಸ್ತುವೇ ಆಗಲಿ, ದೇವರ ಅಸ್ತಿತ್ವವೇ ಆಗಲಿ, ಅದು ನಮ್ಮ ನಮ್ಮ ನಂಬಿಕೆಯಂತೆ ಫಲ ಕೊಡುತ್ತದೆ. ನೀವು ನಂಬಿ ಅಥವಾ ಬಿಡಿ, ವಾಸ್ತು ಇದ್ದೇ ಇರುತ್ತದೆ ಮತ್ತು ಅದರ ಫಲಾಫಲಗಳು ನಿಮಗೆ ಗೊತ್ತಾಗಿಯೊ ಗೊತ್ತಾಗದೆಯೊ ಲಭಿಸುತ್ತಿರುತ್ತವೆ. ಆದರೂ ಯಾಕೋ ನಿಮ್ಮ ಪ್ರಶ್ನೆಯ ಧಾಟಿ ಸರಿಯಿಲ್ಲ.''

ನಾನು : ''ಹಾಗೇನೂ ಇಲ್ಲ ಸ್ವಾಮಿ, ಗೊತ್ತಿಲ್ಲದ್ದನ್ನು ನಿಮ್ಮಿಂದ ಕೇಳಿ ತಿಳಿದುಕೊಳ್ಳಲೆಂದೇ ನಿಮ್ಮನ್ನು ಕೇಳುತ್ತಿದ್ದೇನೆ.''

ಅವರು : (ತುಸು ಕೋಪದಿಂದ) ''ನನ್ನನ್ನು ಕೆಣಕಲೆಂದೇ ನೀವು ಬಂದಿದ್ದೀರೆಂದು ಅರ್ಥವಾಯಿತು. ತಿಳಿಹೇಳಿದರೆ ಲೆಕ್ಕಿಸದ, ಅರ್ಥವಾದರೂ ಅರ್ಥವಾಗದವರಂತೆ ನಟಿಸುವ, ಹಿರಿಯರಿಗೆ ಮತ್ತು ತಿಳಿದವರಿಗೆ ಗೌರವಕೊಡದೆ ಇರುವ ನಿಮ್ಮಂಥವರೊಡನೆ ಮಾತನಾಡಲು ನನಗೆ ಇಷ್ಟವಿಲ್ಲ.''

ಮೈಸೂರು **ಎಸ್. ಆರ್. ಕೃಷ್ಣಮೂರ್ತಿ**

ಡಾ॥ ಸಿದ್ದನಗೌಡ ಪಾಟೀಲರ ವಿಶೇಷ ಆರ್ಥಿಕ ವಲಯ ಕುರಿತ ಲೇಖನ ಮೊನಚಾಗಿದೆ. ಜಾಗತೀಕರಣದ ಹೆಸರಿನಲ್ಲಿ ಜಾಗ ಕಬಳಿಸುವ ನೀತಿ ಇದು ಎಂದರೆ ಅತಿಶಯೋಕ್ತಿಯಲ್ಲ. ಲೇಖಕರ ಪ್ರತಿಪಾದನೆ ಈ ನಿಟ್ಟಿನಲ್ಲಿ ಶ್ಲಾಘನೀಯ. ಈಗಾಗಲೆ ಈ ಜಾಗತೀಕರಣದ ಪಿಡುಗು ನಮ್ಮನ್ನು ಆರ್ಥಿಕ ಗುಲಾಮ ನೀತಿಗೆ ಕೊಂಡೊಯ್ಯುತ್ತಿರುವುದನ್ನು ಕೈಗಾರಿಕಾ ಕ್ಷೇತ್ರದಲ್ಲಿನ ಸಣ್ಣ ಮತ್ತು ಮಧ್ಯಮ ಉದ್ದಿಮೆದಾರರು ಅನುಭವಿಸುತ್ತಿರುವ ಈ ಸಮಯ, ಜಾಗತೀಕರಣದ ನೀತಿಯ ವಿರುದ್ಧ ಜನಾಂದೋಲನವೇ ಇಂದಿನ ಪ್ರಥಮ ಆದ್ಯತೆಯಾಗಿರುವುದನ್ನು ನಿಜವಾದ ಭಾರತೀಯ ಒಪ್ಪಲೇಬೇಕು.

ಬೆಂಗಳೂರು **ನೆ. ಲ. ರಾಮಮೂರ್ತಿ**

ಸುಂದರ ಸೃಷ್ಟಿಯ ಮುಖಪುಟ ಆಕರ್ಷಕ. ಪುಟಪುಟವೂ ನವ್ಯ. ಕನ್ನಡಿಗರ ಹೆಮ್ಮೆಯ ಪತ್ರಿಕೆ 'ಹೊಸತು'. ಕುಸುಮ ನಕೋಸಾ ಕರಾಳೆಯವರ 'ದಿಟ್ಟ ಹುಡುಗಿ!' ಚೆನ್ನಾಗಿತ್ತು. ನಡುವಿನಕೇರಿಯವರ 'ನನ್ನ ಪ್ರೀತಿಯ ರೀತಿ' ಸೊಗಸಾಗಿತ್ತು. ಡಾ॥ ಮಹಾಬಲೇಶ್ವರ ರಾವ್‌ರವರ 'ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಕೆ - ಮಾಡಬೇಕಾದುದೇನು ?' ಎಂಬುದು ಅರ್ಥಪೂರ್ಣ ಸಮಯೋಚಿತ ಲೇಖನ. ಕೆ. ಷರೀಫಾ ಅವರ 'ಪ್ರಭುವೇ ! ನೀನೊಮ್ಮೆ ಹೆಣ್ಣಾಗು' ಮನಮೆಚ್ಚಿತು. ಹೊಸ ಹೊಸ ವಿಚಾರಗಳ ತರಂಗಗಳ ಸಂಕಲನವೇ 'ಹೊಸತು'.

ಲಕ್ಷ್ಮೇಶ್ವರ, ಗದಗ **ಬಸವರಾಜ ಶಿ. ಬಾಳೇಶ್ವರಮಠ**

ಜನವರಿ ೨೦೦೭ರ 'ಹೊಸತು' ಹಿಂದಿನ ಎಲ್ಲ ವಿಶೇಷ ಸಂಚಿಕೆಗಳಿಗಿಂತ ಭಿನ್ನವೆನಿಸಿತು. ಕುತೂಹಲದಿಂದ ಮೊದಲು ನೋಡಿದ್ದು ಸಂಪಾದಕೀಯ. ಅಲ್ಲಿನ ಹಲವು ವಿಷಯಗಳು ಪ್ರಸ್ತುತ ಸ್ಥಿತಿಗಳ ಮೇಲೆ ಸ್ಪಷ್ಟ ನಿಲುವು ಪ್ರಕಟಿಸಿವೆ. ಸಂಬಂಧಿಸಿದವರು ಇತ್ತ ಕಡೆ ಗಮನಿಸಿ ಕಾರ್ಯಪ್ರವೃತ್ತರಾಗುತ್ತಾರೆಂದು ಭಾವಿಸೋಣವೇ ? ಒಳ ಹೂರಣದಲ್ಲಿ ಹಳೆಯ ಕತೆ 'ಬಸಪ್ಪನ ಜಮೀನು' (ನ. ಸುಬ್ರಹ್ಮಣ್ಯಂ) ಆಡಳಿತ ನೌಕರಶಾಹಿಯ ಕಾರ್ಯಕ್ಷಮತೆ(?)ಗೆ ನಿದರ್ಶನ. ಇವರು ಏನಾದರೂ ಮಾಡಲು ಸಿದ್ಧ ಎನ್ನುವುದಕ್ಕೆ ಸಾಕ್ಷಿಯಾಗಿದೆ. ಪ್ರೊ॥ ಎಂ. ಎಸ್. ತಿಮ್ಮಪ್ಪ ಮತ್ತು ಪ್ರೊ॥ ನರಹರಿ ಅವರು ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದಂತೆ ಬರೆದ ಲೇಖನಗಳು ಸಕಾಲಿಕವಾಗಿವೆ. ಉನ್ನತ ಶಿಕ್ಷಣಕ್ಕೆ ಅನುದಾನ ಹೆಚ್ಚಾಗುವುದರ ಜೊತೆಗೆ ಅದರ ಬಳಕೆಯೂ ಸಮರ್ಪಕ ಮತ್ತು ಯೋಗ್ಯವೂ ಆಗಿರತಕ್ಕದ್ದು. ಸಂಶೋಧನಾ ಚಟುವಟಿಕೆಗಳನ್ನು ಇರುವಂಥ ಕೆಲವೇ ವಿಶ್ವವಿದ್ಯಾಲಯಗಳು ಸಾಕಷ್ಟು ನಡೆಸುತ್ತಿಲ್ಲವಾದ್ದರಿಂದ ದೇಶದಲ್ಲಿ ಹಲವು ವಲಯಗಳು ಯಥಾಸ್ಥಿತಿಯನ್ನು ಮುಂದುವರೆಸಿಕೊಂಡು ಹೋಗುತ್ತಿವೆ. ಬದಲಾವಣೆ ಬಿಸಿಲ್ಗುದುರೆಯಾಗಿದೆ.

ಸೇಡಂ **ಬಿ. ಆರ್. ಅಣ್ಣಾಸಾಗರ್**

೩ನೇ ಪುಟದಿಂದ (ಈ ತಿಂಗಳು)

ವಾಗುವುದಿಲ್ಲವಾದ್ದರಿಂದ ಅದನ್ನು ಆಮೂಲಾಗ್ರವಾಗಿ ಬದಲಾಯಿಸಿ ತರ್ಕಬದ್ಧವಾದ ಹಂಚಿಕೆಯನ್ನು ಮಾಡಲು ಮಂಡಲಿ ಕಾರ್ಯಮಗ್ನವಾಗಬೇಕು. ರಾಷ್ಟ್ರಪತಿ ಆಳ್ವಿಕೆಯನ್ನು ಹೇರಿ, ಸೈನ್ಯವನ್ನು ಬಳಸಿ, ಕರ್ನಾಟಕದಿಂದ ನೀರನ್ನು ಬಿಡಬಹುದೆಂಬ ಭಾವನೆಯೇನಾದರೂ ಮಂಡಲಿಯಲ್ಲಿದ್ದರೆ ಅದನ್ನು ಮೊದಲು ಚಿವುಟಿ ಹಾಕಿಕೊಂಡು ಬೇರೊಂದು ಹಂಚಿಕೆಯ ಸೂತ್ರವನ್ನು ರೂಪಿಸಬೇಕು. (ಒ) ಕರ್ನಾಟಕದಲ್ಲಿ ಭತ್ತದ ಬೆಳೆಗೆ ಎರಡು ಋತುಗಳು ಮಾತ್ರ ಇವೆ; ಆದರೆ ತಮಿಳುನಾಡಿಗೆ ನಾಲ್ಕು ಇವೆ. (೧೮ ಡಿಗ್ರಿ ಸೆಂಟಿಗ್ರೇಡ್‌ಗಿಂತಲೂ ಕಡಿಮೆ ತಾಪಮಾನವು ಕಾಳನ್ನು ಜೊಳ್ಳಾಗಿಸುತ್ತದೆ. ಬೆಳೆ ಇಟ್ಟಿರುವಾಗ ಯಾವೊಂದು ಕ್ಷಣದಲ್ಲೂ ತಾಪಮಾನವು ಅಷ್ಟು ಕಡಿಮೆಯಾಗಬಾರದು. ಕರ್ನಾಟಕದಲ್ಲಿ ಅದು ಆಗುವ ಸಾಧ್ಯತೆ ಉಂಟು). ಹೀಗಿರುವಾಗ ತಮಿಳುನಾಡು ಎಸ್.ಆರ್.ಐ. ಪದ್ಧತಿಯನ್ನು ಅಳವಡಿಸಿಕೊಳ್ಳಬೇಕಾದ್ದು ಅನಿವಾರ್ಯ. (ಓ) ಚೀಣಾದಲ್ಲಿ ಕಳೆದ ದಶಕದಲ್ಲಿ ಅನುಷ್ಠಾನಕ್ಕೆ ತಂದ ತಂತ್ರಜ್ಞಾನವನ್ನು ಬಳಸಿದರೆ ಮೂರು ಬೆಳೆಗಳಲ್ಲಿ ನಾಲ್ಕು ಬೆಳೆಗಳ ಇಳುವರಿಗೆ ಸಮನಾದ ಇಳುವರಿ ಪಡೆಯಲು ತಮಿಳುನಾಡಿಗೆ ಸಾಧ್ಯವಿದೆ. ಅದನ್ನು ರೈತರಿಗೆ ತಿಳಿಸಿಕೊಡುವ ಕೆಲಸ ಆಗಬೇಕು.

ಕಾವೇರಿ ನ್ಯಾಯಮಂಡಲಿಗೆ ಕರ್ನಾಟಕವು ಸಲ್ಲಿಸುವ ಮರುಪರಿಶೀಲನಾ ಅರ್ಜಿಯಲ್ಲಿ ಇವು ಮತ್ತು ಇಂತಹ ಬೇರೆ ಹತ್ತಾರು ಅಂಶಗಳು ಸೇರ್ಪಡೆಗೊಳ್ಳಬೇಕು. ಸಾರ್ವಜನಿಕರಿಗೆ ಸರ್ಕಾರವು ತನ್ನ ಅಭಿಪ್ರಾಯಗಳನ್ನು ಮೊದಲೇ ತಿಳಿಸಬೇಕಾದ ತುರ್ತು ಅಗತ್ಯವಿದೆ. ಆಗ ಅರ್ಜಿಯಲ್ಲಿ ಏನೂ ಬಿಟ್ಟುಹೋಗದಂತೆ ಸಮಗ್ರವಾದ ವಿಷಯಗಳನ್ನು ಅಡಕಗೊಳಿಸಬಹುದು. ತನ್ನೆಲ್ಲ ಅಭಿಪ್ರಾಯಗಳನ್ನು ಕ್ರೋಡೀಕರಿಸಿ ಸರ್ಕಾರವು ಕೂಡಲೆ ಒಂದು ಕಿರುಹೊತ್ತಿಗೆಯನ್ನು ಸಾರ್ವಜನಿಕರ ಮುಂದಿಡುವುದು ಸೂಕ್ತವಾಗಿರುತ್ತದೆ.

* * *

ಪಶ್ಚಿಮ ಬಂಗಾಳದ ನಂದಿಗ್ರಾಮವು ಉಲ್ಬಣಗೊಂಡ ಪರಿಸ್ಥಿತಿಗೆ ನೂಕಲ್ಪಟ್ಟಿದೆ. ಪೊಲೀಸರು ಗುಂಡು ಹಾರಿಸಿದ್ದರಿಂದ ಹದಿನಾಲ್ಕು ಜನ ಹತರಾಗಬೇಕಾಗಿಬಂದದ್ದು ಯೋಗ್ಯವಲ್ಲದ ಅಕ್ರಮ. ಎಡರಂಗದ ಸರ್ಕಾರದ ಅನಪೇಕ್ಷಣೀಯ ಸೋಲು ಇದು. ಸರ್ಕಾರದಲ್ಲಿರುವ ಪಕ್ಷಗಳು ಸಹ ಪೊಲೀಸ್ ಕಾರ್ಯಾಚರಣೆಯನ್ನು ಖಂಡಿಸಿರುವುದು ಮತ್ತು ಅಂತಹ ಘಟನೆ ಮರುಕಳಿಸಕೂಡದೆಂದು ಒತ್ತಾಯಿಸಿರುವುದು ಆರೋಗ್ಯಕರ ಸೂಚನೆಯಾಗಿದೆ. ಜನ ನೆರೆದಿದ್ದ ಮಾತ್ರಕ್ಕೆ ಅಷ್ಟೊಂದು ಅಗಾಧವಾದ ಪೊಲೀಸ್ ತುಕಡಿಯನ್ನು ಕಳಿಸಬೇಕಾಗಿರಲಿಲ್ಲ; ಮತ್ತು ಎಡರಂಗ ಸರ್ಕಾರದಲ್ಲಿ ಭಾಗಿಗಳಾಗಿರುವ ಎಲ್ಲ ಪಕ್ಷಗಳಿಗೂ ಅದನ್ನು ಮೊದಲೇ ತಿಳಿಸಿರದಿದ್ದುದೂ ಒಂದು ಪ್ರಮಾದ. ವಿಶೇಷ ಆರ್ಥಿಕ ವಲಯದ ರಚನೆಗೆಂದು ಭೂಮಿಯನ್ನು ಬಲವಂತವಾಗಿ ರೈತರಿಂದ ಕಸಿಯುವುದಿಲ್ಲವೆಂದು ಎಡರಂಗ ಸರ್ಕಾರವು ಮೊದಲೇ ಘೋಷಿಸಿತ್ತು. ಹಾಗಿದ್ದಾಗ ಮಮತಾ ಬ್ಯಾನರ್ಜಿ ಮತ್ತು ಅವರ ಸಹಯೋಗಿ ಪಕ್ಷಗಳು-ಸಂಸ್ಥೆಗಳು ಸಹಸ್ರ ಸಂಖ್ಯೆಯಲ್ಲಿ ನಂದಿಗ್ರಾಮಕ್ಕೆ ಮುತ್ತಿಗೆ ಹಾಕಿದ್ದು ಸಮರ್ಥನೀಯವಲ್ಲ. ಹೇಗಾದರೂ ಸರಿ, ಸರ್ಕಾರವನ್ನು ಹಿಂಸೆಯ ಅಂಚಿಗೆ ದೂಡಬೇಕೆಂಬ ಅವರ ಸನ್ನಾಹವು ಪೊಲೀಸ್ ಕಾರ್ಯಾಚರಣೆಯಷ್ಟೇ ಖಂಡನೀಯ. ವಿಶೇಷವೆಂದರೆ, ಮಮತಾ ಪಕ್ಷ ಹಾಗೂ ಕಾಂಗ್ರೆಸ್ ಜಾಗತೀಕರಣವನ್ನು ಎಂದೂ ವಿರೋಧಿಸಿಲ್ಲ; ವಿಶೇಷ ಆರ್ಥಿಕ ವಲಯಗಳ ರಚನೆಯನ್ನೂ ಅವು ವಿರೋಧಿಸಿಲ್ಲ. ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಏನಾದರೂ ಲೋಪಗಳಿದ್ದರೆ ಅವುಗಳನ್ನು ಎಡರಂಗದ ಸರ್ಕಾರದ ಜೊತೆ ಮಾತುಕತೆ ನಡೆಸಿ ಪರಿಹರಿಸಿಕೊಳ್ಳಬಹುದಿತ್ತು. ಹಾಗೆ ಮಾಡದೆ ಹಿಂಸಾಚಾರಕ್ಕೆ ಎಡೆಮಾಡಿಕೊಡುವ ಕ್ರಮಗಳನ್ನು ಅನುಸರಿಸುತ್ತಿರುವುದು ಒಂದು ಕೆಟ್ಟ ರಾಜಕೀಯವೆನಿಸಿಕೊಳ್ಳುತ್ತದೆ. ೧೯೫೭ರಲ್ಲಿ ರಚನೆಗೊಂಡ ಕೇರಳದ ಇ.ಎಂ.ಎಸ್. ಸರ್ಕಾರವನ್ನು ಉರುಳಿಸಲು ಇಂದಿರಾ ಗಾಂಧಿ ಅನುಸರಿಸಿದ ಮಾರ್ಗವನ್ನು ಇಂದು ಮಮತಾ ಅನುಸರಿಸುತ್ತಿರುವುದು ಸ್ಪಷ್ಟವಾಗಿದೆ. ಅವರಿಗೆ ಬೇರೆ ಎಲ್ಲೆಲ್ಲಿಂದ ಮತ್ತು ಎಂತಹ ಬೆಂಬಲ ದೊರಕುತ್ತಿದೆಯೆಂಬುದರ ತನಿಖೆಯನ್ನು ಸಿ.ಬಿ.ಐ. ಕೈಗೊಳ್ಳುತ್ತದೆಂದು ನಿರೀಕ್ಷಿಸಬೇಕಾಗಿದೆ. ವಿಶೇಷ ಆರ್ಥಿಕ ವಲಯಗಳ ಸಮರ್ಥಕರೊಂದಿಗೆ ಅದರ ವಿರೋಧಿಗಳೂ ಸೇರಿಕೊಂಡಿರುವುದು ಒಂದು ಅಪರೂಪದ ಬೆಳವಣಿಗೆ. ಎಡರಂಗ ಸರ್ಕಾರವು ತನ್ನೆಲ್ಲ ಕ್ರಮಗಳನ್ನೂ ನೇರವಾಗಿ ಮತ್ತು ಬಹಿರಂಗವಾಗಿ ನಡೆಸದಿದ್ದುದು ಒಂದು ತಪ್ಪು ಹೆಜ್ಜೆಯಾಯಿತು. ಈಗಲಾದರೂ ನಂದಿಗ್ರಾಮದ ವಿದ್ಯಮಾನಗಳ ಬಗ್ಗೆ ಸಂಪೂರ್ಣವಾದ ಮಾಹಿತಿಯನ್ನು ಸರ್ಕಾರವು ಬಹಿರಂಗಗೊಳಿಸಬೇಕು ಮತ್ತು ತನ್ನ ಆರ್ಥಿಕ ಹಾಗೂ ಕೈಗಾರಿಕಾ ನೀತಿಯ ಬಗ್ಗೆ ನಿಷ್ಪಷ್ಟವಾದ ಹೇಳಿಕೆಯನ್ನು ನೀಡಬೇಕು. ಎಡರಂಗ ಸರ್ಕಾರದ ಪತನಕ್ಕೆ ಹವಣಿಸಿರುವ ಶಕ್ತಿಗಳಿಗೆ ಇದಕ್ಕಿಂತಲೂ ಸಮರ್ಥವಾದ ಉತ್ತರ ಬೇರೊಂದಿರಲಾರದು. ಸರ್ಕಾರದಲ್ಲಿರುವ ಎಲ್ಲ ಮಿತ್ರಪಕ್ಷಗಳೂ ಸಮಾನವಾದ ನೀತಿ ಮತ್ತು ಪ್ರತಿಕ್ರಿಯೆ ರೂಪಿಸಿಕೊಳ್ಳಲು ಸಹ ಇದೇ ಸುಗಮವಾದ ಹಾದಿ.

ಸದ್ಯಕ್ಕಂತೂ ನಂದೀಗ್ರಾಮದ ಪ್ರಕರಣ ಮುಗಿದಿದೆ ಎನ್ನಬಹುದು. ಏಕೆಂದರೆ, ಸರ್ಕಾರವು ಅಲ್ಲಿ ಭೂಮಿಯನ್ನು ವಶಪಡಿಸಿಕೊಳ್ಳುವುದಿಲ್ಲವೆಂಬ ತೀರ್ಮಾನವನ್ನು ಪ್ರಕಟಿಸಿದೆ. ಆದರೆ ಆರ್ಥಿಕ ವಲಯಗಳ ಸ್ಥಾಪನೆಯ ಪ್ರಶ್ನೆ ಹಾಗೆಯೇ ಉಳಿದಿದೆ. ಉದ್ಯಮಗಳು ಬೇಕೆಂದರೆ ಎಲ್ಲಿಯಾದರೂ ಸೂಕ್ತ ಸ್ಥಳದಲ್ಲಿ ಭೂಮಿ ಒದಗಿಸಲೇಬೇಕು. ಕರ್ನಾಟಕದಲ್ಲಿ ನಾರಾಯಣ ಮೂರ್ತಿಗಳಂತಹ ಉದ್ಯಮಿಗಳಿಗೆ ಸಾವಿರಾರು ಎಕರೆ ಭೂಮಿಯನ್ನು ಒದಗಿಸಿಕೊಟ್ಟಿರುವುದು ನಿಜವಲ್ಲವೇ? ಎಷ್ಟು ಅಗತ್ಯವೋ ಅದಕ್ಕಿಂತಲೂ ಅಧಿಕವಾಗಿ ಕೆಲವರು ಪಡೆದಿದ್ದಾರೆ. ಅದನ್ನು ಆಗಕೊಡಕೂಡದು, ಮತ್ತು ಮಾರುಕಟ್ಟೆಯ ಬೆಲೆಯನ್ನೇ ವಿಧಿಸಬೇಕು.

* * *

''ಕರಾವಳಿ ಅಲೆ'' ಪತ್ರಿಕೆಯ ನಿರ್ದೇಶಕರಲ್ಲಿ ಇಬ್ಬರನ್ನು ಕರ್ನಾಟಕದ ಸರ್ಕಾರವು ನಡೆಸಿಕೊಂಡಿರುವ ರೀತಿ ಖಂಡನೀಯವಾದ್ದು. ಎರಡು ತಿಂಗಳಿಗೂ ಮುನ್ನ ಶ್ರೀ ಸೀತಾರಾಂ ಬರೆದಿದ್ದ ಒಂದು ಲೇಖನವು ''ಸಾಮಾಜಿಕ ಅಶಾಂತಿ''ಯನ್ನು ಮೂಡಿಸುತ್ತದೆಂಬ ಆಪಾದನೆಯನ್ನು ಮನ್ನಿಸಿ ಪೊಲೀಸರು ಸೀತಾರಾಂ ಅವರನ್ನು ಬಂಧಿಸಿದ್ದರು. ಆದರೆ ಅವರಾಗಲಿ ಅವರ ಪತ್ನಿ ಶ್ರೀಮತಿ ರೋಹಿಣಿಯವರಾಗಲಿ ಮಂಗಳೂರಿನ ಆ ಪತ್ರಿಕೆಯ ಸಂಪಾದಕರು, ಮುದ್ರಕರು ಮತ್ತು ಪ್ರಕಾಶಕರಲ್ಲ. ಪತ್ರಿಕೆಯನ್ನು ಹೊರತರುವ ಸಂಸ್ಥೆಯ ನಿರ್ದೇಶಕರಲ್ಲಿ ಅವರಿಬ್ಬರೂ ಸೇರಿದ್ದಾರೆ, ಅಷ್ಟೆ. ಆದ್ದರಿಂದ ಶ್ರೀಮತಿ ರೋಹಿಣಿಯವರನ್ನು ಬಂಧಿಸಿದ್ದು (ಅದೂ ಈಗಾಗಲೇ ಎರಡು ಬಾರಿ) ಕಾನುನುರೀತ್ಯಾ ಸರಿಯಲ್ಲವೆಂದು ಕಾನೂನುತಜ್ಞರು ಅಭಿಪ್ರಾಯಪಟ್ಟಿದ್ದಾರೆ. ರಾಜಕೀಯ ಶಕ್ತಿಗಳು ತಮ್ಮ ಅಧಿಕಾರವನ್ನು ಹೀಗೆ ದುರುಪಯೋಗ ಮಾಡಿಕೊಳ್ಳುವುದು ಹೊಸತೇನಲ್ಲ; ಆದರೆ ಕರ್ನಾಟಕದ ರಾಜಕೀಯದಲ್ಲಿ ಇದು ಒಂದು ಪಿಡುಗಾಗಿ ಬೆಳೆಯುವ ಎಲ್ಲ ಸೂಚನೆಗಳೂ ಇವೆ. ಪತ್ರಿಕೆಯಲ್ಲಿ ಶ್ರೀ ಸೀತಾರಾಂ ಅವರ ಲೇಖನ ಪ್ರಕಟವಾದ ನಂತರ ಎರಡು ತಿಂಗಳಲ್ಲಿ ಆ ಲೇಖನದಿಂದಾಗಿ ಸಾಮಾಜಿಕ ಅಶಾಂತಿ ಎಂದೂ ಉಂಟಾಗಲಿಲ್ಲವೆಂದು ಪೊಲೀಸರಿಗೆ, ಸರ್ಕಾರಕ್ಕೆ ಮತ್ತು ಸಾರ್ವಜನಿಕರಿಗೆ ತಿಳಿದಿದೆ. ಹಾಗಿದ್ದೂ ಆಪಾದನೆ, ಬಂಧನ, ಹಿಂಸೆ, ಕಿರುಕುಳ, ಪತ್ರಿಕಾ ಸ್ವಾತಂತ್ರ್ಯದ ಹರಣ, ಇವೆಲ್ಲಾ ನಡೆಯುವುದರ ಹಿಂದಿನ ಸಂಚೇನು? ನಮ್ಮ ರಾಜ್ಯದ ಗೃಹಮಂತ್ರಿಗಳು ಇದನ್ನು ಪರಿಶೀಲಿಸಬೇಕೆಂಬ ಪತ್ರಿಕಾರಂಗದ ನಿರೀಕ್ಷೆಯನ್ನು ಅವರು ಹುಸಿಗೊಳಿಸುವುದಿಲ್ಲವೆಂದು ಆಶಿಸಬೇಕಾಗಿದೆ.

* * *

ರಾಜ್ಯದ ಶಾಲೆಗಳ ಪುಸ್ತಕ ಭಂಡಾರಗಳಲ್ಲಿ ಬೈಬಲ್ ಎಂಬ ಗ್ರಂಥವನ್ನು ಇಡಬಾರದೆ? ವಿದ್ಯಾರ್ಥಿಗಳು ಯೇಸುಕ್ರಿಸ್ತನ ಜೀವನ ಚರಿತ್ರೆಯನ್ನು ಓದಬಾರದೆ? ಹಾಗೆ ಓದುವುದು ವಿದ್ಯಾರ್ಥಿಯ 'ಸ್ವ-ಧರ್ಮ'ಕ್ಕೆ ಹಾನಿಯನ್ನುಂಟುಮಾಡುತ್ತದೆಯೆ? ಆ ಪುಸ್ತಕಗಳನ್ನು ಓದಿದರೆ ಮತಾಂತರಗೊಳ್ಳುವ ಸಾಧ್ಯತೆ ಎಷ್ಟು?

– ಈ ಪ್ರಶ್ನೆಗಳು ಕ್ಷುಲ್ಲಕ ಮತ್ತು ಅರ್ಥರಹಿತವೆಂದು ಕೆಲವರಿಗೆ ತೋರಬಹುದು. ಆದರೆ ನಮ್ಮ ರಾಜ್ಯದ ಶಾಸಕರೊಬ್ಬರು ಇಂತಹ ಪ್ರಶ್ನೆಗಳನ್ನು ಮುಂದುಮಾಡಿ ಬೈಬಲ್ ಮತ್ತು ಯೇಸುಕ್ರಿಸ್ತನ ಜೀವನ ಚರಿತ್ರೆಯ ಪುಸ್ತಕಗಳನ್ನು ಶಾಲೆಗಳಿಗೆ ಸರಬರಾಜು ಮಾಡಕೂಡದೆಂದು ಸರ್ಕಾರವನ್ನು ಒತ್ತಾಯಿಸಿದ್ದಾರೆಂದು ವರದಿಯಾಗಿದೆ. ಆ ಜೀವನ ಚರಿತ್ರೆಯನ್ನು ಚೆನ್ನಾಗಿ ಬರೆಯಲಾಗಿದೆಯೇ, ಅದು ಓದಲು ಅರ್ಹವಾದ ಗ್ರಂಥವೇ, ಎಂಬುವ ಪ್ರಶ್ನೆಗಳೇ ಬೇರೆ. ಆದರೆ ಮತಾಂತರದ ಹೆಸರಿನಲ್ಲಿ ಪುಸ್ತಕಗಳನ್ನು ತಿರಸ್ಕರಿಸುವುದು ಒಂದು ಬಾಲಿಶವಾದ, ಆದರೆ ಅಪಾಯಕರವಾದ, ವರ್ತನೆ. ಇಂತಹ ದೃಷ್ಟಿಕೋನವನ್ನು ಪುರಸ್ಕರಿಸಿದರೆ ನಮ್ಮ ವಿದ್ಯಾರ್ಥಿಗಳು ಬಾವಿಯಲ್ಲಿ ವಾಸಿಸುವ ಕಪ್ಪೆಗಳಂತೆ ವಿಶ್ವವನ್ನು ಬಹಳ ಸಂಕುಚಿತವಾಗಿ ತಿಳಿಯುವಂತಾಗುತ್ತಾರೆ. ತಮ್ಮ ತಮ್ಮ ಮತಧರ್ಮಗಳನ್ನು ತಿಳಿಯುವಂತೆ ಇತರ ಮತಧರ್ಮಗಳನ್ನೂ ತಿಳಿಯಬೇಕಾದ್ದು ವಿದ್ಯಾರ್ಥಿಗಳ ಬೌದ್ಧಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ಅಗತ್ಯವಿದೆ. ಸರ್ಕಾರದ ಅಧಿಕಾರಿಗಳಿಗೆ ಹಾಗೂ ರಾಜಕೀಯ ಧುರೀಣರಿಗೆ ಇದರ ತಿಳುವಳಿಕೆ ಮೂಡಿಬರುವುದು ಆರೋಗ್ಯಕರ.

# ನೀವಾದ್ರೂ ಹೇಳಿ... ಸಿದ್ಧ ಏನ್ ಮಾಡ್ಬೇಕು?

ಸಿದ್ಧ ಗೆದ್ದಿದ್ದ!

ಸುಡುಗಾಡ ಹಳ್ಳಿಯ ಸಿದ್ಧ ಕರ್ನಾಟಕ ಲೋಕಸೇವಾ (ಕೆ.ಪಿ.ಎಸ್.ಸಿ.) ಆಯೋಗದ ಕೆ.ಎ.ಎಸ್. ಪರೀಕ್ಷೆಯ ಮುಖ್ಯ ಹಂತದಲ್ಲೂ ಒಳ್ಳೆಯ ಮಾರ್ಕ್ಸ್ ತೆಗೆದಿದ್ದ, ಇಂಟರ್‌ವ್ಯೂ ಒಂದು ಬಾಕಿ ಇತ್ತು. ಹಗಲಿರುಳು ಕಷ್ಟಪಟ್ಟು ಓದಿದ್ದು ಸಾರ್ಥಕವೆನಿಸಿತ್ತು. ಸಿದ್ಧ ಬೀದಿ ದೀಪದ ಕೆಳಗೆ ಕುಳಿತು ಓದ್ದವ್ನಲ್ಲ, ಅವರೂರಲ್ಲಿ ಬೀದಿ ದೀಪಕ್ಕಷ್ಟೇ ಅಲ್ಲ, ಮನೆ ಬೆಳಕಿಗೂ ಕರೆಂಟು ಇಲ್ಲ. ಸರ್ಕಾರದವ್ರು ನೆಟ್ಟ ಕಂಬ ಹಾಗೇ ಇದೆ. ಅದರ ಮೇಲೆ ತಂತಿ ಮಾತ್ರ ಇನ್ನೂ ಹರಿದಿಲ್ಲ. ಸುಡುಗಾಡು ಹಳ್ಳಿಯವರೇ ಆದ ಶಾಸಕ ಬಸಯ್ಯನವ್ರಿಗೂ ಇದೆಲ್ಲ ಗೊತ್ತು... ಆದ್ರೂನೂ ಪ್ರತಿ ಎಲೆಕ್ಷನಲ್ಲೂ ಅವರದು ಒಂದೇ ಮಾತು, ತನ್ನ ಸ್ವಂತ ಖರ್ಚಿನಲ್ಲಾದ್ರೂ ಊರಿಗೆ ಕರೆಂಟ್ ಕೊಡ್ತೀನಂತ. ಜನರಿಗೋ, ಬಸಯ್ಯನವ್ರ ಮೇಲೆ ಏನೋ ಸೆಂಟಿಮೆಂಟಲ್ಲೂ... ನಮ್ಮ ಜಾತಿಯವನಲ್ವಾ ಅಂತ ಆ ಕ್ಷೇತ್ರದಲ್ಲೆಲ್ಲಾ ಬಸಯ್ಯನವ್ರ ಕಡೆಯವರದೇ ಮೆಜಾರಿಟಿ... ಏನ್ ಮಾಡಲಿ, ಮಾಡದೆ ಇರಲಿ ಅವರ ಜಾತಿಯವರಿಂದ ಬಸಯ್ಯನವ್ರಿಗೇನೇ ಯಾವಾಗ್ಲೂ ಸಾಲಿಡ್ ಸಪೋರ್ಟ್. ಬಸಯ್ಯನವ್ರಿಗೆ ಬೆಂಗ್ಳೂರಲ್ಲಿ ದೊಡ್ಡ ಬಂಗ್ಲೆ ಇದ್ರೂ ಊರಲ್ಲಿ ಮಾತ್ರ ಅದೇ ಹಳೇ ಮನೇಲೇ ಅವ್ರಿರೋದು. ಅದೇನೋ ಹೇಳ್ತಾರಲ್ಲಾ... ಅಟ್ಯಾಚ್‌ಮೆಂಟ್, ಅದನ್ನ್ ಹಾಂಗೆ ಉಳ್ಸಿಕೊಂಡವ್ರೆ. ಪ್ರತಿ ಎಲೆಕ್ಷನ್ಗ್ನ ಬಸಯ್ಯನವ್ರಿಗೇ ಸರ್ವ ವರ್ಣ ಸಮನ್ವಿತ, ರಂಗೀಲಾ ಪಾರ್ಟಿಯಿಂದಲೇ ಟಿಕೇಟ್. ತಲೆತಲಾಂತರ ದಿಂದಲೂ ಜನರಿಗೇನೋ ಅಭಿಮಾನ, ರಂಗೀಲಾ ಪಾರ್ಟಿಗೇನೆ ಪ್ರತಿ ಎಲೆಕ್ಷನ್ನೂ ಇವರು ಬತ್ತಿದ್ದೆ... ಅದರ ಜೊತೆಗೆ "ನಮ್ ಬಸ್ಯಾ ಅಲ್ವಾಽಽಽಽ...!" ಅನ್ನೋ ಸೆಂಟಿಮೆಂಟಲ್!

ಸುಡುಗಾಡಹಳ್ಳಿಯ ಜನ ಕರೆಂಟು ಬೇಕು ಅಂತ ಕೇಳ್ತಾನೆ ಇದ್ದಾರೆ... ಕೊಡ್ತೀನಿ... ಕೊಡ್ತೀನಿ ಅಂತ ಬಸಯ್ಯನವ್ರು ಹೇಳ್ತಾನೆ ಅವ್ರೆ. ಕರೆಂಟ್ ಇರದ ಹಳ್ಳೀಲಿ ಇನ್ನು ಸ್ಕೂಲ್ ಇರುತ್ತಾ, ಆಸ್ಪತ್ರೆ ಇರುತ್ತಾ... ಒಳ್ಳೆ ಟಾರ್ ರೋಡ್ ಇರುತ್ತಾ, ಕುಡಿಲಿಕ್ಕೆ ತೊಳೀಲಿಕ್ಕೆ ಬೋರ್‌ವೆಲ್ಲು... ಬಾವಿ...? ಥೇ! ಥೇ! ಅವೆಲ್ಲಾ ಸಾವಕಾಸಾಗಿ ಆದ್ರ ಆಯ್ತದೆ. ಕರೆಂಟ್ ಇದ್ರೆ ಪಕ್ಕದೂರಿನವರ ಹಾಗೆ, ಆ ಟೀವಿ, ಈ ಟೀವಿನೆಲ್ಲಾ ನೋಡ್ಬೋದು, ಅದೇ ಆಸ್ಪತ್ರೆ ಇದ್ರೆ ಏನ್ ಬಂತು...? ಸ್ಕೂಲ್ ಇದ್ರ ಏನ್ ಹೊಟ್ಟೆಗೆ ಅನ್ನ ಸಿಗುತ್ತಾ...? ಹುಡ್ಗ್ರನೆಲ್ಲಾ ಸ್ಕೂಲಿಗೆ ಕಳಿಸಿಬಿಟ್ರೆ, ನಾಳೆ ಅವರು ಹೊಲಕ್ಕೊಯ್ತಾರಾ...? ಕುರಿ ಕಾಯ್ತಾರಾ...? ... ಮತ್ತೆ ಅವ್ನೆಲ್ಲಾ ಯಾರ್ ಮಾಡೋದು...? ರ್‍ವಾಗ... ಗೀಗ ಬಂದ್ರೆ ಊರಲ್ಲಿ ಮಾರಮ್ಮ ಇಲ್ವಾ...? ಮಾರಮ್ಮನ ಹತ್ರ ಇಲ್ದೆ ಹೋಗಿದ್ದು ಡಾಕ್ಟ್ರ ದಬ್ಬಣ್ಣಾಗೆ ಏನ್ ಅಯ್ತೆ...? ಮಾರಮ್ಮಗೆ ಹೇಳ್ಕೊಂಡ್ರೊ... ಕುರೀನೋ, ಕೋಳೀನೋ ಕೊಡ್ತೀನಿ ಅಂದ್ರ ಎಂತ ಕಾಯಿಲೆ ಇದ್ರೂ ಹೊರಟೋಯ್ತದೆ... ಅದ್ಕೂ ಇಳೀಲಿಲ್ಲಾಂದ್ರ, ಅದು ಅವರವರ ಹಣೆಬರ... ಅದ್ಕೆ ಆಸ್ಪತ್ರೇನೇ ಬೇಕಾ...? ಇದು ಸುಡುಗಾಡುಹಳ್ಳಿಯ ನಾಗರಿಕರ ವಾದ. ಬಸಯ್ಯನವ್ರಿಗೂ ಇದು ಚೆನ್ನಾಗಿಯೇ ಗೊತ್ತು... ಅದ್ಕೇನೆ ಪ್ರತಿವರ್ಷಾನೂ ಮಾರಮ್ಮನ ಜಾತ್ರೆಗೆ ತಪ್ದೆ ಬರೋದು. ಅವ್ರೂರ ಮನೆಯಲ್ಲಿ ದೊಡ್ಡ ಪೆಂಡಾಲ ಹಾಕಿ ನೂರಾರು ಜನರಿಗೆ ಬಾಡೂಟ ಹಾಕೋದು. ಮಾರಮ್ಮನ ಆಸೀರ್ವಾದ ಇದ್ರ ಮತ್ತೇನು ಬೇಕು... ಕರೆಂಟ್, ಆಸ್ಪತ್ರೆ, ಸ್ಕೂಲು, ರೋಡು ಏನೂ ಇಲ್ದಿದ್ರೂ... ಜನ ಬತ್ತಿದ್ದೆ ಬಂತು... ಬಸಯ್ಯ ಗೆದ್ದಿದ್ದೆ ಬಂತು!

ಸಿದ್ಧ ಸುಡುಗಾಡಹಳ್ಳಿಯ ಕಲ್ಲ ಇದ್ದಂಗೆ. ಚಿಕ್ಕವ್ನಿರುವಾಗ್ಲೆ ತಾಯಿ ಕಳ್ಕೊಂಡವ. ಅಪ್ಪ ಮಾತ್ರ ಹೊಲದಲ್ಲೂ ದುಡಿದು ಕಂಡವರ ಎಂಜ್ಲು ಬಳ್ದು, ಮಗನ್ನನ್ ಬಾಳ ಕಷ್ಟಪಟ್ಟು ಓದ್ಸಿದ್ದ. ಸಿದ್ಧನೂ ಹಂಗೆ, ಅಪ್ಪ ಇಟ್ಟ ನಂಬ್ಕೆನಾ ಸುಳ್ಳ್ ಮಾಡ್ಲಿಲ್ಲಾ. ಮಾರಮ್ಮನ ಗುಡಿಯಾಗೇ... ದೀಪಾದ ಬೆಳಕ್ಕಾಗೇ ಅಂವ ಕುಂತು ಓದಿದ್ದು. ಮಾರಮ್ಮ ಕಣ್ ಬಿಟ್ಟಿದ್ದು ಆತು, ಸಿದ್ಧ ಗೆದ್ದದ್ದೂ ಬಂತು. ಹೈಸ್ಕೂಲ್ ತನ್ಕ ಅಲ್ಲೇ ಸುತ್ತಲಿನ ಹತ್ತಾರು ಹಳ್ಳಿ ಸುತ್ತಿ ಕಲ್ತ. ಕಾಲೇಜಿಗೆ ಹೇಂಗೊ ದೂರದ ಊರಿಗೆ ಬಂದು ಅಲ್ಲೇ ಒಂದ ಬಾರಲ್ಲಿ ಸೇರಿ ತಿಕ್ಕಿ ತೊಳೆದೂ ಅಂತೂ ಮುಗಿಸಿದ್ದ. ಒಳ್ಳೆಯ ಮಾರ್ಕ್ಸೂ ತೆಗೆದ್ದಿದ್ದ. ಗುಡಿಯಾಗೆ ದೀಪದ ಬೆಳಕ್ನಾಗೆ ಓದ್ದ ಹುಡುಗ ಅಂವ... ಮತ್ತೆ ಪಟ್ಟಣದಾಗೇ ಕರೆಂಟ್ ದೀಪ ಸಿಕ್ಕಿದ್ರ ಬಿಡ್ತಾನಾ...? ಡಿಗ್ರಿಯಲ್ಲೂ ಸಿದ್ಧ ಫಸ್ಟ್‌ಕ್ಲಾಸ್!

ಅವ್ನ ಕಾಲೇಜನಾಗೇ ಒಬ್ಬ ಮೇಷ್ಟ್ರಿಗೆ ಇವ್ನ್ ಕಂಡ್ರೆ ಬಾಳ ಪ್ರೀತಿ... ಇಂವ ಯಾವಾಗ್ಲೂ ಕ್ಲಾಸ್‌ಗೆ ತಣ್ಣಗೆ ಕುಳ್ತಿರ್‍ತಿದ್ದ... ಯಾರಾತ್ರಾನ್ನೂ ಮಾತಾಡ್ತಾ ಇರ್ಲಿಲ್ಲ... ಯಾರೊಂದಿಗೂ ಸೇರ್‍ತಿರ್ಲಿಲ್ಲ, ತಾನಾಯ್ತು ತನ್ನ ಕೆಲ್ಸ ಆಯ್ತು ಅಂತಿದ್ದವ. ಇಂವ್ ಯಾಕ್ ಹಿಂಗೆ ಅಂತ, ಒಂದೀನ ಆ ಮೇಷ್ಟ್ರು, ಸಿದ್ಧನ ಕುಂಡ್ರಿಸಿ ಕೇಳ್ದಾಗ, ಅವ್ನ ಹಿಂದೂ ಮುಂದು ತಿಳಿದೂ, ಇವ್ನ ಬಗ್ಗೆ ಮತ್ತೂ ಒಲವು ಬಂದಿತ್ತು. ಆದ್ರ ಸಿದ್ದನ ಒತ್ತಾಯ ಮಾಡಿ ಯೂನಿವರ್ಸಿಟಿಯಲ್ಲಿ ಎಂ.ಎ. ಮಾಡ್ಲಿಕ್ಕೆ ಕಳ್ಸಿದ್ದು.

ಯೂನಿವರ್ಸಿಟಿಯಲ್ಲಿ ಸಿದ್ಧ ಟಾಪ್! ಮಾರಮ್ಮನ ಗುಡಿಯ ದೀಪದಾಗ್ಗೆ ಓದ್ದ ಹುಡುಗ... ಮತ್ತೆ ಹಾಸ್ಟೆಲ್‌ನ ಕರೆಂಟ್ ಬೆಳಕು ಸಿಕ್ಕಿದ್ರಿ ಬಿಡ್ತಾನಾ...? ಎಂ.ಎ.ನೂ ಮುಗ್ಸಿ ಅಲ್ಲೇ ಸ್ಕಾಲರ್‌ಶಿಪ್‌ನಲ್ಲೂ ಪಿಎಚ್.ಡಿ.ನೂ ಮಾಡ್ತಿದ್ದ. ಹಿಂಗಿರುವಾಗ್ಲೇ, ಯೂನಿವರ್ಸಿಟಿಯ ಗೆಳೆಯರೂ –



ಮೇಷ್ಟ್ರ ಒತ್ತಾಯ ಮಾಡಿ ಸಿದ್ಧನ ಕೆ.ಎ.ಎಸ್. ಪರೀಕ್ಷೆಗೆ ಕುಂದ್ರಿಸಿದ್ದು. ಮಾರಮ್ಮ ಕಣ್‌ಬಿಟ್ಟ ಹುಡುಗ ಸಿದ್ಧ ಮತ್ತೆ ಕೇಳ್ಬೇಕಾ ? ಕೆ.ಎ.ಎಸ್.ನಲ್ಲೂ ಸಿದ್ಧ ಸಕಸ್‌ಫುಲ್ !! ಪ್ರಿಲಿಮಿನರಿ ಪಾಸ್ ಮಾಡಿ, ಮುಖ್ಯ ಪರೀಕ್ಷೆಯಲ್ಲಿ ಒಳ್ಳೆ ಮಾರ್ಕ್ಸ್ ತೆಗೆದಿದ್ದ. ಈಗ ಇಂಟರ್‌ವ್ಯೂಗೆ ಆವಂಗ್ ಪತ್ರ ಬಂದಿತ್ತು. ಇದೇ ೨೮ರಂದು ಬೆಳಿಗ್ಗೆ೧೦.೦೦ ಗಂಟೆಗೆ ಸಂದರ್ಶನ.

ಸುದ್ದಿ ಕೇಳಿ ಊರಿಗೆ ಊರೇ ಹಿಗ್ಗಿತ್ತು – ''ಏಯ್ ! ನಮ್ ಸಿದ್ಧಪಾಸ್ ಕಣ್ಲಾ!'' ಎಲ್ರ ಬಾಯಲ್ಲೂ ಅದೇ ಮಾತು. ಸಿದ್ಧನ ಅಪ್ಪಂಗೂ ಖುಸಿಯೋ ಖುಸಿ. ಮಗಗೆ ಕೆಲ್ಸ ಸಿಕ್ಕಿದ್ರೆ, ಕೊಬ್ಬಿದ ಕುರಿ ಕಡಿದು ಊರ ಮಂದಿಗೆಲ್ಲಾ ಊಟ ಹಾಕಿಸ್ತೀನಂತ, ಕಂಠಪೂರ್ತಿ ಕುಡಿದು, ಮಾರಮ್ಮನ ಮುಂದೆ ಹರಕೆನೂ ಹೊತ್ಕೊಂಡಿದ್ದ. ಪ್ರತಿ ಮನೆಯಾಗೂ, ಸಣ್ಣ ಹುಡ್ರೀಗೆ ದೊಡ್ಡೋರ್ ಹೊಡ್ಡ್‌ಹೊಡ್ಡ್ ಹೇಳ್ತಿದ್ರು – ಸಿದ್ಧ ಹಂಗ್ ಓದ್ತಿದ್ದ, ಹಿಂಗ್ ಓದ್ತಿದ್ದ ಅಂತ. ಸುದ್ದಿ ಬಸಯ್ಯನವರಿಗೂ ಮುಟ್ಟಿತ್ತು.

''ಏಯ್ ಆ ಸಿದ್ಧ ಯಾರ್‍ಲಾ...?'' ಅಂತ ಅವರ ಸೆಕ್ರೆಟರಿ ಹತ್ರ ಕೇಳಿ ತಿಲ್ಕೊಂಡಿದ್ರು. ಅದ್ಯಾರದೋ ಸಂಬಂಧದವರ ಮದುವೆಗೆ ಹೋದಾಗ ಬಸಯ್ಯನವ್ರು ಸಿದ್ಧನ ಹೊಗಳಿದ್ದೇ ಹೊಗಳಿದ್ದು. ಅವರಜ್ಜ ಇವರಪ್ಪನೊಂದಿಗೆ ಏನ್ ಮಾಡ್ತಿದ್ದ, ತಾನು ಇವರಪ್ಪನೊಂದಿಗೆ ಏನೇನೆಲ್ಲಾ ಮಾಡ್ತಿದ್ದೆ. ಸಣ್ಣಾಂವ ಇರಬೇಕಾದ್ರೆ ಆ ಹುಡುಗ ಹೀಂಗಿದ್ದ ಈಗ ಹೇಂಗಾವ್ನೆ ಅಂತ ಸುತ್ತಿದ್ದೆ ಸುತ್ತಿದ್ದು. ಸುಡುಗಾಡಳ್ಳಿ ಜನ್ರಿಗೋ ಈ ಬಾರಿ ಬಸಯ್ಯನವ್ರು ಸಿದ್ಧನಿಗೆ ಏನಾದ್ರು ಮಾಡ್ತಾರಂತ ಬಾರೀ ಕಾನ್ಫಿಡೆನ್ಸ್.

''ಹೇಂಗೋ ಮಾಡೋದು...?''

ಬಸಯ್ಯನವರು ತಮ್ಮ ಸೆಕೇಟರಿ ವಿಠ್ಠಲ ಮೂರ್ತಿಯನ್ನ್ ಕೇಳಿದ್ರು. ವಿಠ್ಠಲನೋ ಇಂತಿಂದ್ರಲ್ಲೆಲ್ಲ ಬಾಳ ನಿಸ್ಸೀಮ... ಮಂಗ್ಳೂರ್ ಬದಿಯ ಉದ್ದನಾಮದ ಬ್ರಾಹ್ಮಣ ಬೇರೆ. ಬ್ರಾಹ್ಮಣರು ಬುದ್ಧಿವಂತರಲ್ವಾ... ಅದ್ಕೇನೆ ಬಸವಯ್ಯನವರು ಇವ್ನೇ ಇರ್ಲಿ ಅಂತ ಇಟ್ಕೊಂಡಿದ್ದು ''ಸಾರ್... ಒಂದಿನ ಟೈಮ್ ಕೊಡಿ ಸಾರ್ !'' ಎಂದಿದ್ದಕ್ಕೆ ಬಸಯ್ಯ ಹ್ಞೂಂ ಅಂದಿದ್ರು.

ವಿಠ್ಠಲನಿಗೆ ಕೆ.ಪಿ.ಎಸ್.ಸಿ.ಯ ಬಗ್ಗೆ ಚೆನ್ನಾಗಿಯೇ ಗೊತ್ತಿತ್ತು. ಅವ್ನೂ ಬರ್ದಿದ್ದ... ಇಂಟರ್‌ವ್ಯೂಗೂ ಹೋಗಿದ್ದ. ಆದರೆ ಆಗ ಕೈಚಳಕ ತೋರಿಸುವಷ್ಟು 'ಕೈ' ಇವನಿಗೆ ಇರ್ಲಿಲ್ಲ. ಕೇಳಿದ ಪ್ರಶ್ನೆಗೆಲ್ಲಾ ಒಳ್ಳೆಯ ಉತ್ತರ ಕೊಟ್ಟು ಕೊನೆಯಲ್ಲಿ ಕಡಿಮೆ ಅಂಕ ಪಡೆದು ಹೊರಗೆ ಬಂದಿದ್ದ. ಹಿಂಬಾಗಿಲ ತಂತ್ರಗಾರಿಕೆಯ ಬಗ್ಗೆ ಆಗ ಅವ್ನಿಗೆ ಚೆನ್ನಾಗಿ ತಿಳಿದದ್ದು. ಹಾಗೆ ಗಳಿಸಿದ್ದ ಜ್ಞಾನವನ್ನೆಲ್ಲಾ ಬಸಯ್ಯನವರ ಸೆಕ್ರೆಟರಿಯಾಗಿ ಚೆನ್ನಾಗಿ ಉಪಯೋಗಿಸಿಕೊಂಡಿದ್ದ, ಯಾವ ಕೆಲಸ ಬೇಕಾದ್ರೂ ಹೇಳಿ ಒಂದ್ಸಲ ಟೈಮ್ ಕೊಟ್ರೆ ಎಲ್ಲಾ ರೆಡಿ !

ಬಸಯ್ಯನವ್ರ ಜಾತಿಯವರ್‍ಯಾರೂ (ಕೆ.ಪಿ.ಎಸ್.ಸಿ.) ಸದಸ್ಯರಿರಲಿಲ್ಲ. ಸಾಲದ್ದಕ್ಕೆ ಅವರ ಜಾತಿಯಿಂದ್ಲೂ ಯಾರೂ ಕೆ.ಎ.ಎಸ್. ಕೂಡ ಆಗಿರ್ಲಿಲ್ಲ. ಆದರೂ ವಿಠ್ಠಲನಿಗೆ ಕೆಲ್ಸ ಆಗುತ್ತೆ ಅನ್ನೋ ಧೈರ್ಯ ಇತ್ತು. ಎಲ್ಲಾ ಕಡೆಗೂ ಹಣಕ್ಕೆ ಬಾಯ್ಬಿಡುವ ಮಂದಿ ಇದ್ದದ್ದೆ. ಮತ್ತೆ ಕೆ.ಪಿ.ಎಸ್.ಸಿ.ಯಲ್ಲಿ ಕೇಳ್ಬೇಕಾ ? ಯಾರ್‍ಯಾರದೋ ಮನೆ ಬಾಗ್ಲು ಕಾದವರೆಲ್ಲ ಅಲ್ಲಿ ಬಂದು ವಕ್ಕಾರಿಸ್ತಾರೆ. ಅಂದ್ರೆ... ಮತ್ತಿನ್ನೇನ್ ಇರ್ಲಿಕ್ಕೆ ಸಾಧ್ಯ ಹೇಳಿ...? ಆದರೂ ಲಕ್ಷಗಳ ವ್ಯವಹಾರದಲ್ಲಿ ಅಲಕ್ಷ್ಯ ಮಾಡುವುದು ಸರಿಯಲ್ಲಾಂತ, ವಿಠ್ಠಲನಿಗೆ ಅನ್ನಿಸ್ತು. ಎಲ್ಲಕ್ಕೂ ಒಂದು ಹಾದಿ ಅಂತ ಇರುತ್ತಲ್ಲಾ... ವಿಠ್ಠಲನಿಗೆ ತಟ್ ಅಂತ ಹೊಳೆದಿದ್ದು ಲಕ್ಷ್ಮೀಪತಿ ಯವರ ನೆನಪು. ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಹಿರಿಯ ಅಧಿಕಾರಿಯಾಗಿದ್ದ ಲಕ್ಷ್ಮೀಪತಿ ಯವರು, ವ್ಯವಹಾರ ಚತುರತೆಗೆ ಬಹಳ ಹೆಸರುವಾಸಿ. ಬ್ರಾಹ್ಮಣರಾಗಿದ್ದರೂ ಕೂಡ ರಾಜಕೀಯದಲ್ಲೆಲ್ಲೂ ಅಸ್ಪೃಶ್ಯರಾಗಿರಲಿಲ್ಲ. ಅಧಿಕಾರದಲ್ಲಿದ್ದಾಗಲೇ ಕಾನೂನು ಕಟ್ಟಳೆಗಳನ್ನೂ ವರ್ತಕರನ್ನೂ ಮಂತ್ರಿಗಳನ್ನೂ ಬಹಳ ನಾಜೂಕಾಗಿ ನಿರ್ವಹಿಸಿದ ವ್ಯಕ್ತಿ ಕರ್ತವ್ಯದಿಂದ ನಿವೃತ್ತಿ ಹೊಂದುತ್ತಲೇ ಮತ್ತೆ 'ಕೈ'ಚಳಕ ತೋರಿ ಕೆ.ಪಿ.ಎಸ್.ಸಿ.ಗೆ ಅವಲತುಕ್ಕೊಂಡವನು. ಲಕ್ಷ್ಮೀಪತಿಯವರನ್ನು ಕಂಡರೆ ಎಲ್ರಿಗೂ ಪ್ರೀತಿ... ಎಲ್ಲವನ್ನೂ ಬಾಚದಿರು, ನಿನ್ನದೆಂದು ಬಿಡುದಿರು ಎನ್ನುವ ಈತ, ಆ ಪಾರ್ಟಿ, ಈ ಪಾರ್ಟಿ ಹತ್ತಾರು ಪಾರ್ಟಿಯವರಿಗೂ ಅಚ್ಚುಮೆಚ್ಚು.

ವಿಠ್ಠಲನೂ ಅದರ ಬಗ್ಗೆ ಕೇಳಿದ್ದ... ಅಂತಲೇ ಅವರ ಮೂಲಕವೇ ವ್ಯವಹಾರ ಕುದುರಿಸುವ ಯೋಚನೆ ಮಾಡಿದ್ದ. ನಾಡಿನ ಮುಖ್ಯಮಂತ್ರಿಗಳ ವಿರೋಧ ಪಕ್ಷದ ನಾಯಕರಿಗೂ ಹತ್ತಿರದ ಸಂಬಂಧಿಕರಾಗಿದ್ದ ಕೆ.ಪಿ.ಎಸ್.ಸಿ.ಯ ಅಧ್ಯಕ್ಷರು ಒಳ್ಳೆಯವರು ಅಂತ ಹೆಸರು ಮಾಡುವ ಪ್ರಯತ್ನ ಮಾಡುತ್ತಿದ್ದರೂ ಯಾಕೋ ಹಣದ ವಿಷಯದಲ್ಲಿ ಅವರ ಒಳ್ಳೆಯತನದ ಬಗ್ಗೆ ಎಲ್ರಿಗೂ ಸಂಶಯವಿತ್ತು. ಬಸಯ್ಯನವ್ರಿಗೂ ಗೊತ್ತಿದ್ರಿಂದ್ಲೋ ವಿಠ್ಠಲನ ಮೂಲಕ ಕೆಲ್ಸಕ್ಕೆ ಕೈ ಹಾಕಿದ್ದು.

ಬಸಯ್ಯನವರ ಬಗ್ಗೆ ಎಲ್ರಿಗೂ ಗೊತ್ತು. ಈ ಬಾರಿ ಹೇಗೋ ತಪ್ಪಿದ್ದ ಮಂತ್ರಿಗಿರಿ ಮುಂದಿನ ಬಾರಿ ಖಂಡಿತವಾಗಿಯೂ ಅವರಿಗೇ ಆಗಿತ್ತು. ಅದ್ಕೇನೆ ಬಸಯ್ಯನವರ ಕ್ಯಾಂಡಿಡೇಟ್ ಅಂದ್ಮೂಡ್ಲೆ ಲಕ್ಷ್ಮೀಪತಿ ಸ್ವಲ್ಪ ಹೆಚ್ಚು ಕಡಿಮೆ ಅಂತ್ಹೇಳಿ, ಒಪ್ಪಿಕೊಂಡಿದ್ದು. ಸಿದ್ಧನಿಗೆ ಇಂಟರ್‌ವ್ಯೂನಲ್ಲೂ ಮಾರ್ಕ್ಸ್ ಕೊಡುವುದು ಅವರ ಕೆಟಗರಿ ಲಿಸ್ಟ್‌ನಲ್ಲೂ ಅವನೇ ಮೊದಲಿಗನಾಗಿರುವ ಹಾಗೆ ನೋಡಿಕೊಳ್ಳುವುದು – ಇದು ಆದ ತೀರ್ಮಾನ.

* * *

ಸಿದ್ಧ ಮತ್ತವನಪ್ಪನನ್ನ ಬಸಯ್ಯನವರು ಬೆಂಗ್ಳೂರಿಗೆ ಕರೆಸಿಕೊಂಡಿದ್ರು. ಇವರೇ ಹೋಟೆಲಿನಲ್ಲಿ ಅವರಾಗಿಯೇ ವ್ಯವಸ್ಥೆ ಮಾಡಿದ್ರು. ಸಾಮಾನ್ಯವಾಗಿ ಅವರ ಜಾತಿಯವರ ನ್ನಾರನ್ನೂ ಒಳಗೆ ಕರೆಯದ ಬಸಯ್ಯ ಅಂದು ಮಾತ್ರ ಸಿದ್ಧ ಮತ್ತವನಪ್ಪನನ್ನು ಊಟದ ಮನೆಯ ಕೆಳಗೆ ಆತಿಥ್ಯಕ್ಕೆ ಕರೆದಿದ್ದರು. ಬಸಯ್ಯನವರಂತೂ, ತಮ್ಮ ಹೆಂಡತಿ, ಮಕ್ಕಳೆದುರು ಸಿದ್ಧನ್ನ ಹೊಗಳಿದ್ದೇ ಹೊಗಳಿದ್ದು. ಅವನಜ್ಜನ ಬಗ್ಗೆ ಇವರಪ್ಪನ ಬಗ್ಗೆ, ಅವನಪ್ಪನ ಮತ್ತವರ ಸಂಬಂಧದ ಬಗ್ಗೆ ಇನ್ನೂ ಏನೇನೋ ಸುತ್ತಿದ್ದೆ ಸುತ್ತಿದ್ದು. ವಿಧಾನಸಭೆಯಲ್ಲಿ ಏನೋ ತುರ್ತು ಕೆಲಸ ಬಾಕಿ ಇದೆ ಅಂತ, ಸಿದ್ಧ ವಿಠ್ಠಲರನ್ನ ಜೊತೆಯಲ್ಲಿ ಬಿಟ್ಟು ಅವರು ಕಾರು ಹತ್ತಿ ಹೋದರು.

ಸಿದ್ಧನ ಅಪ್ಪ ಹೊರಗೆ ಗೇಟಿನ ಬಳಿಯಲ್ಲೂ ಕಚ್ಚೆ ಪಂಚೆ ಎತ್ತಿ ಕುಂಕುರು ಕಾಲಲ್ಲಿ ಕುಳಿತು ಬೀಡಿ ಸೇದ್ತಾ ಇದ್ದ. ಒಳಗೆ ಸಿದ್ಧ ಮತ್ತು ವಿಠ್ಠಲ ಏನೋ ಮಾತಾಡ್ತಾ ಇದ್ರು. ಸುಮಾರು ಒಂದರ್ಧ ತಾಸಾಗಿರಬಹುದು, ಸಿದ್ಧ ಏನೋ ಸಪ್ಪೆ ಮುಖ ಹಾಕ್ಕೊಂಡು ಹಾಗೆ ಹೊರಗೆ ಬಂದ. ಸಿದ್ಧನ ಅಪ್ಪ ಬೀಡಿ ಸೇದ್ತಾನೆ ಇದ್ದ... ಅಷ್ಟರಲ್ಲೇ ಸಿದ್ಧನ ದನಿ ಕೇಳಿಸ್ತು...

''ಬಾಪ್ಪ ಹೋಗಾನಾ...''

ಅರ್ಧ ಸುಟ್ಟ ಬೀಡಿಯನ್ನ ಹಾಗೇ ಮತ್ತೊಂದು ಧಮ್ ಎಳೆದು ಅಲ್ಲೇ ಕಲ್ಲಿಗೆ ಒತ್ತಿ ಎದ್ದ ಸಿದ್ಧ ಮತ್ತವನ ಅಪ್ಪ ಇಬ್ರೂ ಸೇರಿ ಹೋಟೆಲಿನ ದಾರಿ ಹಿಡಿದು ಹೋಗ್ತಾ ಇದ್ರು.

ದಾರಿಯುದ್ದಕ್ಕೂ ಸಿದ್ಧನ ತಲೆಯಲ್ಲಿ ವಿಠ್ಠಲನ ಮಾತೇ ಕೊರೀತಾ ಇತ್ತು... ವಿಠ್ಠಲ ಹೇಳಿದ್ದಿಷ್ಟು – ''ನೋಡು ಸಿದ್ಧ ಕೆ.ಎ.ಎಸ್. ಆಗ್ಲಿಕ್ಕೆ ಬರೀ ಬುದ್ಧಿ ಇದ್ರಷ್ಟೆ ಸಾಲದು. ಇಂಟರ್‌ವ್ಯೂನಲ್ಲಿ ಒಳ್ಳೆ ಮಾರ್ಕ್ಸ್ ಬೇಕಂದ್ರ ಹಣಾನೂ ಬೇಕು. ಅಲ್ಲಿ ಎಲ್ಲ ಮೆಂಬರು ಗಳಿಗೆ, ಇಂತಿಂಥ ಸೀಟಿಗೆ ಇಂತಿಷ್ಟು ಅಂತ ತಿನ್ನಿಸ್ಬೇಕು. ನಿನ್ನತ್ರ ಯೋಚನೆ ಮಾಡ್ಲಿಕ್ಕೂ ಆಗಲ್ಲ – ಅಷ್ಟು ಹಣ ಕೊಡ್ಬೇಕು. ಅದೆಲ್ಲಾ ಸುಲಭ ಅಲ್ಲ. ನಿನ್ನ ಬಗ್ಗೆ ನಮಗೆಲ್ಲಾ ಅಭಿಮಾನ ಇದೆ, ಒಳ್ಳೆ ಬುದ್ಧಿವಂತ ನೀನು. ಸಿಕ್ಕಿರೋ ಅವಕಾಶನ ಬಿಟ್ಕೋಬೇಡ. ನೀನು ಹ್ಞೂಂ ಅಂದ್ರೆ ನಿನ್ನ ಪರವಾಗಿ ಬಸಯ್ಯನವರ ಹಣ ಕೊಡ್ತಾರೆ. ಬರೇ ಹಣ ಅಷ್ಟೆ ಅಲ್ಲ, ಅವರ ಹಿರಿಮಗಳು ಶಾಂತಿಯನ್ನು ಧಾರೆ ಎರೆದು ಕೊಡ್ತಾರೆ. ಈ ಕಾಲದಲ್ಲಿ ಕೆಲ್ಸನೂ ಕೊಡ್ಸಿ, ಹೆಣ್ಣು ಕೊಡುವವರು ಯಾರಿದ್ದಾರೆ ಹೇಳು ? ಯಾರೋ ಮಾಡಿದ್ದ ಪುಣ್ಯ ನಿನ್ನನ್ನು ಕಾಯ್ತಾ ಇದೆ. ಒಂದ್ಕಡೆ ಕೆ.ಎ.ಎಸ್. ಕೆಲ್ಸ ಮತ್ತೊಂದೆಡೆ ಒಳ್ಳೆ ಸಂಬಂಧ. ಎಷ್ಟ್ ಜನ್ರಿಗಯ್ಯಾ ಇದೆ ಈ ಅದೃಷ್ಟ...! ನೋಡು ನಾನೆಲ್ಲಾ ಅನುಭವಿಸಿಯೇ ಈ ಮಾತ ಹೇಳ್ತಿರೋದು. ನಮ್ಗೆಲ್ಲಾ ಈ ರೀತಿಯ ಛಾನ್ಸ್ ಸಿಕ್ಕಿದ್ರೆ ಇಷ್ಟೊತ್ತಿಗೆ ಎಲ್ಲೋ ಇರ್‍ತಿದ್ವಿ. ಅದೃಷ್ಟ ಹುಡುಕಿಕೊಂಡು ಬಂದಾಗ ಇಲ್ಲಾ ಅನ್ಬಾರ್ದು ಯೋಚನೆ ಮಾಡು... ಅಪ್ಪನಿಗೂ ಒಂದ್ ಮಾತ್ ತಿಳಿಸು ಸಾಯಂಕಾಲ ಎಲ್ಲ ಸೇರಿ ಊಟ ಮಾಡೋಣ ಅವಾಗ ನಿನ್ನ್ ನಿರ್ಧಾರ ಏನ್ ಅಂತ ಹೇಳು. ಮತ್ತೊಮ್ಮೆ ಹೇಳ್ತೀನಿ... ಎಲ್ರಿಗೂ ಈ ಅವಕಾಶ ಸಿಕ್ಕೋಲ್ಲ ಸಿಕ್ಕಿರೋ ಛಾನ್ಸ್ ಬಿಟ್ಕೊಬೇಡ !''

ದಾರಿಯಲ್ಲಿ ಹೋಗ್ತಾ ಇದ್ದಾಗ, ಇದೇ ವಿಷಯ ಸಿದ್ಧನ ತಲೆಯಲ್ಲಿ ತುಂಬಿತ್ತು. ಶಾಂತಿ ಯಾರಂತಲೂ ಇವ್ನಿಗೆ ಗೊತ್ತಿಲ್ಲ... ಜೀವನದ ಬಗ್ಗೆ ತನ್ನದೇ ಆದ ಕನಸುಗಳು ಎಲ್ರಿಗೂ ಇರುವಂತೆ ಇವ್ನಿಗೂ ಇದ್ವು. ಮತ್ತೊಂದ್ಕಡೆ ಕೆ.ಎ.ಎಸ್. ಕನಸು. ಗೆಳೆಯರೆಲ್ಲ ಹೇಳ್ತಿದ್ರು, ಕೆ.ಎ.ಎಸ್. ಆಗೋದು ಅಷ್ಟೊಂದು ಸುಲಭ ಅಲ್ಲ ಅಂತ... ಯಾಕೆ ಅಷ್ಟು ಕಷ್ಟ ಅಂತಲೂ ಗೊತ್ತಿತ್ತು. ಇಷ್ಟೆಲ್ಲಾ ದಿನ ಕಷ್ಟಪಟ್ಟು ಸಂಪಾದಿಸಿದ ವಿದ್ಯೆ ಸಿದ್ಧನಲ್ಲಿ ಸ್ವಾಭಿಮಾನದ ಪ್ರಜ್ಞೆಯನ್ನೂ ಬೆಳೆಸಿತ್ತು. ಮಾರಮ್ಮನಿಗೆ ಬಲಿಕೊಡಬೇಕಾದ್ರೂ ಜನ ಹೆಕ್ಕಿ ಹೆಕ್ಕಿ ತೆಗೆಯೋದು ಒಳ್ಳೊಳ್ಳೆ ಕುರಿಗಳನ್ನ ; ತಾನೆಲ್ಲೋ ಬಲಿ ಕೊಡಲು ತಯಾರಾದ ಕುರಿನೇನೋ ಅನ್ನಿಸ್ತಾ ಇತ್ತು. ಮನುಷ್ಯ ಸಂಬಂಧಗಳೆಲ್ಲಾ ಇಷ್ಟೊಂದು ವ್ಯಾವಹಾರಿಕವೇ...? ತನ್ನಲ್ಲಿದ್ದ ಸ್ವಾಭಿಮಾನವನ್ನ್ ಅದು ಹೇಗೆ ಬಲಿಕೊಡುವುದು...? ಅವರೂ ಕೆಲ್ಸಕ್ಕಾಗಿ ಒಂದು ಸಣ್ಣ್ ವಿಷಯದಲ್ಲಿ ರಾಜಿ ಆದರೆ ಕಳ್ಕೊಳ್ಳೊದೇನಿದೆ...? ತಾನೊಬ್ಬ ಕೆ.ಎ.ಎಸ್. ಆದ್ರೆ ಇನ್ನಷ್ಟು ಜನರಿಗೆ ಸಹಾಯ ಮಾಡಬಹುದಲ್ವಾ ? ಆದರೂ... ಈ ಹಂತದಲ್ಲಿ ಒಮ್ಮೆ ಕಳಕೊಂಡರೆ ಮತ್ತೆ ಹಳೆಯ ಸ್ವಾಭಿಮಾನ ಗಳಿಸ್ಲಿಕ್ಕೆ ಸಾಧ್ಯವೇ...? ಇನ್ನೂ ಏನೇನೋ ಕನ್‌ಫ್ಯೂಷನ್. ಈ ವಿಷಯನೆಲ್ಲಾ ಅವರಿಗೆ ಹೆಂಗೆ ಹೇಳೊದು ಅನ್ನೋದು ಬೇರೆ...

ನೀವಾದ್ರೂ ಹೇಳಿ ಸಿದ್ಧ ಏನ್ ಮಾಡ್ಬೇಕು ಅಂತ...!

ರಾಜೇಶ ಎನ್. ನಾಯ್ಕ
ಸಹಾಯಕ ಖಜಾನಾಧಿಕಾರಿ (ಪ್ರೊಬೇಷನರಿ), ಜಿಲ್ಲಾ ಖಜಾನೆ, ಉಡುಪಿ - ೫೭೬ ೧೦೧

# ಪ್ರಶ್ನೆಗಾಗಿ ಲಂಚ ಒಂದು ವಿಶ್ಲೇಷಣೆ



ನಾ. ದಿವಾಕರ

ಸ್ವತಂತ್ರ ಭಾರತದ ರಾಜಕೀಯ ಇತಿಹಾಸದಲ್ಲಿ ಭ್ರಷ್ಟಾಚಾರ, ಲಂಚದ ಹಗರಣಗಳು ಹೊಸದೇನಲ್ಲವಾದರೂ ಲಂಚ ಸ್ವೀಕರಿಸಿದ್ದಕ್ಕಾಗಿ ಸಂಸತ್ತಿನಿಂದ ಲೋಕಸಭಾ ಸದಸ್ಯರನ್ನು ವಜಾಮಾಡಿರುವ ಪ್ರಕರಣದಲ್ಲಿ ದೇಶದ ಸರ್ವೋಚ್ಚ ನ್ಯಾಯಾಲಯವು ಸಂಸತ್ತಿನ ತೀರ್ಮಾನವನ್ನು ಎತ್ತಿಹಿಡಿದು ಸಿಂಧು ಎಂದು ಘೋಷಿಸಿರುವುದು, ಇಡೀ ದೇಶವನ್ನೇ ತಲೆ ತಗ್ಗಿಸುವಂತೆ ಮಾಡಿದೆ. ರಾಜಕಾರಣಿಗಳನ್ನು ಶಿಕ್ಷಿಸಿದಾಗ ದೇಶದ ಸಾಮಾನ್ಯ ಜನತೆಯಲ್ಲಿ ಒಂದು ·ರೀತಿಯ ವಿಜಯೋತ್ಸವ ಆಚರಿಸುವ ಹುರುಪು ಕಂಡುಬರುತ್ತದೆ ಎಂದರೆ ನಮ್ಮ ಆಳುವ ವರ್ಗಗಳು ತಮ್ಮ ಮತದಾರರ ವಿಶ್ವಾಸವನ್ನು ಎಷ್ಟರಮಟ್ಟಿಗೆ ಉಳಿಸಿಕೊಂಡಿದ್ದಾರೆಂದು ಸಾಬೀತಾಗುತ್ತದೆ.

ಸರ್ವೋಚ್ಚ ನ್ಯಾಯಾಲಯದ ಈ ತೀರ್ಪಿನಿಂದ ಎರಡು ಪ್ರಶ್ನೆಗಳು ಉದ್ಭವಿಸುತ್ತವೆ. ಮೊದಲನೆಯದಾಗಿ, ದೇಶದ ಸಂಸತ್ತಿಗಾಗಲೀ, ರಾಜ್ಯ ವಿಧಾನಸಭೆಗಳಿಗಾಗಲೀ ಸದಸ್ಯರನ್ನು ಉಚ್ಚಾಟಿಸುವ ಅಧಿಕಾರವಿದೆಯೇ ? ಎರಡನೆಯದಾಗಿ, ಇದು ನ್ಯಾಯಾಂಗದ ಪರಿಶೀಲನೆಗೆ ಒಳಪಟ್ಟಿರುವುದೇ ? ಈ ಎರಡೂ ಪ್ರಶ್ನೆಗಳಿಗೆ ಜನವರಿ ೧೦ರ ನ್ಯಾಯಾಲಯದ ತೀರ್ಪು ನೀಡಿರುವ ಪರಿಹಾರವೆಂದರೆ, ಸಂಸತ್ತು ಮತ್ತು ವಿಧಾನಸಭೆಗಳಿಗೆ ಸದಸ್ಯರನ್ನು ಉಚ್ಚಾಟಿಸುವ ಹಕ್ಕು ಇದ್ದರೂ, ಅದು ನ್ಯಾಯಸಮ್ಮತವಾದ ತೀರ್ಮಾನ ಅಲ್ಲ ಎಂದೆನಿಸಿದಲ್ಲಿ ನ್ಯಾಯಾಂಗವು ಅದನ್ನು ಪರಿಶೀಲಿಸುವ ಅಧಿಕಾರ ಹೊಂದಿರುತ್ತದೆ. ಹತ್ತು ಜನ ಲೋಕಸಭಾ ಸದಸ್ಯರು ಮತ್ತು ಓರ್ವ ರಾಜ್ಯಸಭಾ ಸದಸ್ಯರು ಸಂಸತ್ತಿನ ಅಧಿವೇಶನದ ಅವಧಿಯಲ್ಲಿ ಪ್ರಶ್ನೆ ಕೇಳಲು ಲಂಚ ಸ್ವೀಕರಿಸುತ್ತಿದ್ದುದನ್ನು ಖಾಸಗಿ ಟಿ.ವಿ. ಚಾನೆಲ್ ಬಹಿರಂಗಪಡಿಸಿದ್ದು ಈ ಮೊಕದ್ದಮೆಗೆ ಪ್ರಮುಖ ಕಾರಣವಾಗಿತ್ತು. ಸಂಸತ್ತಿನ ಸಮಿತಿಗಳ ವಿಚಾರಣೆಯಲ್ಲಿ ಈ ಅಂಶವು ಸಾಬೀತಾದ ಕಾರಣ ಎಲ್ಲಾ ಹನ್ನೊಂದು ಮಂದಿಯನ್ನೂ ಸಂಸತ್ತಿನಿಂದ ಉಚ್ಚಾಟಿಸಲಾಗಿತ್ತು.

ಸರ್ವೋಚ್ಚ ನ್ಯಾಯಾಲಯದ ಐದು ಸದಸ್ಯರ ನ್ಯಾಯಪೀಠವು ಮೂರು ತೀರ್ಪುಗಳನ್ನು ಹೊರಡಿಸಿದೆ. ಮುಖ್ಯ ತೀರ್ಪಿನಲ್ಲಿ ಮುಖ್ಯ ನ್ಯಾಯಾಧೀಶ ಸಭರವಾಲ್, ನ್ಯಾ॥ ಕೆ. ಜಿ. ಬಾಲಕೃಷ್ಣನ್ ಮತ್ತು ನ್ಯಾ॥ ಡಿ. ಕೆ. ಜೈನ್ ಅವರು ತಮ್ಮ ತೀರ್ಪು ನೀಡಿದ್ದರೆ, ಎರಡನೇ ತೀರ್ಪಿನಲ್ಲಿ ನ್ಯಾ॥ ಸಿ. ಕೆ. ಠಕ್ಕರ್ ಈ ತೀರ್ಪಿಗೆ ಸಮ್ಮತಿ ಸೂಚಿಸಿದ್ದಾರೆ. ನ್ಯಾ॥ ಆರ್. ವಿ. ರವೀಂದ್ರನ್ ಅವರು ಈ ತೀರ್ಪಿಗೆ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತಾ ''ಸಂವಿಧಾನದ ವಿಧಿ ೧೦೧ ಮತ್ತು ೧೦೨ರಲ್ಲಿ ಉಲ್ಲೇಖವಿಲ್ಲದ ಈ ಹಕ್ಕು ಸಂಸತ್ ಸದಸ್ಯರನ್ನು ಉಚ್ಚಾಟಿಸುವ ಹೊಸ ವಿಧಾನ'' ಎಂದು ಹೇಳಿದ್ದಾರೆ. ಆದರೆ ಈ ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳಲು ಯಾವುದೇ ಪುರಾವೆಗಳಿರುವುದಿಲ್ಲ ಎಂದು ಸಂವಿಧಾನ ತಜ್ಞರು ಹೇಳುತ್ತಾರೆ.

ನಲವತ್ತು ವರ್ಷಗಳ ಹಿಂದೆ ೧೯೬೪ರಲ್ಲಿ ಉತ್ತರ ಪ್ರದೇಶದ ಉಚ್ಚ ನ್ಯಾಯಾಲಯದ ಮಹತ್ವದ ತೀರ್ಪನ್ನು ಇಲ್ಲಿ ಸ್ಮರಿಸುವುದು ಸೂಕ್ತವೆನಿಸುತ್ತದೆ. ವಿಧಾನ ಸಭೆಗೆ ಅಗೌರವ ಸೂಚಿಸಿದ ಆರೋಪ ಎದುರಿಸುತ್ತಿದ್ದ ಶಾಸಕರನ್ನು ಬಂಧಿಸಬೇಕೆಂಬ ವಿಧಾನಸಭೆಯ ಆದೇಶಕ್ಕೆ ವಿರುದ್ಧವಾಗಿ ಅವರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಮತ್ತು ಜಾಮೀನು ಅರ್ಜಿ ಹಾಕಿದ್ದ ವಕೀಲರನ್ನು ಬಂಧಿಸಬೇಕೆಂದು ಉತ್ತರ ಪ್ರದೇಶ ರಾಜ್ಯ ಸರ್ಕಾರವು ಆಜ್ಞೆ ಹೊರಡಿಸಿತ್ತು. ರಾಷ್ಟ್ರಪತಿಗಳು ಈ ಮೊಕದ್ದಮೆಯನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಿದ್ದರು. ಏಳು ಸದಸ್ಯರ ನ್ಯಾಯಪೀಠವು ಈ ರೀತಿಯಾಗಿ ತೀರ್ಪು ನೀಡಿತ್ತು :

೧. ಸಂವಿಧಾನದ ವಿಧಿ ೧೯೪(೩)ರಲ್ಲಿರುವ ಹಕ್ಕುಗಳನ್ನು ನ್ಯಾಯಾಂಗವು ನಿರ್ಧರಿಸುತ್ತದೆಯೇ ಹೊರತು ಶಾಸನಸಭೆಗಳಲ್ಲ. ಅಂದರೆ ಚುನಾಯಿತ ಸದಸ್ಯರು ತಮ್ಮ ಅಧಿಕಾರವನ್ನು ತಾವೇ ಪರಿಶೀಲಿಸುವ ಹಕ್ಕು ಅವರಿಗಿರುವುದಿಲ್ಲ.

೨. ಸಂವಿಧಾನದ ವಿಧಿ ೨೨೬ರ ಅನ್ವಯ ಆಜ್ಞಾಪತ್ರ ಹೊರಡಿಸುವ ಉಚ್ಚ ನ್ಯಾಯಾಲಯದ ನ್ಯಾಯಾಂಗ ವ್ಯಾಪ್ತಿಯು ಶಾಸನಸಭೆಗಳ ವಿಶೇಷಾಧಿಕಾರಕ್ಕೆ ಒಳಪಡುವುದಿಲ್ಲ.

೩. ಸಂವಿಧಾನದ ವಿಧಿ ೩೨ರ ಅನ್ವಯ ಲಭ್ಯವಿರುವ ಮೂಲಭೂತ ಹಕ್ಕುಗಳು

ಪ್ರಸ್ತುತ ರಾಜಕೀಯ ಸನ್ನಿವೇಶದಲ್ಲಿ, ಒಂದು ಖಾಸಗಿ ಟಿ.ವಿ. ಚಾನೆಲ್‌ನವರು ನಡೆಸಿದ ಕಾರ್ಯಾಚರಣೆಯ ಮೂಲಕ ಸಿಕ್ಕಿಬಿದ್ದ ಹನ್ನೊಂದು ಸಂಸದರು, ಜನತೆಯ ದೃಷ್ಟಿಯಲ್ಲಿ ಪ್ರಜಾದ್ರೋಹಿಗಳಾಗಿ ಪರಿಣಮಿಸಿದ್ದಾರೆ. ಆದರೆ ಈ ಹನ್ನೊಂದು ಸಂಸದರನ್ನು ದೇಶದ್ರೋಹಿಗಳೆಂದು ಪರಿಗಣಿಸಿ ಉಚ್ಚಾಟಿಸಿದ ಮಾತ್ರಕ್ಕೆ ಈ ಪ್ರಶ್ನೆ ಇಲ್ಲಿಗೇ ಬಗೆಹರಿಯುವುದಿಲ್ಲ. ಈ ಸಂಸದರಿಗೆ ಮುಂಬರುವ ಚುನಾವಣೆಗಳಲ್ಲಿ ಪಕ್ಷದ ವತಿಯಿಂದ ಟಿಕೇಟು ದೊರೆಯದಿರಬಹುದು, ಆದರೆ ಭಾರತದ ರಾಜಕಾರಣವನ್ನು ಆವರಿಸಿಕೊಂಡಿರುವ ಭ್ರಷ್ಟಾಚಾರದ ಪೆಡಂಭೂತವನ್ನು ಈ ಒಂದು ಪ್ರಕರಣದಿಂದ ಹೊಡೆದಟ್ಟಲಾಗುವುದಿಲ್ಲ.

ಸಂವಿಧಾನಿಕ ಹಕ್ಕುಗಳಾಗಿದ್ದು, ಸರ್ವೋಚ್ಚ ನ್ಯಾಯಾಲಯದ ಮೊರೆಹೋಗುವ ಈ ಹಕ್ಕೂ ಸಹ ಶಾಸನ ಸಭೆಗಳ ವಿಶೇಷಾಧಿಕಾರಕ್ಕೆ ಒಳಪಡುವುದಿಲ್ಲ.

೪. ಸಂವಿಧಾನದ ವಿಧಿ ೨೧ರ ಅನ್ವಯ ಪ್ರಜೆಗಳಿಗೆ ನೀಡಲಾಗಿರುವ ವೈಯಕ್ತಿಕ ಸ್ವಾತಂತ್ರ್ಯದ ಹಕ್ಕನ್ನು ಪ್ರಶ್ನಿಸುವಾಗ ಶಾಸನಸಭೆಯು ತನ್ನ ವಿಶೇಷಾಧಿಕಾರದ ವ್ಯಾಪ್ತಿಯಲ್ಲಿ ಮಾತ್ರವೇ ನಿರ್ಧರಿಸಬೇಕಾಗುತ್ತದೆ.

೫. ಸಂವಿಧಾನದ ವಿಧಿ ೨೧೨ (೧), ಶಾಸನಸಭೆಯ ಕಾರ್ಯವಿಧಾನಗಳಲ್ಲಿನ ಲೋಪದೋಷಗಳನ್ನು ಮಾತ್ರ ನ್ಯಾಯಾಂಗ ಪರಿಶೀಲನೆಯಿಂದ ಹೊರತುಪಡಿಸಿದೆ. ಹಾಗಾಗಿ ಖಂಡನಾರ್ಹ ವಿಧಾನಗಳು ಅಸಂವೈಧಾನಿಕವಾಗಿದ್ದಲ್ಲಿ, ಕಾನೂನು ವಿರೋಧಿಯಾಗಿದ್ದಲ್ಲಿ ನ್ಯಾಯಾಂಗವು ಅದನ್ನು ಪರಿಶೀಲಿಸಬಹುದು ಎಂದೂ ಅಭಿಪ್ರಾಯಪಟ್ಟಿತ್ತು.

ಈ ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ಇನ್ನೂ ಸ್ಪಷ್ಟವಾಗಿ ತನ್ನ ಅಭಿಪ್ರಾಯವನ್ನು ಮಂಡಿಸಬಹುದಾಗಿತ್ತಾದರೂ, ಹಾಗೆ ಮಾಡದಿದ್ದುದು ಅನೇಕ ಗೊಂದಲಗಳಿಗೆ ಕಾರಣವಾಗಿದೆ. ಸಂವಿಧಾನದ ವಿಧಿ ೧೯(೧)(a)ರ ಅನ್ವಯ ಪ್ರಜೆಗಳ ವಾಕ್ ಸ್ವಾತಂತ್ರ್ಯ, ಶಾಸನಸಭೆಯ ವಿಶೇಷಾಧಿಕಾರಕ್ಕಿಂತಲೂ ಹೆಚ್ಚು ಎಂಬ ಅಂಶವನ್ನು ಈ ತೀರ್ಪಿನಲ್ಲಿ ಹೇಳಲಿಲ್ಲ. "ಪ್ರಜೆಗಳ ಎಲ್ಲಾ ಮೂಲಭೂತ ಹಕ್ಕುಗಳೂ ಸಹ ಶಾಸನ ಸಭೆಗಳ ವಿಶೇಷಾಧಿಕಾರದ ವ್ಯಾಪ್ತಿಗೆ ಒಳಪಡುತ್ತದೆಯೋ ಇಲ್ಲವೋ ಎಂಬ ಪ್ರಶ್ನೆಯನ್ನು ನಾವಿಲ್ಲಿ ಪ್ರಸ್ತಾಪಿಸುತ್ತಿಲ್ಲ. ಆದರೆ ಒಬ್ಬ ಪ್ರಜೆ ಸಂವಿಧಾನದ ವಿಧಿ ೨೧ರ ಅನ್ವಯ ತನಗೆ ಲಭ್ಯವಿರುವ ವೈಯಕ್ತಿಕ ಸ್ವಾತಂತ್ರ್ಯದ ಹರಣವಾಗಿದೆ ಎಂದು ನ್ಯಾಯಾಲಯದ ಮೊರೆ ಹೊಕ್ಕಾಗ, ಅದನ್ನು ನಾವು ಸಂವಿಧಾನಾತ್ಮಕವಾಗಿ ಪರಿಶೀಲಿಸುವುದು ಅಗತ್ಯವಾಗುತ್ತದೆ" ಎಂದು ನ್ಯಾಯಾಲಯವು ತನ್ನ ತೀರ್ಪಿನಲ್ಲಿ ಹೇಳಿತ್ತು.

ಇಲ್ಲಿ ಪ್ರಸಕ್ತ ತೀರ್ಪಿನಲ್ಲಿ ಸರ್ವೋಚ್ಚ ನ್ಯಾಯಾಲಯದ ಎರಡು ಅಭಿಪ್ರಾಯಗಳನ್ನು ಗಮನಿಸಬೇಕಾಗುತ್ತದೆ. ಶಾಸನಸಭೆಗಳ ವಿಧಾನಗಳ ನಿಯಮಗಳು ಕಾನೂನುಗಳಾಗಿರುವುದರಿಂದ ಅವು ಮೂಲಭೂತ ಹಕ್ಕುಗಳ ವ್ಯಾಪ್ತಿಗೆ ಒಳಪಡುತ್ತವೆ. ವಿಶೇಷಾಧಿಕಾರದ ಸಮಿತಿಗಳು ಈ ನಿಯಮಗಳಡಿಯಲ್ಲೇ ರೂಪಿಸಲ್ಪಟ್ಟಿರುವುದರಿಂದ, ಸಂವಿಧಾನದ ವಿಧಿ ೨೧ರ ಪ್ರಕಾರ ವೈಯಕ್ತಿಕ ಸ್ವಾತಂತ್ರ್ಯದ ಪ್ರಶ್ನೆ ಉದ್ಭವಿಸಿದಾಗ, ಅದು ನ್ಯಾಯಾಂಗದ ಪರಿಶೀಲನೆಗೆ ಒಳಪಡುತ್ತದೆ. ಎರಡನೆಯದಾಗಿ, ೧೯೫೮ರ ಸರ್ಚ್‌ಲೈಟ್ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ್ದ ತೀರ್ಪಿನಲ್ಲಿ "ಚುನಾಯಿತ ಪ್ರತಿನಿಧಿಗಳ ಶಾಸನ ಸಭಾ ವಿಶೇಷಾಧಿಕಾರಗಳು, ಪ್ರಜೆಗಳ ಮೂಲಭೂತ ಹಕ್ಕುಗಳನ್ನು ಮೀರಿ ನಿಲ್ಲುತ್ತವೆ" ಎಂದು ಹೇಳಿರುವುದನ್ನೇ ಉಲ್ಲೇಖಿಸಲಾಗುವುದೇ ಹೊರತು, ಮೇಲೆ ಹೇಳಲಾದ ೧೯೬೪ರ ಉತ್ತರ ಪ್ರದೇಶದ ತೀರ್ಪನ್ನು ಪರಿಗಣಿಸಲಾಗುವುದಿಲ್ಲ ಎಂದು ಸರ್ವೋಚ್ಚ ನ್ಯಾಯಾಲಯವು ಆಕ್ಷೇಪ ವ್ಯಕ್ತಪಡಿಸುತ್ತದೆ. ೧೯೬೪ರ ನಂತರದಲ್ಲಿ ಕಂಡು ಬಂದಿರುವ ಒಂದು ಮಹತ್ತರ ಬೆಳವಣಿಗೆ ಎಂದರೆ, ಶಾಸನಸಭೆಗಳ ವಿಶೇಷಾಧಿಕಾರವನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಿದ ಸಂದರ್ಭದಲ್ಲೆಲ್ಲ, ಚುನಾಯಿತ ಪ್ರತಿನಿಧಿಗಳು ಶಾಸನಸಭೆಯ ಅಧಿಕಾರ ವ್ಯಾಪ್ತಿಯನ್ನು ನ್ಯಾಯಾಲಯದಲ್ಲಿ ಸಮರ್ಥಿಸುವುದನ್ನೇ ವಿಶೇಷಾಧಿಕಾರದ ಉಲ್ಲಂಘನೆ ಎಂದು ಪರಿಗಣಿಸಲಾಗುತ್ತಿದೆ. ಹಾಗಾಗಿಯೇ ಪ್ರಸ್ತುತ ಮೊಕದ್ದಮೆಯಲ್ಲೂ ಲೋಕಸಭಾ ಅಧ್ಯಕ್ಷರು ನ್ಯಾಯಾಲಯದಲ್ಲಿ ಹಾಜರಾಗಿರಲಿಲ್ಲ. ೧೯೬೪ರ ಮುನ್ನ ಈ ರೀತಿಯ ಪ್ರಸಂಗಗಳಲ್ಲಿ ಶಾಸನಸಭೆಗಳು ನ್ಯಾಯಾಲಯದಲ್ಲಿ ತಮ್ಮ ಅಧಿಕಾರ ವ್ಯಾಪ್ತಿಯನ್ನು ಸಮರ್ಥಿಸಿಕೊಳ್ಳುತ್ತಿದ್ದವು.

| ಟೇಬಲ್ ೧ |
|---|
| ಮಾಸಿಕ ವೇತನ ೧೨,೦೦೦/- ರೂ.ಗಳು |
| ಅಧಿವೇಶನ ಭತ್ಯೆ ದಿನಕ್ಕೆ ೫೦೦/- ರೂ.ಗಳು (ಅಧಿವೇಶನಕ್ಕೆ ಬರಲಿ, ಬಾರದಿರಲಿ) |
| ಕ್ಷೇತ್ರ ಪಾಲನಾ ಭತ್ಯೆ ತಿಂಗಳಿಗೆ ೧೦,೦೦೦/-ರೂ.ಗಳು (ಸಂಸದರ ಕ್ಷೇತ್ರ ಅಭಿವೃದ್ಧಿ ಯೋಜನೆಯಡಿ ನೀಡುವ ೨ ಕೋಟಿ ರೂ.ಗಳನ್ನು ಹೊರತುಪಡಿಸಿ) |
| ಲೇಖನ ಸಾಮಗ್ರಿ ಖರ್ಚು ತಿಂಗಳಿಗೆ ೩,೦೦೦/- ರೂ.ಗಳು. ಅಂಚೆ ವೆಚ್ಚ ತಿಂಗಳಿಗೆ ೧,೦೦೦/- ರೂ.ಗಳು |
| ಕಾರ್ಯದರ್ಶಿಯ ವೇತನ ತಿಂಗಳಿಗೆ ೧೦,೦೦೦/- ರೂ.ಗಳು |
| ಪ್ರಯಾಣ : ಮೊದಲನೇ ದರ್ಜೆ ರೈಲು ಅಥವಾ ಒಮ್ಮುಖ ವಿಮಾನ ಯಾನ ವೆಚ್ಚ ಮತ್ತು ಪ್ರತಿ ಕಿಲೋಮೀಟರಿಗೆ ಎಂಟು ರೂ.ಗಳ ಪ್ರಯಾಣ ಭತ್ಯೆ |
| ನೀರು ಸರಬರಾಜು : ಒಂದು ವರ್ಷಕ್ಕೆ ನಲವತ್ತು ಲಕ್ಷ ಲೀಟರ್ |
| ವಿದ್ಯುಚ್ಛಕ್ತಿ ವರ್ಷಕ್ಕೆ ೫೦,೦೦೦ ಯೂನಿಟ್‌ಗಳು |
| ಪೀಠೋಪಕರಣ ಹಾಗೂ ಗೃಹಾಲಂಕಾರ ಮತ್ತು ರಿಪೇರಿಗಾಗಿ ವರ್ಷಕ್ಕೆ ೨೪,೦೦೦/- ರೂ.ಗಳು |
| ದೂರವಾಣಿ ವೆಚ್ಚ : ವರ್ಷಕ್ಕೆ ೧,೫೦,೦೦೦ ಉಚಿತ ಕರೆಗಳಿಗಾಗುವ ಮೊತ್ತ. (ಆಧಾರ : ಇಂಡಿಯಾ ಟುಡೇ, ಜನವರಿ ೨, ೨೦೦೬) |

ಈ ಪರಿಸ್ಥಿತಿಗೆ ಬಹುಶಃ ನಮ್ಮ ಸಂವಿಧಾನ ಕರ್ತೃಗಳಿಗೆ ಭಾರತೀಯ ಸಂಸತ್ತಿನ ಜನಪ್ರತಿನಿಧಿಗಳ ಮೇಲಿದ್ದ ಅಪ್ರತಿಮ ವಿಶ್ವಾಸವೇ ಕಾರಣವೆಂದು ಹೇಳಲಾಗುತ್ತದೆ. ಸಂವಿಧಾನದ ವಿಧಿ ೧೦೫(೧)ರ ಪ್ರಕಾರ, ಸಂವಿಧಾನದ ನಿಯಮಗಳಿಗೆ ಮತ್ತು ಕಾರ್ಯವಿಧಾನಗಳ ನಿಯಮಗಳಿಗೆ ಬದ್ಧವಾಗಿದ್ದಲ್ಲಿ, ಸಂಸತ್ತಿನಲ್ಲಿ ವಾಕ್ ಸ್ವಾತಂತ್ರ್ಯ ಲಭ್ಯವಾಗುತ್ತದೆ ಎಂದು ಹೇಳಲಾಗಿದೆ. Sub clause ೨ ನಿಯಮದನುಸಾರ ಸಂಸತ್ತಿನಲ್ಲಿ, ವಿಧಾನಸಭೆಗಳಲ್ಲಿ ನಡೆಯುವ ನಡಾವಳಿಗಳ ಸಮಯದಲ್ಲಿ ಸಂಸದೀಯರು, ಶಾಸಕರು ಮಾಡುವ ಭಾಷಣಗಳು ಮತ್ತು ಮತ ಚಲಾವಣೆಗಳು ನ್ಯಾಯಾಂಗ ಪರಿಶೀಲನೆಗೆ ಒಳಪಡುವುದಿಲ್ಲ. ಇನ್ನೊಂದು ನಿಯಮದನುಸಾರ (Sub clause ೩) ಪ್ರತಿ ಸಂಸತ್ತಿನ ಮತ್ತು ಸಂಸದರ, ಸಂಸತ್ ಸಮಿತಿಗಳ ಅಧಿಕಾರ, ವಿಶೇಷಾಧಿಕಾರ ಮತ್ತು ವಿನಾಯಿತಿಗಳನ್ನು ಕಾಲಾನುಕಾಲಕ್ಕೆ ಸಂಸತ್ತೇ ನಿರ್ಧರಿಸುತ್ತದೆ. ಹಾಗೆ ನಿರ್ಧರಿಸುವವರೆಗೂ, ಪ್ರಚಲಿತ ವಿಧಿ ವಿಧಾನಗಳು ಮುಂದುವರೆಯುತ್ತವೆ ಎಂದು ಹೇಳಲಾಗಿದೆ. ಸಂವಿಧಾನ ರಚನೆಗೆ ಮುನ್ನ ಈ ನಿಯಮಗಳ ಬಗ್ಗೆ ಅನೇಕರು ಆಕ್ಷೇಪ ವ್ಯಕ್ತಪಡಿಸಿದ್ದೂ ಉಂಟು. ಆದರೆ ಈ ನಿಯಮಗಳು ಕೇವಲ ತಾತ್ಕಾಲಿಕವಾಗಿದ್ದು, ಬ್ರಿಟನ್ ಸಂವಿಧಾನದ ನಿಯಮಗಳನ್ನೇ ಇಲ್ಲಿ ಅಳವಡಿಸಲಾಗಿದೆ. ಮುಂಬರುವ ದಿನಗಳಲ್ಲಿ ಇದನ್ನು ಬದಲಾಯಿಸುವ ಸಾಧ್ಯತೆಗಳಿವೆ ಎಂದು ಭರವಸೆ ನೀಡಲಾಗಿತ್ತು. ಆದರೆ ೧೯೪೯ರಲ್ಲಿ ಶಾಸನಸಭೆಯನ್ನು ಉದ್ದೇಶಿಸಿ ಮಾತನಾಡಿದ ಅಧ್ಯಕ್ಷ ರಾಜೇಂದ್ರ ಪ್ರಸಾದ್ ಅವರು, ಈ ನಿಯಮವನ್ನು ಮುಂಬರುವ ದಿನಗಳಲ್ಲಿ ಮಾರ್ಪಡಿಸುವ ಯತ್ನಗಳು ನಡೆಯದೆಯೇ ಇರಬಹುದು, ಹಾಗಾಗಿ ಸಂಸತ್ ಸದಸ್ಯರು ಎಚ್ಚರಿಕೆಯಿಂದಿರಬೇಕೆಂದು ಹೇಳಿದ್ದುದನ್ನು ಇಲ್ಲಿ ಸ್ಮರಿಸಬೇಕಾಗುತ್ತದೆ. ಅವರು ಹೇಳಿದಂತೆಯೇ ಆಗಿರುವುದೂ ಕಾಕತಾಳೀಯವಲ್ಲವೆ ?

ಈ ಹಿನ್ನೆಲೆಯಲ್ಲಿ ನೋಡಿದಾಗ ಯಾವುದೇ ಸಂಸದ ಅಥವಾ ಶಾಸಕರನ್ನು ಉಚ್ಚಾಟಿಸುವ ಹಕ್ಕು ಮತ್ತು ವಿಶೇಷಾಧಿಕಾರ ವಿಧಾನ ಸಭೆಗಳಿಗೆ (ಸಂವಿಧಾನ ವಿಧಿ ೧೯೪) ಮತ್ತು ಸಂಸತ್ತಿಗೆ (ವಿಧಿ ೧೦೫) ಇರುತ್ತದೆ. ಆದರೆ ಇದು ನ್ಯಾಯಾಂಗ ಪರಿಶೀಲನೆಗೆ ಒಳಪಡಬಹುದಾದ ಸಾಧ್ಯತೆಗಳೂ ಇರುತ್ತವೆ. ಈ ನಿಟ್ಟಿನಲ್ಲಿ ಪ್ರಸ್ತುತ ಸರ್ವೋಚ್ಚ ನ್ಯಾಯಾಲಯದ ತೀರ್ಪು ಸ್ವಾಗತಾರ್ಹವೇ ಆದರೂ, ಸಂಸತ್ತಿನ ವಿಶೇಷಾಧಿಕಾರಗಳನ್ನು ಒಂದು ನೀತಿಸಂಹಿತೆಗೊಳಪಡಿಸುವ ಆಲೋಚನೆ ಮಾಡಿದ್ದಲ್ಲಿ, ಬೇಲಿಯೆ ಎದ್ದು ಹೊಲ ಮೇಯುವ ಪ್ರಸಂಗಗಳನ್ನು ತಡೆಗಟ್ಟಬಹುದಿತ್ತು.

ಪ್ರಸ್ತುತ ರಾಜಕೀಯ ಸನ್ನಿವೇಶದಲ್ಲಿ, ಒಂದು ಖಾಸಗಿ ಟಿ.ವಿ. ಚಾನೆಲ್‌ನವರು ನಡೆಸಿದ ಕಾರ್ಯಾಚರಣೆಯ ಮೂಲಕ ಸಿಕ್ಕಿಬಿದ್ದ ಹನ್ನೊಂದು ಸಂಸದರು, ಜನತೆಯ ದೃಷ್ಟಿಯಲ್ಲಿ ಪ್ರಜಾದ್ರೋಹಿಗಳಾಗಿ ಪರಿಣಮಿಸಿದ್ದಾರೆ. ಆದರೆ ಈ ಹನ್ನೊಂದು ಸಂಸದರನ್ನು ದೇಶದ್ರೋಹಿಗಳೆಂದು ಪರಿಗಣಿಸಿ ಉಚ್ಚಾಟಿಸಿದ ಮಾತ್ರಕ್ಕೆ ಈ ಪ್ರಶ್ನೆ ಇಲ್ಲಿಗೇ ಬಗೆಹರಿಯುವುದಿಲ್ಲ. ಈ ಸಂಸದರಿಗೆ ಮುಂಬರುವ ಚುನಾವಣೆಗಳಲ್ಲಿ ಪಕ್ಷದ ವತಿಯಿಂದ ಟಿಕೇಟು ದೊರೆಯದಿರಬಹುದು. ಆದರೆ ಭಾರತದ ರಾಜಕಾರಣವನ್ನು ಆವರಿಸಿಕೊಂಡಿರುವ ಭ್ರಷ್ಟಾಚಾರದ ಪೆಡಂಭೂತವನ್ನು ಈ ಒಂದು ಪ್ರಕರಣದಿಂದ ಹೊಡೆದಟ್ಟಲಾಗುವುದಿಲ್ಲ.

"ನೆನಪಿನ ಶಕ್ತಿ ಅಲ್ಪಕಾಲಿಕ" ಎಂಬ ನಾಣ್ಣುಡಿಯಿದೆ. ಅದೇ ರೀತಿ ಭಾರತೀಯ ಜನತೆಯೂ ತಮ್ಮ ಚುನಾಯಿತ ಪ್ರತಿನಿಧಿಗಳ ಅಪರಾಧಗಳನ್ನು, ಜನವಿರೋಧಿ ಕೃತ್ಯಗಳನ್ನು ಮರೆಯುವುದಷ್ಟೇ ಅಲ್ಲ, ಕ್ಷಮಿಸುತ್ತಲೂ ಬಂದಿದ್ದಾರೆ. ಭ್ರಷ್ಟ ರಾಜಕಾರಣಿಗಳನ್ನು ತಮ್ಮ ಮನದಲ್ಲಿ ಶಪಿಸಿದರೂ, ಸಾರ್ವಜನಿಕವಾಗಿ ವ್ಯಕ್ತಪಡಿಸುವುದರಲ್ಲಿ ಸಾಮಾನ್ಯ ಜನತೆ ಬಹುತೇಕ ವಿಫಲವಾಗಿದೆ. ಹಾಗಾಗಿಯೇ, ತಮ್ಮ ಭ್ರಷ್ಟ ನೀತಿಗಳಿಂದ ಚುನಾವಣೆಗಳಲ್ಲಿ ಸೋತ ಅಭ್ಯರ್ಥಿಗಳೇ, ಮತ್ತೆ ಮತ್ತೆ

ಚುನಾಯಿಸಲ್ಪಡುತ್ತಾರೆ. ಅನ್ಯಮಾರ್ಗವಿಲ್ಲ, ಪರ್ಯಾಯ ವ್ಯವಸ್ಥೆ ಇಲ್ಲ, ಪರ್ಯಾಯ ನೀತಿ ಅನುಸರಿಸುವ ಪಕ್ಷಗಳಿಲ್ಲ ಎಂಬ ಸಬೂಬುಗಳ ನಡುವೆ, ಈ ಭ್ರಷ್ಟವ್ಯವಸ್ಥೆಯಲ್ಲಿ, ಇತ್ತೀಚೆಗೆ ನಿವೃತ್ತರಾದ ಲೋಕಾಯುಕ್ತ ವೆಂಕಟಾಚಲಯ್ಯನವರಾಗಲಿ, ಸಾಂಗ್ಲಿಯಾನಾರವರಾಗಲಿ, ತಮ್ಮ ಕರ್ತವ್ಯವನ್ನು ನಿಭಾಯಿಸಿದರೂ ಅವರು ಸಾರ್ವಜನಿಕ ದೃಷ್ಟಿಯಲ್ಲಿ ಹೀರೋಗಳಾಗಿಬಿಡುತ್ತಾರೆ. ಆದರೆ ಈ ರೀತಿಯ ಪ್ರಕರಣಗಳಿಂದ ಕಳೆದ ಆರು ದಶಕಗಳ ಸ್ವತಂತ್ರ ಭಾರತದ ಇತಿಹಾಸದಲ್ಲಿ, ಚುನಾಯಿತ ಪ್ರತಿನಿಧಿಗಳು ನಮ್ಮ ದೇಶದ ವ್ಯವಸ್ಥೆಯನ್ನು ಎಂತಹ ದುಃಸ್ಥಿತಿಗೆ ಈಡುಮಾಡಿದ್ದಾರೆ ಎಂಬುದರ ಬಗ್ಗೆ ಚರ್ಚೆ ನಡೆಯಬೇಕಾಗಿದೆ.

ಚುನಾಯಿತರಾದ ನಂತರದಲ್ಲಿ ಪ್ರಮಾಣವಚನ ಸ್ವೀಕರಿಸುವುದು ಕೇವಲ ಒಂದು ಸಾಂಪ್ರದಾಯಿಕ ಕ್ರಿಯೆಯಾಗಿರುವ ಸಂದರ್ಭದಲ್ಲಿ, ಚುನಾವಣಾ ಆಯೋಗದ ಅನೇಕ ನೀತಿಸಂಹಿತೆ, ನಿರ್ದೇಶನಗಳ, ಷರತ್ತುಗಳ ನಡುವೆಯೂ, ರಾಜಕೀಯ ಪಕ್ಷಗಳು ಚುನಾವಣೆಗಳಲ್ಲಿ ಹಣವನ್ನು ಹೊಳೆಯಂತೆ ಹರಿಸುತ್ತವೆ. ಇದರೊಂದಿಗೆ ಚುನಾವಣಾ ಸಮಯದಲ್ಲಿ ವ್ಯಕ್ತವಾಗುವ ಲಾಂಗು-ಮಚ್ಚುಗಳ ಸಂಸ್ಕೃತಿ, ಘರ್ಷಣೆಗಳು, ಕೊಲೆಗಳು, ಭಾರತೀಯ ಸಂಸದೀಯ ಪ್ರಜಾತಂತ್ರ ವ್ಯವಸ್ಥೆ, ಕಳೆದ ಆರು ದಶಕಗಳಲ್ಲಿ ಭ್ರಷ್ಟಾಚಾರವನ್ನು, ಅರಾಜಕತೆಯನ್ನು ಯಾವ ರೀತಿ ವ್ಯವಸ್ಥಿತವಾಗಿ ಸಾಂಸ್ಥೀಕರಣಗೊಳಿಸಿದೆ ಎಂದು ನಿರೂಪಿಸುತ್ತದೆ. ತಮ್ಮ ಜೀವನದಲ್ಲಿ ಸಂಪಾದಿಸಿದ್ದನ್ನೆಲ್ಲವನ್ನೂ, ಚುನಾವಣೆಯಲ್ಲಿ ತೊಡಗಿಸಿದ ನಂತರ, ಚುನಾಯಿತ ಸದಸ್ಯರಿಗೆ ತಾವು ಸಾಲ ಸೋಲ ಮಾಡಿ, ಚುನಾವಣೆಯಲ್ಲಿ ತೊಡಗಿಸಿದ ಹಣವನ್ನು ಮರಳಿ ಪಡೆಯುವುದು ಬಹುತೇಕ ಅವಶ್ಯಕತೆಯಾಗಿಬಿಡುತ್ತದೆ. ಆಂಗ್ಲ ಭಾಷೆಯಲ್ಲಿ "Beg, Borrow or Steal' ಎಂಬ ವಚನ ಇದೆ. ಅಂತೆಯೇ ಭಾರತೀಯ ಪ್ರಜಾತಂತ್ರ ವ್ಯವಸ್ಥೆಯ ಚುನಾಯಿತ ಜನಪ್ರತಿನಿಧಿಗಳು, ಮತದಾರರಿಂದ ವೋಟಿನ ಭಿಕ್ಷೆ ಬೇಡಿ, ಹಣಬಲದಿಂದ ಮತ ಗಳಿಸಲು ಸಾಲ ಮಾಡಿ, ಸಾಲ ತೀರಿಸಲು ಸರ್ಕಾರೀ ಖಜಾನೆಯಿಂದ ಮತ್ತು ಪ್ರಜೆಗಳ ಜೇಬಿನಿಂದಲೇ ಹಣ ಕದಿಯುವುದರಲ್ಲಿ ನಿಸ್ಸೀಮರಾಗಿದ್ದಾರೆ ಎಂದು ಈ ಸಂದರ್ಭದಲ್ಲಿ ಹೇಳಬಹುದು.

ಚುನಾವಣಾ ಅಭ್ಯರ್ಥಿಗಳಿಗೆ, ರಾಜಕೀಯ ಪಕ್ಷಗಳಿಗೆ ಹಣ ಎಲ್ಲಿಂದ ಒದಗಿ ಬರುತ್ತದೆ, ಹಣವನ್ನು ಹೇಗೆ ಸಂಗ್ರಹಿಸಲಾಗುತ್ತದೆ ಎಂಬ ಅಂಶಗಳು ಗುಟ್ಟಾದ ವಿಷಯವೇನೂ ಅಲ್ಲ. ೯೦ರ ದಶಕದ ಮುನ್ನ ಎಲ್ಲಾ ರಾಜಕೀಯ ಪಕ್ಷಗಳೂ ಬಂಡವಾಳಶಾಹಿಗಳಿಂದ, ಸಣ್ಣ ಪುಟ್ಟ ವ್ಯಾಪಾರಿಗಳಿಂದ ಹಣ ಸಂಗ್ರಹ ಮಾಡುತ್ತಿದ್ದರಾದರೂ, ಜಾಗತೀಕರಣ ಪ್ರಕ್ರಿಯೆ ಆರಂಭಗೊಂಡ ನಂತರ, ಸುಲಭ ಬಂಡವಾಳ ಲಭ್ಯವಿರುವುದರಿಂದ, ರಾಜಕೀಯ ಪಕ್ಷಗಳಿಗೆ ಎಲ್ಲಾ ದಿಕ್ಕುಗಳಿಂದಲೂ ಹಣದ ಹೊಳೆಯೇ ಹರಿದುಬರುತ್ತದೆ. ಬಹುರಾಷ್ಟ್ರೀಯ ಕಂಪನಿಗಳು, ಅನಿವಾಸಿ ಭಾರತೀಯರು ನೀಡುವ ವಂತಿಗೆ ಹಣ, ರಾಜಕೀಯ ಪಕ್ಷಗಳಿಗೆ ಚಿನ್ನದ ಗಣಿಗಳಾಗಿ ಪರಿಣಮಿಸಿವೆ. ವಿದೇಶೀ ಸಾಂಸ್ಥಿಕ ಬಂಡವಾಳ ಹೂಡಿಕೆ ಬೇರಾವ ಕ್ಷೇತ್ರದಲ್ಲಿಲ್ಲದಿದ್ದರೂ, ರಾಜಕೀಯ ಕ್ಷೇತ್ರದಲ್ಲಿ ಹೆಚ್ಚಾಗಿದೆ ಎಂದರೆ ತಪ್ಪಾಗಲಾರದು. ಯಾವುದೇ ಪಕ್ಷ ಅಧಿಕಾರದಲ್ಲಿದ್ದರೂ ಈ ಹಣದ ಹೊಳೆಯನ್ನು ತಡೆಯಲಾಗುವುದಿಲ್ಲ, ಏಕೆಂದರೆ, ಧನಬಲ ಇಲ್ಲದಿದ್ದಲ್ಲಿ ಚುನಾವಣೆಯಲ್ಲಿ ಸ್ಪರ್ಧಿಸುವುದೇ ದುಸ್ಸಾಧ್ಯವಾಗಿಬಿಟ್ಟಿದೆ. ಈ ಕಟು ಸತ್ಯ ಎಲ್ಲಾ ರಾಜಕೀಯ ಪಕ್ಷಗಳಿಗೂ ತಿಳಿದಿದೆ.

ಈ ಹಿನ್ನೆಲೆಯಲ್ಲಿ, ಪ್ರಶ್ನೆಗಾಗಿ ಲಂಚ ಮತ್ತು ಲಾಭದಾಯಕ ಹುದ್ದೆ ಪ್ರಕರಣ ಜನಸಮುದಾಯದಲ್ಲಿ ಭಾರೀ ಅಚ್ಚರಿ ಮೂಡಿಸುವುದಿಲ್ಲ. ಇಂದಿನ ರಾಜಕಾರಣಿಗಳಿಗೆ ಎರಡು ಪರಮೋದ್ದೇಶ ಇರುತ್ತವೆ. ಮೊದಲನೆಯದಾಗಿ, ಹೇಗಾದರೂ ಮಾಡಿ ಐದು ವರ್ಷಗಳ ಕಾಲ ಅಧಿಕಾರದಲ್ಲಿರುವುದು, ನಂತರ ಆ ಐದು ವರ್ಷಗಳ ಅವಧಿಯಲ್ಲಿ ತಮ್ಮ ಜೀವನಪರ್ಯಂತ ಅನುಭವಿಸಲು ಸಾಕಾಗುವಷ್ಟು ಐಶ್ವರ್ಯ ಸಂಪಾದಿಸುವುದು. ಸುನಾಮಿ, ಭೂಕಂಪ, ಬರಗಾಲ, ಪ್ರವಾಹ, ಅತಿವೃಷ್ಟಿ ಯಾವುದೇ ಸಮಸ್ಯೆಗಳುಂಟಾದಾಗ, ಪ್ರಜೆಗಳಿಗೆ ''ತಮ್ಮ ಸೊಂಟದ ಪಟ್ಟಿಗಳನ್ನು ಬಿಗಿ ಮಾಡಿಕೊಳ್ಳಿ'' ಎಂದು ಉಪದೇಶಿಸುವ ಸರ್ಕಾರಗಳು, ತಮಗೆ ಯಾವುದೇ ನೀತಿ ನಿಯಮಗಳನ್ನು ಅನ್ವಯಿಸಿಕೊಳ್ಳುವುದಿಲ್ಲ. ನಿದರ್ಶನ ರೂಪದಲ್ಲಿ ಹೇಳುವುದಾದರೆ, ಕಳೆದ ಹದಿನೈದು ವರ್ಷಗಳಲ್ಲಿ, ಅನೇಕ ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳು ಮುಚ್ಚಲ್ಪಟ್ಟಿದ್ದು, ಲಕ್ಷಾಂತರ ಕಾರ್ಮಿಕರು ಬೀದಿಪಾಲಾಗಿದ್ದಾರೆ. ನೌಕರರು ತಮ್ಮ ವೇತನ ಪರಿಷ್ಕರಣೆಗಾಗಿ, ಹಲವಾರು ಹೋರಾಟಗಳನ್ನು ನಡೆಸಬೇಕಾಗುತ್ತದೆ. ಆದರೆ ಭಾರತೀಯ ಜನತಾ ಪಕ್ಷದ ನೇತೃತ್ವದ ಎನ್.ಡಿ.ಎ. ಸರ್ಕಾರದ ಅವಧಿಯಲ್ಲಿ, ಕಾರ್ಗಿಲ್ ಯುದ್ಧದ ಹಿನ್ನೆಲೆಯಲ್ಲಿ ೪ ವರ್ಷಗಳ ಬರಗಾಲವಿದ್ದಾಗ್ಯೂ, ಸಂಸದರ ವೇತನ ಮತ್ತು ಇತರ ಸವಲತ್ತುಗಳನ್ನು ಹೆಚ್ಚಿಸಲಾಯಿತು. ಅಚ್ಚರಿಯ ಅಂಶವೆಂದರೆ ಈ ಸಂಸದರ ವೇತನ ಪರಿಷ್ಕರಣೆಯ ಮಸೂದೆಯನ್ನು ಮಂಡಿಸಿದಾಗ, ಅಸ್ಸಾಂನ ಕರ್ಬಿ ಅಗ್ಲಾಂಗ್ ಕ್ಷೇತ್ರದ ಎಡ ಪಂಥೀಯ ಸದಸ್ಯನನ್ನು ಬಿಟ್ಟರೆ, ಇನ್ನಾವ ಸದಸ್ಯರೂ ವಿರೋಧ ವ್ಯಕ್ತಪಡಿಸಲಿಲ್ಲ. ಶೇಕಡ ೩೦ರಷ್ಟು ಜನ ಒಂದು ಹೊತ್ತಿನ ಕೂಳಿಗೂ ಇಲ್ಲದ ಸ್ಥಿತಿ ಎದುರಿಸುತ್ತಿರುವ ದೇಶದಲ್ಲಿ, ಯಾವುದೇ ಒಬ್ಬ ಸಾಮಾನ್ಯ ಪ್ರಜೆ ನಮ್ಮ ಪ್ರಜಾಪ್ರತಿನಿಧಿಗಳ ವೇತನ-ಸವಲತ್ತುಗಳನ್ನು ನೋಡಿದಲ್ಲಿ, ಇದು ನಮ್ಮ ದೇಶವೇ? ಎಂದು ಹುಬ್ಬೇರಿಸಿದರೂ ಅಚ್ಚರಿಯೇನಿಲ್ಲ. ಇತ್ತೀಚೆಗೆ ಪುನರ್ ಪರಿಷ್ಕರಿಸಲಾದ ನಮ್ಮ ಸಂಸದರ ವೇತನ-ಸವಲತ್ತುಗಳನ್ನು ಟೇಬಲ್ ೧ರಲ್ಲಿ ಕೊಡಲಾಗಿದೆ.




ಈ ಸವಲತ್ತುಗಳನ್ನು ಕಳೆದುಕೊಳ್ಳಲು ಯಾವ ರಾಜಕಾರಣಿ ತಯಾರಾಗಿರುತ್ತಾರೆ? ಹಾಗಾಗಿಯೇ ಕರ್ನಾಟಕದಲ್ಲಿಯೂ ಸೇರಿದಂತೆ ದೇಶದೆಲ್ಲೆಡೆ ಸಿದ್ಧಾಂತ ರಹಿತ ರಾಜಕೀಯ ದೊಂಬರಾಟವನ್ನು ನೋಡುತ್ತಿದ್ದೇವೆ.

ಸಂಸತ್ತಿನ ಹನ್ನೊಂದು ಸಂಸದರನ್ನು ಉಚ್ಚಾಟಿಸಿರುವುದು ಉಚಿತ ಕ್ರಮವೇ ಆದರೂ, ಇದರಿಂದ ಇನ್ನುಳಿದವರ ನಿಷ್ಠೆಯೇನೂ ವ್ಯಕ್ತವಾಗುವುದಿಲ್ಲ ಎಂಬ ಅಂಶವನ್ನೂ ನಾವು ಗಮನಿಸಬೇಕಾಗಿದೆ. ಉಳಿದ ಸಂಸದರು ಸದ್ಯಕ್ಕೆ ಬಚಾವಾಗಿದ್ದಾರೆಂದು ಹೇಳಬಹುದು. ನ್ಯಾಯಾಲಯದ ಕಟಕಟೆಗಳು, ಸಂಸತ್ತಿನ ನಿರ್ಣಯಗಳು ಈ ಪಿಡುಗನ್ನು ಬಗೆಹರಿಸಲಾರವು; ಏನಿದ್ದರೂ ತಾತ್ಕಾಲಿಕ ಪರಿಹಾರ ಸೂಚಿಸಬಹುದಷ್ಟೆ. ಚುನಾಯಿತ ಪ್ರತಿನಿಧಿಗಳನ್ನು ಹಿಂದಕ್ಕೆ ಕರೆಸಿಕೊಳ್ಳುವ, ಅರ್ಥಾತ್ ಅಂತಹ ಸದಸ್ಯರ ಆಯ್ಕೆಯನ್ನು ಅನೂರ್ಜಿತಗೊಳಿಸುವ ಹಕ್ಕನ್ನು ಸಂವಿಧಾನಾತ್ಮಕವಾಗಿ ಪ್ರಜೆಗಳಿಗೇ ನೀಡುವುದು ಈ ಸಮಸ್ಯೆಗೆ ಸೂಕ್ತ ಪರಿಹಾರವಾಗುತ್ತದೆ. ಮಾನವ ಹಕ್ಕು ಸಂಘಟನೆಗಳು ಅನೇಕ ವರ್ಷಗಳಿಂದ ಈ ಹಕ್ಕನ್ನು ನೀಡುವಂತೆ ಸರ್ಕಾರಗಳನ್ನು ಒತ್ತಾಯಿಸುತ್ತಿವೆ. ಆದರೆ ಯಾವುದೇ ಪಕ್ಷವೂ ಇದನ್ನು ಪರಿಗಣಿಸಲು ಸಿದ್ಧವಿಲ್ಲದಿರುವುದು ವಿಷಾದನೀಯ.

(ಸಂವಿಧಾನ ಮತ್ತು ನ್ಯಾಯಾಂಗದ ಪ್ರಕರಣಗಳು ಮತ್ತು ತಾಂತ್ರಿಕ ಅಂಶಗಳಿಗೆ ಆಧಾರ ಎ. ಜಿ. ನೂರಾನಿ, ಫ್ರಂಟ್‌ಲೈನ್ ಪತ್ರಿಕೆ, ಫೆ. ೯, ೨೦೦೬)

ಸಾ. ದಿವಾಕರ
೫೦೪, ಚಿರಂತನ, ೧೩ನೇ ಅಡ್ಡರಸ್ತೆ
ಶ್ರೀರಾಂಪುರ ೨ನೇ ಹಂತ, ಮೈಸೂರು - ೫೭೦ ೦೨೩

# ತೆಂಗಿನಮರ ಮತ್ತು ಬಾವಿ

ನಾ. ಡಿಸೋಜ



ಪೈಲ್ವಾನ್ ಮುನಿಯಪ್ಪನ ಗರಡಿ ಬೀದಿಯಲ್ಲಿ ಐದು ಹಾಗೂ ಆರನೇ ನಂಬರುಗಳ ಮನೆ ಈ ಈರ್ವರದ್ದು. ಫಕೀರಪ್ಪ ಹಾಗೂ ಹನುಮಂತಪ್ಪ ಇಬ್ಬರೂ ಸ್ನೇಹಿತರು. ಇವರ ಸ್ನೇಹಕ್ಕೆ ಕಾರಣ ಅಕ್ಕಪಕ್ಕದ ಮನೆಗಳಲ್ಲಿ ಇರುವುದು ಮಾತ್ರವಲ್ಲ ತಾವು ಮಾಡುವ ಕೆಲಸಗಳಲ್ಲಿ ಈರ್ವರಲ್ಲಿ ಬಹು ಬಗೆಯ ಹೊಂದಾಣಿಕೆ ಇತ್ತು. ಇಬ್ಬರೂ ಬೆಳಗಿನ ಸೂರ್ಯ ಮೇಲೇರುತ್ತಿದ್ದಾನೆ ಅನ್ನುವಾಗ ಕೆಲಸ ಹುಡುಕಿಕೊಂಡು ಹೊರಡುತ್ತಿದ್ದರು. ಫಕೀರಪ್ಪ ಊರಿನ ಮೂಡಣಕ್ಕೆ ಹೊರಟರೆ ಹನುಮಂತಪ್ಪ ಪಡುವಣಕ್ಕೆ. ಹನುಮಂತಪ್ಪನದು ಬರಿಗೈ. ಆದು ಪಂಚೆ ಅಂಚನ್ನು ಹಾರಿಸುತ್ತ ಆತ ನೆಹರುನಗರ, ಶಾಂತಿನಗರ, ವಿನೋಬಾ ನಗರ ಎಂದೆಲ್ಲ ಸುತ್ತಿ ಪುರಸಭೆ ಹತ್ತಿರ ಬಂದಾಗ, ಫಕೀರಣ್ಣ ಕೈಲೊಂದು ಚೀಲ, ಸೊಂಟದಲ್ಲೊಂದು ಕತ್ತಿ, ಬಗಲಲ್ಲಿ ಒಂದು ಹಗ್ಗದ ಸಿಂಬಿ ಇರಿಸಿಕೊಂಡು ಆಜಾದ್ ನಗರ, ಜೋಸೆಫ್ ನಗರ, ಫಾತಿಮಾ ನಗರ, ಅಂಬೇಡ್ಕರ ನಗರ ಎಂದೆಲ್ಲ ಸುತ್ತಿ ಪುರಸಭೆಯ ಬಳಿಯೇ ಹನುಮಂತಣ್ಣನನ್ನ ಭೇಟಿಯಾಗುವವ.

''ಹಾಂ. ಫಕೀರಣ್ಣ... ಮತ್ತೆ...'' ಎಂದು ನಡುವೆ ಎಲ್ಲಿಂದಲೋ ಮಾತನ್ನು ಆರಂಭಿಸುವಂತೆ ಹನುಮಂತ ನುಡಿದರೆ ಫಕೀರಪ್ಪ–

''ಕಾರು ಹನುಮಂತಣ್ಣ...'' ಎಂದು ಇವನೂ ಮಾತಿಗೆ ತೊಡಗುತ್ತಿದ್ದ. ವಿಷಯವಿಷ್ಟೇ –

ಸಾವ್ಕಾರ ಸಾಹೇಬರ ಮನೆ ಹಿಂದಿನ ತೆಂಗಿನ ಮರದಿಂದ ಕಾಯಿ ಕೀಳಬೇಕು...

ರುದ್ರಪ್ಪನವರ ತೆಂಗಿನಬುಡ ಸರಿಪಡಿಸಬೇಕು...

ಶಾಂತಕ್ಕನಿಗೆ ಒಂದಿಷ್ಟು ಎಳನೀರು ಕಿತ್ತುಕೊಡಬೇಕು...

ಬಾಲಾಜಿ ಶೆಟ್ಟರ ತೆಂಗಿನಕಾಯಿ ಸುಲಿದುಕೊಡಬೇಕು...

ಇದೆಲ್ಲ ಹನುಮಂತ ಫಕೀರಣ್ಣನಿಗೆ ತಿಳಿಸುವ ವಿಷಯವಾದರೆ, ಫಕೀರಣ್ಣ ಹನುಮಂತನಿಗೆ ಹೇಳುವ ವಿಷಯ ಇನ್ನೊಂದು.

ಸುಬ್ಬಾಭಟ್ಟರ ಮನೆ ಬಾವಿಗೆ ಕೊಡ ಬಿದ್ದಿದೆ ತೆಗೆದುಕೊಡಬೇಕು...

ದಫೇದಾರ ಡಿಕಾನ್ಸರ ಮನೆ ಬಾವಿಗೆ ಅವರ ಸೈಕಲು ಬಿದ್ದಿದೆ ತೆಗೆದುಕೊಡಬೇಕು...

ಗುಂಡಾಶಾಸ್ತ್ರಿಗಳ ಮನೆ ಬಾವಿಗೆ ಬೆಕ್ಕು ಬಿದ್ದು ಕೆಳಗಿನಿಂದ ಕೂಗುತ್ತಿದೆ. ಅದನ್ನು ಎತ್ತಿ ಹೊರಬಿಡಬೇಕು...

ಊರ ಜನರಿಗೆ ಒಂದು ವಿಷಯ ತಿಳಿದಿತ್ತು.

ತೆಂಗಿನಮರಕ್ಕೆ ಸಂಬಂಧಪಟ್ಟ ವಿಷಯ ಏನೇ ಇರಲಿ ಅದನ್ನು ಫಕೀರಣ್ಣನಿಗೆ ಮಾತ್ರ ಕೇಳಬೇಕೆಂದಿರಲಿಲ್ಲ. ಈ ವಿಷಯವನ್ನು ಹನುಮಂತಣ್ಣನಿಗೆ ಹೇಳಿದರೂ ಆತ ಫಕೀರಣ್ಣನಿಗೆ ತಿಳಿಸುತ್ತಿದ್ದ. ಹಾಗೆಯೇ ಬಾವಿ ಕೆಲಸಕ್ಕೆ ಸಂಬಂಧಪಟ್ಟ ಕೆಲಸ ಏನೇ ಇರಲಿ ಅದನ್ನು ಹನುಮಂತಣ್ಣನಿಗೇ ತಿಳಿಸಬೇಕೆಂದಿರಲಿಲ್ಲ. ಇದನ್ನು ಫಕೀರಣ್ಣನಿಗೆ ಹೇಳಿದರೂ ಆತ ಹನುಮಂತಣ್ಣನಿಗೆ ತಿಳಿಸುತ್ತಿದ್ದ. ಈ ಬಗೆಯ ಒಂದು ಹೊಂದಾಣಿಕೆ ಇವರಿಬ್ಬರಲ್ಲಿ ಇತ್ತು.

ಇಬ್ಬರೂ ಮಾಡುತ್ತಿದ್ದ ವೃತ್ತಿ ಬೇರೆ.

ಫಕೀರಣ್ಣ ಆಕಾಶಕ್ಕೆ ಏರುತ್ತಾನಾದರೆ ಹನುಮಂತಣ್ಣ ಪಾತಾಳಕ್ಕೆ ಇಳಿಯುತ್ತಾನೆ.

ಫಕೀರಣ್ಣ ಸೊಂಟದ ಕತ್ತಿ ಸರಿಪಡಿಸಿಕೊಂಡು ಕಾಲಿಗೆ ಹಗ್ಗದ ಕುಣಿಕೆ ಹಾಕಿಕೊಂಡು ತೆಂಗಿನಮರವನ್ನು ತಬ್ಬಿಹಿಡಿದು ಮೇಲೆ ಹತ್ತಿ ಕಾಯಿ ಉದುರಿಸುತ್ತಾನೆ. ಹೆಡೆ ಕೆಳಗೆ ಬಿದ್ದು ಮನೆಹಂಚು ಒಡೆಯದಿರಲೆಂದು ಹಗ್ಗ ಕಟ್ಟುತ್ತಾನೆ. ಎಳನೀರು ಕೊಯ್ಯುತ್ತಾನೆ. ಗಿಡ ಸೋಸುತ್ತಾನೆ. ಬುಡ ಮಾಡುತ್ತಾನೆ. ಕುರಿಗೊಬ್ಬರ, ಉಪ್ಪು ತಂದು ಹಾಕುತ್ತಾನೆ. ಇವನು ಮರ ಹತ್ತುತ್ತಾನೆಂದರೆ ಕಾಗೆಗಳೆಲ್ಲ ಬೊಬ್ಬೆ ಹೊಡೆಯುತ್ತವೆ. ತೆಂಗಿನ ಮರದ ಮೇಲಿನ ಗೂಡನ್ನು ರಕ್ಷಿಸಲು ಹಾರಿಬರುತ್ತವೆ. ಅವುಗಳನ್ನು ಓಡಿಸುತ್ತಲೇ ಫಕೀರಣ್ಣ ತನ್ನ ಕೆಲಸ ಮಾಡುತ್ತಾನೆ. ಅಷ್ಟೇ ಅಲ್ಲ, ತೆಂಗಿನಕಾಯಿ ಸುಲಿಯುತ್ತಾನೆ. ಮನೆ ಹಿಂದೆ ಮುಂದೆ ತೆಂಗು ನೆಡುತ್ತಾನೆ. ಎಂಟು ಹತ್ತು ಜನರ ನೆರವು ಪಡೆದು ಬೆಳೆದುನಿಂತ ತೆಂಗಿನ ಮರವನ್ನು ಮನೆ ಮುಂಬದಿಯಿಂದ ಹಿಂಬದಿಗೆ ಸಾಗಿಸಿ ಅಲ್ಲಿ ನೆಡುತ್ತಾನೆ. ತೆಂಗಿಗೆ ನುಸಿರೋಗ ಬಂದರೆ ಅದಕ್ಕೂ ಔಷಧಿ ಮಾಡುತ್ತಾನೆ.

ಆ ಕಡೆ ಹನುಮಂತಣ್ಣನ ಕೆಲಸದ ವಿಧಾನ ಬೇರೆ.

ಫಕೀರಣ್ಣನಿಗೆ ಊರಿನಲ್ಲಿರುವ ಅಷ್ಟೂ ತೆಂಗಿನ ಮರಗಳ ಪರಿಚಯವಿದ್ದರೆ ಈತನಿಗೆ ಊರಿನ ಎಲ್ಲ ಬಾವಿಗಳ ಪರಿಚಯವಿದೆ.

ಪ್ರತಿಬಾವಿಯ ನೀರಿನ ಆಳ, ನೀರಿನ ಸೆಲೆ ಮತ್ತು ನೀರಿನ ರುಚಿ, ಅದು ತಣ್ಣಗೋ ಬೆಚ್ಚಗೋ, ಎಲ್ಲ ಇವನಿಗೆ ಗೊತ್ತು. ಬಾವಿಯ ಮಣ್ಣಿನ ಗುಣ, ಅದು ಹಸಿ ಮಣ್ಣೋ ಗಟ್ಟಿ ಮಣ್ಣೋ ಅವನು ಬಲ್ಲ. ಬಾವಿಯಲ್ಲಿ ನೀರಹಾವು, ಆಮೆ, ಮೀನು ಇರುವುದು ಅವನಿಗೆ ಗೊತ್ತುಂಟು. ಬಾವಿಗೆ ಎಷ್ಟು ವರ್ಷ ಆಗಿದೆ ಆತ ಹೇಳಬಲ್ಲ. ಏಳೆಂಟು ಬಾವಿಗಳ ಆಧಾರದ ಮೇಲೆ ಅಂತರಜಲ ಹೇಗೆ ಹರಿಯುತ್ತದೆ ಎಂಬುದನ್ನು ಆತ ಹೇಳುತ್ತಾನೆ.

ಎಲ್ಲಿ ಬಾವಿ ತೋಡಿದರೆ ಜಲ ಸಿಗುತ್ತದೆ ಎಂಬುದನ್ನೂ ಆತ ಬಲ್ಲ.

ಬಾವಿ ತೆಗಿಸುವ ಕೆಲಸವನ್ನೂ ಹನುಮಂತಣ್ಣ ಮಾಡುತ್ತಾನೆ.

ಇವನ ನಿತ್ಯದ ಉದ್ಯೋಗವೆಂದರೆ ಬಾವಿಯಲ್ಲಿ ಬಿದ್ದ ಪಾತ್ರೆ, ಕೊಡಪಾನ ಇತ್ಯಾದಿಗಳನ್ನು ತೆಗೆಯುವುದು.

ಹೀಗೆಂದೇ ಊರಿನ ಬೀದಿ ಬೀದಿಗಳಲ್ಲಿ ಈತ ಸುಮ್ಮನೆ ಹೋಗುವುದಿಲ್ಲ.

'ಬಾವಿಲೀನಾರ ಕೊಡಪಾನ ಬಿದ್ದೈತೇನ್ರಿ' ಎಂದು ಕೂಗುತ್ತ ಈತ ರಸ್ತೆಗಳ ಮೇಲೆ ಹೋಗುತ್ತಾನೆ. ಯಾರಾದರೂ ಕರೆದರೆ ಬಾವಿಯ ಬಳಿ ಹೋಗುತ್ತಾನೆ. ಬಿದ್ದುದು ಏನು ಎಂದು ಕೇಳುತ್ತಾನೆ. ಶರಟು, ಪಂಚೆ ಕಳಚಿ

ಬಾವಿಕಟ್ಟೆಯ ಮೇಲೆ ಇರಿಸುತ್ತಾನೆ. ಕಾಚ ಸರಿಪಡಿಸಿಕೊಂಡು ಹಗ್ಗ ಹಿಡಿದು ಬಾವಿಗೆ ಇಳಿಯುತ್ತಾನೆ. ಕೆಳಗೆ ನೀರಿನಲ್ಲಿ ಮಾಯವಾಗಿ ಕೆಲ ನಿಮಿಷಗಳಲ್ಲಿ ಬಿದ್ದ ವಸ್ತುವನ್ನು ಹಿಡಿದು ಎದ್ದುಬರುತ್ತಾನೆ.

ಹಿಂದೆಲ್ಲ ಬಾವಿಗೆ ಬಿದ್ದ ಕೊಡಪಾನ ತೆಗೆಯಲು ಜನ ಪಾತಾಳಗರುಡವನ್ನು ತರುತ್ತಿದ್ದರು. ಅದು ತಲೆನೋವಿನ ಕೆಲಸ. ಹುಡುಕಾಡಬೇಕು. ನೀರು ಜಾಲಾಡಿಸಬೇಕು. ಹನುಮಂತಣ್ಣ ಬಂದಮೇಲೆ ಇದೊಂದು ನಿಮಿಷಗಳ ಕೆಲಸ. ಹನುಮಂತಣ್ಣ ನೀರಿಗೆ ಇಳಿದ ಎಂದರೆ ಕೊಡಪಾನ ಸಿಕ್ಕಿತೆಂದೇ ಅರ್ಥ. ಊರತುಂಬಾ ಬಾವಿಗಳಿದ್ದುದರಿಂದ ಹನುಮಂತಣ್ಣನಿಗೆ ಕೈ ತುಂಬ ಕೆಲಸ.

ಯಾರೋ ಬಾವಿಕಟ್ಟೆಯ ಮೇಲೆ ತೊಳೆಯಲೆಂದು ಇರಿಸಿದ ಬೆಳ್ಳಿತಟ್ಟೆಯನ್ನು ಬಾವಿಗೆ ಬೀಳಿಸಿದರು. ಮತ್ತೆ ಯಾರೋ ಬಾವಿಗೆ ಹಾರಿಕೊಂಡರು. ಆಗಲೂ ಈತ ಬೇಕು ಜನರಿಗೆ.

ಹೀಗೆ ಊರಿನಲ್ಲಿ ಒಬ್ಬ ತೆಂಗಿನ ಮರ ಏರುವವ, ಮತ್ತೊಬ್ಬ ಬಾವಿಗೆ ಇಳಿಯುವವ. ಈ ಇಬ್ಬರನ್ನು ಊರ ಜನ ಒಟ್ಟಿಗೇನೇ ಗುರುತಿಸುತ್ತಿದ್ದರು. ಇವರು ಬೇರೆ ಬೇರೆ ಎಂದು ಜನ ತಿಳಿಯಲೇ ಇಲ್ಲ.

ಒಮ್ಮೆ ಊರಿನಲ್ಲಿ ಗಾಳಿಪಟ ಹಾರಿಸುವ ಸ್ಪರ್ಧೆ. ಊರಿನ ಗಾಂಧಿ ಮೈದಾನದಲ್ಲಿ ಗಾಳಿಪಟಗಳ ಸಮೇತ ಸಾವಿರಾರು ಜನ ಸೇರಿದರು. ಗಾಳಿಪಟಗಳು ಕೂಡ ವೈವಿಧ್ಯಮಯ. ಉದ್ದ-ಅಗಲ, ಗುಂಡಗೆ, ತ್ರಿಕೋಣಾಕಾರ, ಕೂಗುವ ಪಟ, ಹಾಡುವ ಪಟ ಹೀಗೆ ವೈವಿಧ್ಯಮಯ ಪಟಗಳು. ನೂರಾರು ಪಟಗಳು ಆಕಾಶಕ್ಕೇರಿ ವಿವಿಧ ವಿನ್ಯಾಸಗಳಲ್ಲಿ ಹಾರತೊಡಗಿದ್ದವು. ಪಟ ಹಾರಿಸುವುದರಲ್ಲಿ ಸ್ಫೂರ್ತಿಯೂ ಇತ್ತು.

ಸಿರಿವಂತ ಸೀನಪ್ಪ ಶೆಟ್ಟರು ತಾವೇ ಮುಂದಾಗಿ ನಿಂತು ಭಾರೀ ಪಟವೊಂದನ್ನು ಸಿದ್ಧಪಡಿಸಿದರು. ಹೆಡೆಯಾಕಾರದ ಪಟ. ಅಷ್ಟೇ ಉದ್ದವಾದ ಬಾಲ. ಪಟದ ತುಂಬ ಅಲಂಕಾರ. ಪಟ ಬೇರೆಲ್ಲ ಪಟಗಳಿಗಿಂತ ಮೇಲೆ ಹೋಯಿತು. ಗಾಳಿಯನ್ನು ಕೆಳಗೆ ತಳ್ಳಿ ಮೇಲೆ ಮೇಲೆ ಹಾರಿತು. ಹೆಡೆ ಎತ್ತಿ ಅದು ಆಕಾಶವನ್ನೇ ನುಂಗುವಂತೆ ಹೋಗುತ್ತಿರುವ ಪರಿ ನೋಡಿ ಜನ ತಲೆದೂಗಿದರು.

ನಡುವೆ ಏನಾಯಿತೋ, ಪಟದ ದಾರ ತುಂಡಾಯಿತು. ಪಟ ಆಧಾರ ಕಳೆದುಕೊಂಡು ಬಾವುಟದಂತೆ ಗಾಳಿ ಬೀಸಿದತ್ತ ತೇಲಿಹೋಗತೊಡಗಿತು. ಅದರ ಹೆಡೆ ಬಾಲ ಒಂದಾಗಿ ಪಟ ಉರುಳಿತು. ಗುಡಿ, ಮಸೀದಿ, ಚರ್ಚು, ಹೋಟೆಲು, ಕಟ್ಟಡ ಎಂದೆಲ್ಲ ಎಲ್ಲೆಲ್ಲಿಗೋ ಪಟ ತೇಲಿ ಹೋಗುತ್ತಿರಲು ಜನ ಅದರ ಹಿಂದೆ ಓಡತೊಡಗಿದರು.

ಹೋಯಿತು ಹೋಯಿತು ಅನ್ನುವಾಗ ಪಟ ಪಂಡಿತರ ಮನೆ ಹಿಂದಿನ ತೆಂಗಿನ ಮರಗಳತ್ತ ಮೈಚಾಚಿ ನಿಧಾನವಾಗಿ ಹೋಗಿ ಒಂದು ತೆಂಗಿನ ಮರದಲ್ಲಿ ಹೆಡೆ ಮುದುಡಿಕೊಂಡು ಕುಳಿತುಬಿಟ್ಟಿತು. ಅದರ ಬಾಲ ಅತ್ತಿತ್ತ ಹಾರಾಡಿ ಅದೂ ಗರಿಗಳ ನಡುವೆ ಸಿಲುಕಿ ಸ್ತಬ್ಧವಾಯಿತು.

ಐನೂರು ಆರುನೂರು ರೂಪಾಯಿ ಖರ್ಚು ಮಾಡಿ ಸಿದ್ಧಪಡಿಸಿದ ಪಟಕ್ಕೆ ಈ ಗತಿ ಬಂತಲ್ಲ ಎಂದು ಶೆಟ್ಟರು ಪೇಚಾಡಿಕೊಂಡರು. ತಮ್ಮ ಪಟಕ್ಕೆ ಬಹುಮಾನ ಬರುತ್ತದೆ ಎಂದು ಅವರು ನಿರೀಕ್ಷಿಸಿದ್ದರು. ಆದರೆ ಹೀಗಾಯಿತೇ ?

ಈಗಲೂ ಕಾಲ ಮಿಂಚಿಲ್ಲ, ಪಟವನ್ನು ತೆಂಗಿನಮರದಿಂದ ಬಿಡಿಸಿತಂದು ಮತ್ತೆ ಹಾರಿಸಿದರೆ ಬಹುಮಾನ ಸಿಗುತ್ತದೆ.

ಆದರೆ ತೆಂಗಿನಮರ ಏರಿ ಕುಳಿತಿರುವ ಪಟವನ್ನು ಇಳಿಸುವುದು ಹೇಗೆ ?

ಆಗಲೇ ಹನುಮಂತನ ಕಿವಿಗೆ ಬಿದ್ದಿತು.

ಹನುಮಂತ ತನ್ನ ಪಾಡಿಗೆ ತಾನು –

''ಬಾವಿಲೇನಾರ ಕೊಡಪಾನ ಬಿದ್ದೈತೇನ್ರಿ'' ಎಂದು ಕೂಗುತ್ತ ಸಾಗಿದ್ದ.

''ಕರೀ ಆ ಹನುಮಂತನ್ನ'' ಎಂದರು ಶೆಟ್ಟರು.

ಹನುಮಂತ ಪಂಡಿತರ ತೋಟದೊಳಗೆ ಕಾಲಿಟ್ಟು ಬಾವಿಯತ್ತ ನೋಡುತ್ತಿರಲು ಶೆಟ್ಟರು –

''...ಬಾವಿ ಕಡೆ ನೋಡಬೇಡ... ತೆಂಗಿನ ಮರದ ಕಡೆ ನೋಡು'' ಎಂದು ಗದರಿಸಿದರು.

ಹನುಮಂತಣ್ಣನಿಗೆ ಅರ್ಥವಾಯಿತು.

''ಬಂದೆ ಬಂದೆ'' ಎಂದು ಹೇಳುತ್ತ ಆತ ಅವಸರದಲ್ಲಿ ಕಿರಸ್ತಾನದ ಜಾಕಿಕೋಸ್ತನ ಮನೆಯತ್ತ ಓಡಿದ. ಅಲ್ಲಿ ಫಕೀರಣ್ಣ ಕೋಸ್ತನ ತೆಂಗಿನ ಮರಗಳಿಂದ ಕಾಯಿ ಉದುರಿಸುತ್ತಿದ್ದ.

ಫಕೀರಣ್ಣ ತೆಂಗಿನಮರ ಏರಿ ನಿಧಾನವಾಗಿ ಪಟ

# ಬದುಕು


ಹೇಮಾ ವೆಂಕಟ್, ಸುಳ್ಯ
ಹವ್ಯಾಸಿ ಪತ್ರಕರ್ತೆ, ಸುಳ್ಯ ಅಂಚೆ
ದಕ್ಷಿಣ ಕನ್ನಡ - ೫೭೪ ೨೩೯




ಬಯಲ ಚಿಟ್ಟೆಯಂತೆ ಬಂದೆ.
ಬರಿದೆ ಕನಸು ಹೊತ್ತು ತಂದೆ.
ಅದನೆ ಕಂಡೆ,
ಅದನೆ ಉಂಡೆ.
ನಾನೇ ಧನ್ಯ, ಎಂದುಕೊಂಡೆ.

ಬಯಸಿ ಬಂದ ಬದುಕೇ ಅಲ್ಲ,
ಬರಲಿ ಎಂದು ಬಯಸಲಿಲ್ಲ,
ಬಂದ ಹಾಗೆ ಬದುಕಿದೆವಲ್ಲ
ಇಂದು ಯಾಕೆ ಹೀಗೆಯೆಲ್ಲ ?!

ಬೊಗಸೆತುಂಬ ಬಂದ ಸುಖವು
ಕನಸಿನಂತೆ ಕಳೆಯಿತಲ್ಲ,
ನಿಂತ ನೆಲವೆ ಅದುರುತಿರಲು
ದೃಢದ ಮಾತೆಲ್ಲಿ ಬಂತು.

ಎಷ್ಟು ಸುಂದರ ನೆನಪಿನಂದರ
ನನಗೆ ನೀನು, ನಿನಗೆ ನಾನು.
ಹಂಚಿಕೊಂಡ ಪ್ರೀತಿ ಮಾತು.
ಮಂಜಿನಂತೆ ಕರಗಿತಲ್ಲ.

ನಿನ್ನ ಹೆಜ್ಜೆ ನನ್ನ ಹೆಜ್ಜೆ.
ಎಷ್ಟು ಗಟ್ಟಿಯಾಗಿಟ್ಟೆವಲ್ಲ.
ತಿರುಗಿ ನೋಡದೆ ಸವೆದ ಹಾದಿ
ಬರಿಯ ಭ್ರಮೆಯಲ್ಲಿ ಕಳೆದೆವಲ್ಲ.

ಹೀಗೆ ಕೊಟ್ಟು, ಹಾಗೆ ಕಸಿವ
ವಿಧಿಯ ಲೀಲೆ ಬರಿಯ ಮಾಯೆ.
ಎಷ್ಟು ಅಪರಿಚಿತ ಬದುಕಿದು.
ಎಂತ ನಿಗೂಢಗಳ ಗೂಡಿದು.

ಬಿಡಿಸಿದ. ಹೆಡೆ ಬಾಲ ಸುರಕ್ಷಿತವಾಗಿತ್ತು. ದಾರ ತೆಂಗಿನಮರಕ್ಕೆ ಸುತ್ತಿಕೊಂಡಿತ್ತು. ಅದನ್ನೆತ್ತಿ ಕತ್ತರಿಸಿ ಪಟವನ್ನು ಹಿಡಿದುಕೊಂಡೇ ಫಕೀರಣ್ಣ ಕೆಳಗೆ ಬಂದ.

''ಇಕೊಳ್ಳಿ ಪಟ.''

ಅದನ್ನು ಶೆಟ್ಟರ ಮಕ್ಕಳ ಕೈಗೆ ನೀಡಿದ.

ಶೆಟ್ಟರು ಹತ್ತರ ನೋಟನ್ನು ಫಕೀರಣ್ಣನತ್ತ ಚಾಚಿದರು.

''ತೊಕೋ'' ಎಂದು ಮತ್ತೊಂದು ಹತ್ತನ್ನು ಹನುಮಂತಣ್ಣನಿಗೆ ಕೊಟ್ಟರು.

ಅವತ್ತಿನ ಪಟ ಹಾರಿಸುವ ಸ್ಪರ್ಧೆಯಲ್ಲಿ ಶೆಟ್ಟರಿಗೆ ೨ನೇ ಬಹುಮಾನ ಬಂದಿತು. ತಮಗೇ ಬಹುಮಾನ ಬಂದಂತೆ ಫಕೀರಣ್ಣ ಹನುಮಂತಣ್ಣ ಸಂಭ್ರಮಿಸಿದರು.

ಇವರಿಬ್ಬರ ಸ್ನೇಹದಲ್ಲಿ ಇಂತಹ ಪ್ರಸಂಗಗಳು ಹಲವು.

ಅವರಿಬ್ಬರೂ ಹತ್ತಿರ ಹತ್ತಿರವಾಗಲು ಈ ಪ್ರಸಂಗಗಳೂ ಕಾರಣ.

* * *

ಪೈಲ್ವಾನ್ ಮುನಿಯಪ್ಪನ ಗರಡಿ ಬೀದಿಯಲ್ಲಿ ಐದು ಹಾಗೂ ಆರನೇ ನಂಬರುಗಳ ಮನೆ ಈ ಈರ್ವರದ್ದು.

ಮನೆ ಅಂದರೆ ಒಂದೊಂದು ಕೋಣೆ. ಮುಂಬದಿಯಲ್ಲಿಯೇ ಬಚ್ಚಲು, ಕಕ್ಕಸು ಎಲ್ಲ. ಐದನೇ ನಂಬರಿನ ಮನೆಯಲ್ಲಿ ಫಕೀರಣ್ಣ ಒಬ್ಬಂಟಿ. ಆರನೇ ನಂಬರಿನ ಮನೆಯಲ್ಲಿ ಹನುಮಂತಣ್ಣ ಒಬ್ಬಂಟಿ. ಇಬ್ಬರೂ ಹಳ್ಳಿ ಬಿಟ್ಟು ಬಂದವರು. ತಾಯಿ, ತಂದೆ, ಬಂಧು ಬಳಗ ಅದೆಲ್ಲೋ ಹಳ್ಳಿಯಲ್ಲಿದ್ದಾರೆ ಎಂದು ಇಬ್ಬರೂ ಹೇಳುತ್ತಾರೆ. ಅವರಾರೂ ಈ ಕಡೆ ಬಂದಿಲ್ಲ. ಇವರೂ ಆ ಕಡೆ ಹೋಗುವುದಿಲ್ಲ.

''ಮದುವೆಯಾಗು ಫಕೀರ.''

''ಮದುವೆಯಾಗು ಹನುಮಂತ'' ಎಂದು ಹೇಳುವವರು ಯಾರೂ ಹತ್ತಿರದಲ್ಲಿ ಇಲ್ಲವಾದ್ದರಿಂದ ಇವರು ಮದುವೆಯಾಗಿರಲಿಲ್ಲವೇನೋ. ಅಂತೂ ಒಂಟಿಯಾಗಿದ್ದಾರೆ.

ಹೀಗೆಂದು ಇವರ ದುಡಿಮೆಗೇನೂ ಕಡಿಮೆ ಇಲ್ಲ.

ಫಕೀರ ಮರ ಹತ್ತಿದರೆ ಇಷ್ಟು, ಸೋಸಿದರೆ ಇಷ್ಟು, ಬುಡ ಮಾಡಿದರೆ ಇಷ್ಟು ಎಂದು ದರ ನಿಗದಿಪಡಿಸಿದ್ದಾಗಿದೆ. ಒಂದು ತೆಂಗಿನ ಮರ ಹತ್ತಿದರೆ ತಿಂಗಳ ಕೊನೆಗೆ ಒಂದು ತೆಂಗಿನಕಾಯಿ ಅವನಿಗೆ ಕೊಡಬೇಕು. ಅವನ ಕೈಲಿರುವ ಚೀಲದಲ್ಲಿ ಈ ತೆಂಗಿನಕಾಯಿಗಳು ಯಾವಾಗಲೂ ಇರುತ್ತವೆ. ಇವನ್ನು ಆತ ಮಾರುತ್ತಾನೆ ಕೂಡ.

ಹನುಮಂತಣ್ಣನದೂ ಇದೇ ಬಗೆಯ ವ್ಯವಹಾರ. ಬಾವಿಗಿಳಿದರೆ ಇಷ್ಟು. ಬಾವಿ ಕಿಲೀನ ಮಾಡಿದರೆ ಇಷ್ಟು. ಬಾವಿಯ ಹೂಳು ಎತ್ತಿದರೆ ಇಷ್ಟು ಎಂದೆಲ್ಲ ಅವ ದರ ನಿಗದಿ ಮಾಡಿದ್ದ. ಊರಿಗೆ ನಲ್ಲಿ ಬಾರದಿರುವುದರಿಂದ ಬಾವಿಗಳು ಉಳಿದಿದ್ದವು. ಹನುಮಂತಣ್ಣನಿಗೂ ಒಳ್ಳೆಯ ಆದಾಯವಿತ್ತು.

ಇಬ್ಬರಿಗೂ ಒಂದೊಂದು ಸಂಸಾರ ನಡೆಸಿಕೊಂಡು ಹೋಗುವಷ್ಟು ಶಕ್ತಿ ಇತ್ತು. ಆದರೂ ಇಬ್ಬರೂ ಮದುವೆಯಾಗಿರಲಿಲ್ಲ. ತಾವು ಮದುವೆಯಾಗಬೇಕು ಎಂಬ ಆಸೆ ಮಾತ್ರ ಇತ್ತೀಚೆಗೆ ಇಬ್ಬರ ಮನಸ್ಸಿನಲ್ಲೂ ಚಿಗುರಿಕೊಂಡಿತು.

ಇದಕ್ಕೆ ಕಾರಣ ಕಲ್ಯಾಣಿ.

* * *

ಪೈಲ್ವಾನ ಮುನಿಯಪ್ಪನ ಗರಡಿ ಬೀದಿಯ ಕೊನೆಯಲ್ಲಿ




ಸುಬ್ಬಮ್ಮನದೊಂದು ಗೂಡಂಗಡಿ ಇತ್ತು. ಬೀಡಿ, ಸಿಗರೇಟು, ಗುಟ್ಕ, ಪೆಪ್ಪರಮಿಂಟು, ನಿರೋಧು, ಹುರಿಗಡಲೆ, ಲಾಲಿಪಪ್ಪು, ಎಲೆ ಅಡಿಕೆ ಎಂದೆಲ್ಲ ಮಾರಾಟಕ್ಕೆ ಇರಿಸಿದ್ದಳು ಸುಬ್ಬಮ್ಮ. ಅವಳಿಗೆ ಭಾರೀ ವ್ಯಾಪಾರವೇನೂ ಇರಲಿಲ್ಲ. ಅವಳು ಬಡ್ಡಿಗೆ ಹಣ ನೀಡುತ್ತಿದ್ದುದರಿಂದ ಈ ಲೇವಾದೇವಿ ವ್ಯವಹಾರಕ್ಕೆ ಅಂಗಡಿ ಒಂದು ತಾಣವಾಗಿತ್ತು. ಅವಳ ಸಂಸಾರ ಕೂಡ ಸಾಗುತ್ತಿತ್ತು. ಅವಳ ಗಂಡ ಒಂದು ಕಾಲನ್ನು ಅಪಘಾತ ಒಂದರಲ್ಲಿ ಕಳೆದುಕೊಂಡು ಮನೆಯಲ್ಲಿ ಕೂತಿರುತ್ತಿದ್ದ. ಸುಬ್ಬಮ್ಮ ಸಂಸಾರ ತೂಗಿಸಿಕೊಂಡು ಹೋಗುತ್ತಿದ್ದಳು.

ಗರಡಿ ಬೀದಿಯ ಹಲವರಿಗೆ ಈ ಗೂಡಂಗಡಿ ಒಂದು ಹರಟೆಕಟ್ಟೆ. ಕೆಲವರು ನಿತ್ಯ ಇಲ್ಲಿ ಬಂದು ಕುಳಿತು ಅದು ಇದು ಮಾತನಾಡುವುದು ಒಂದು ಅಭ್ಯಾಸ ಮಾಡಿಕೊಂಡಿದ್ದರು.

ಸುಬ್ಬಮ್ಮನ ಅಕ್ಕನ ಮಗಳು ಕಲ್ಯಾಣಿ ಅಂಗಡಿಗೆ ಬಂದು ಕುಳಿತುಕೊಳ್ಳಲಾರಂಭಿಸಿದ ನಂತರ ಅಂಗಡಿ ವ್ಯಾಪಾರವೂ ಅಧಿಕವಾಯಿತು. ಹರಟೆಗೆಂದು ಬರುವವರ ಸಂಖ್ಯೆಯಲ್ಲೂ ಹೆಚ್ಚಳವಾಯಿತು.

ಚೆನ್ನರಾಯಪಟ್ಟಣದಲ್ಲಿ ಯಾವುದೋ ಬಾನಗಡಿಯಲ್ಲಿ ಸಿಲುಕಿದ ಕಲ್ಯಾಣಿಯನ್ನು ಅವಳ ಅಪ್ಪ ಚೆನ್ನಾಗಿ ತದುಕಿ –

''ನೀನು ಮನೇಲಿ ಇರಬೇಡ... ತೊಲಗಿ ಹೋಗು'' ಎಂದು ಕಿರುಚಾಡಿದಾಗ ಸುಬ್ಬಮ್ಮ ಅವಳನ್ನು ತನ್ನ ಜೊತೆ ಕರೆತಂದಿದ್ದಳು.

ನಾಲ್ಕುದಿನ ಮನೆಯಲ್ಲಿ ಕುಳಿತಿದ್ದಳು ಕಲ್ಯಾಣಿ.

''ಯೋ ಬ್ಯಾಸರ ಮನೆಯಾಗೆ'' ಎಂದು ಕಲ್ಯಾಣಿ ಗೊಣಗಿದಾಗ ಸುಬ್ಬಮ್ಮ – ''ಬಾ, ಅಂಗಡೀನಲ್ಲಿ ಕುಂತಿರು'' ಎಂದು ಅವಳನ್ನು ಅಂಗಡಿಗೆ ಕರೆತಂದಿದ್ದಳು.

ಕಲ್ಯಾಣಿ ಅಂಗಡಿಗೆ ಬಂದದ್ದರಿಂದ ಸುಬ್ಬಮ್ಮನಿಗೆ ಸಾಲ ವಸೂಲಿಗೆ ಅನುಕೂಲವಾಯಿತು. ಅಂಗಡಿಯಲ್ಲೂ ವ್ಯಾಪಾರ ಹೆಚ್ಚಿತು. ಎಂಟು ದಿನಗಳಲ್ಲಿ ಕಲ್ಯಾಣಿ ವ್ಯಾಪಾರದ ಎಲ್ಲ ಗುಟ್ಟನ್ನೂ ಹಸ್ತಗತ ಮಾಡಿಕೊಂಡಳು.

ಗರಡಿ ಬೀದಿಯ ಕೊನೆಯಲ್ಲಿದ್ದ ಈ ಅಂಗಡಿಗೆ ಫಕೀರಣ್ಣ, ಹನುಮಂತಣ್ಣ ಕಾಯಂ ಗಿರಾಕಿಗಳೇನೂ ಆಗಿರಲಿಲ್ಲ. ಯಾವಾಗಲೋ ಒಂದು ಸಾರಿ ಬೆಂಕಿಪೊಟ್ಟಣ ಕೊಳ್ಳಲು, ಎಲೆ ಅಡಿಕೆ ಕೊಳ್ಳಲು ಅವರು ಬರುತ್ತಿದ್ದರು.

ಮೊನ್ನೆ ಮೊನ್ನೆ ಫಕೀರಣ್ಣ ಒಲೆಹಚ್ಚಲು ಬೆಂಕಿಪೊಟ್ಟಣ ಕೊಳ್ಳಲು ಗೂಡಂಗಡಿಗೆ ಹೋದಾಗ ಮುದುಕಿ ಸುಬ್ಬಮ್ಮನ ಜಾಗದಲ್ಲಿ ಹುಡುಗಿ ಕಲ್ಯಾಣಿಯನ್ನು ಕಂಡು ಅವಳ ದುಂಡುಮುಖ ದುಂಡು ಮೈಗೆ ತಕ್ಷಣ ಆಕರ್ಷಿತನಾದ ಆತ –

''ಎಲ್ಲಿ ಸುಬ್ಬಮ್ಮ ?'' ಎಂದೇ ಮಾತಿಗೆ ತೊಡಗಿದ.

''ಮನೆಯಾಗವ್ರೆ...'' ಎಂದಳು ಕಲ್ಯಾಣಿ ಸಲಿಗೆಯಿಂದಲೇ.

''ನಿನಗೆ ಏನಾಗಬೇಕು ಅವರು ?''

''ಚಿಕ್ಕಮ್ಮ''

''ಬೆಂಕಿಪೊಟ್ಟಣ ಕೊಡು.''

ಬೆಂಕಿಪೊಟ್ಟಣ ಕೊಂಡುತಂದ.

ಮತ್ತೆ ಮತ್ತೆ ಅಲ್ಲಿಗೆ ಹೋಗಬೇಕೆನಿಸಿತು.

ಏನಾದರೊಂದು ನೆಪಮಾಡಿಕೊಂಡು ಹೋಗತೊಡಗಿದ.

* * *

ಹನುಮಂತಣ್ಣ ಅಪರೂಪಕ್ಕೆ ಎಲೆ ಅಡಕೆ ಹಾಕುವುದಿತ್ತು. ಹಿಂದೂ ಮಿಲಿಟರಿ ಹೋಟೆಲಿನಲ್ಲಿ ಊಟ ಮಾಡಿ ಬಂದ ದಿವಸ ಅವನು ಒಂದು ಎಲೆ ಅಡಿಕೆ ಹಾಕಬೇಕು.

ಹೋಟೆಲಿನಿಂದ ತಿರುಗಿ ಬರುವಾಗ ಗೂಡಂಗಡಿಯತ್ತ ಹೆಜ್ಜೆಹಾಕಿದರೆ ಅಲ್ಲಿ ಸುಬ್ಬಮ್ಮ ಇಲ್ಲ. ಓರ್ವ ಚೆಂದದ ಹುಡುಗಿ ಕೂತಿದ್ದಾಳೆ.

''ಎಲ್ಲಿ ಸುಬ್ಬಮ್ಮ ?''

''ಮನೆಯಾಗವ್ರೆ''

''ನಿನಗೆ ಏನಾಗಬೇಕು ಅವ್ರು ?''

''ಚಿಕ್ಕಮ್ಮ''

ಸಲಿಗೆಯ ಉತ್ತರ ಕೊಟ್ಟಳು ಕಲ್ಯಾಣಿ.

''ಒಂದ್ ಅಡಕೆ ಎರಡೆಲೆ ಸುಣ್ಣ ಕೊಡು...''

ಕಳಕಳಿಯಾಗಿದ್ದ ಕೆಂಪು ಮುಖವನ್ನು ಕೆಂಪು ಮೈಯನ್ನು ನೋಡಿಯೇ ನೋಡಿದ ಹನುಮಂತಣ್ಣ.

ಎಲೆ ಅಡಿಕೆ ಜಗಿಯುತ್ತ ಅಲ್ಲಿಂದ ಬಂದ.

ಮತ್ತೆ ಮತ್ತೆ ಅಲ್ಲಿಗೆ ಹೋಗಬೇಕೆನಿಸಿತು.

ಮಿಲಿಟರಿ ಹೋಟೆಲಿಗೆ ಹೋಗದ ದಿನವೂ ಗೂಡಂಗಡಿಗೆ ಹೋಗಿಬರತೊಡಗಿದ ಹನುಮಂತಣ್ಣ.

* * *

ಕಾಲಿಗೆ ಹಗ್ಗದ ಕುಣಿಕೆ ಹಾಕಿಕೊಂಡು ತೆಂಗಿನ ಮರವನ್ನು ತಬ್ಬಿಹಿಡಿದು ಪಟಪಟನೆ ಮೇಲೆ ಹತ್ತುವಾಗಲೂ ಫಕೀರಣ್ಣನಿಗೆ ಕಲ್ಯಾಣಿಯದೇ ನೆನಪು.

''ನೋಡಿದ್ಯ ಎಷ್ಟು ಮಜಬೂತಾಗವ್ಳೆ'' ಎಂದಿದ್ದ ಹನುಮಂತಣ್ಣ.

ಅದು ಹೌದು. ಕಲ್ಯಾಣಿ ಮಜಬೂತೆಂದರೆ ಮಜಬೂತು.

ಎರಡಾಳು ಎತ್ತರದ ಹೊಸತಳಿ ತೆಂಗಿನ ಮರದ ಹಾಗೆ ಬೆಳೆದುನಿಂತಿದ್ದಾಳೆ. ಅಪ್ಪಿದರೆ ಕೈತುಂಬ ಮೈತುಂಬ ಸಿಗುತ್ತಾಳೆ.

ಈಗೀಗ –

''ಫಕೀರಣ್ಣ... ಫಕೀರಣ್ಣ'' ಎಂದು ಬಾಯಿತುಂಬ ಮಾತನಾಡುತ್ತಾಳೆ.

ಅವಳ ಅಂಗಡಿ ಮುಂದಿನ ತೆಂಗಿನ ಮರವನ್ನು ತಾನು

ಲೀಲಾಜಾಲವಾಗಿ ಹತ್ತಿದ್ದನ್ನು ನೋಡಿ –

''ಹಯ್ಯಪ್ಪ... ಅದೆಂಗೆ ಅಷ್ಟಮ್ಯಾಲೆ ಹತತೀಯ ಫಕೀರಣ್ಣ, ಹೆದರಿಕೆ ಆಗಾಕಿಲ್ವ ?'' ಎಂದು ಕೇಳಿದ್ದಳು. ಮರ ಏರಿ ಮರದ ಮೇಲಿನ ತೆಂಗಿನಕಾಯಿ, ಎಳನೀರು, ಹೆಡೆ ಎಲ್ಲ ಕೀಳುವುದನ್ನು ನೋಡಿ – ''ಮರದ ಮ್ಯಾಲ್ ಕೂತು ಅಷ್ಟೆಲ್ಲ ಕೆಲಸ ಮಾಡತೀರ ?'' ಎಂದು ಅಚ್ಚರಿ ವ್ಯಕ್ತಪಡಿಸಿದ್ದಳು.

ಅವಳ ಹಾವಭಾವ ಮಾತು ಚಹರೆಯಲ್ಲಿ ತನ್ನ ಬಗ್ಗೆ ಏನೋ ಪ್ರೀತಿ ಮಮತೆ ಕಂಡುಬಂದಂತಾಗಿ ಫಕೀರಣ್ಣ ಗಾಳಿ ತುಂಬಿದ ಫುಗ್ಗೆಯಾದ. ತೆಂಗಿನಮರದ ಸಿಂಗಾರವಾದ.

ಕಲ್ಯಾಣಿಯಂತಹ ಹುಡುಗಿ ಸಿಗುವುದಾದರೆ ಏಕೆ ಮದುವೆಯಾಗಬಾರದು ಅಂದುಕೊಂಡ.

''ಕಲ್ಯಾಣಿ ಒಂದು ಬೆಂಕಿಪೊಟ್ಣ ಕೊಡು...'' ಎಂದು ಹೋಗಿ ಕಲ್ಯಾಣಿ ಎದಿರು ನಿಂತ.

ಮನೆಯಲ್ಲಿ ಬೆಂಕಿಪೊಟ್ಟಣಗಳ ರಾಶಿ ಬಿದ್ದಿತು. ಇವನ ಮನಸ್ಸಿನಲ್ಲಿ ಕನಸುಗಳ ಗೋಪುರ ಎದ್ದಿತು.

* * *

ಹೀಗೆಯೇ ಕನಸು ಕಂಡ ಬಾವಿ ಹನುಮಂತ. ಗೂಡಂಗಡಿ ಎದುರೇ ವಿರೂಪಾಕ್ಷಯ್ಯನವರ ಮನೆ. ಮನೆಯ ಮುಂದೆ ಒಂದು ಬಾವಿ.

ಅವತ್ತು ವಿರೂಪಾಕ್ಷಯ್ಯನವರ ಸೊಸೆ ಬಾವಿಯಿಂದ ನೀರು ಸೇದುತ್ತಿದ್ದಾಕೆ –

''ಅಯ್ಯಯ್ಯೋ ಹೋಯ್ತು... ಹೋಯ್ತು...'' ಎಂದು ಬೊಬ್ಬೆ ಹೊಡೆದಳು.

ಎಲ್ಲರೂ ಓಡಿಬಂದು ವಿಚಾರಿಸಿದರು.

ಹೋದದ್ದು ಅವಳ ಕುತ್ತಿಗೆಯಲ್ಲಿಯ ಚಿನ್ನದವಲಕ್ಕಿ ಸರ. ರಾತ್ರಿ ಮಲಗಿಕೊಂಡಾಗ ಕೊಂಡಿ ಕಳಚಿತ್ತೇನೋ. ಮೇಲೆ ಬಂದ ಕೊಡಪಾನವನ್ನು ಬಗ್ಗಿ ಮೇಲೆಳೆದು ಕೊಳ್ಳುವಾಗ ಸರಸರನೆ ಕುತ್ತಿಗೆಯಿಂದ ಜಾರಿ ಬಾವಿಗೆ ಬಿದ್ದೇಬಿಟ್ಟಿತು.

''ಹೋ...'' ಎಂದು ಎದೆಬಡಿದುಕೊಂಡಳು ಆ ಮಹಿಳೆ.

ವಿರೂಪಾಕ್ಷಯ್ಯ ಓಡಿಬಂದರು. ಅವರ ಮಗ, ತಾಯಿ, ಅಕ್ಕ, ತಂಗಿ, ಬೀದಿಯವರೆಲ್ಲ ಸೇರಿದರು. ಬಗ್ಗಿ ನೋಡಿದರೆ ಮೇಲಿನ ಆಕಾಶ ಕುಲಕಾಡಿ ನಕ್ಕಿತು. ಬಾವಿಯ ದಂಡೆಯ ಮೇಲೆ ಬೆಳೆದ ಗಿಡಗಳು ತಾರಮ್ಮಯ್ಯ ಮಾಡಿದವು.

''ಹೋದ ಹಾಗೇ'' ಎಂದರು ಯಾರೋ.

''ಹನುಮಂತನ್ನ ಹೇಳಿಕಳುಹಿಸಿ'' ಎಂಬ ಮಾತೂ ಬಂದಿತು.

''ಅದೇನು ಕೊಡಪಾನವೇ ಮುಳುಗುಹಾಕಿ ತರಲಿಕ್ಕೆ'' ಎಂದು ಮತ್ತೊಬ್ಬರು ಕುಟುಕಿದರು.

ಆದರೂ ಹನುಮಂತಣ್ಣ ಬಂದ.

ಅಂಗಡಿ ಗಲ್ಲದ ಮೇಲೆ ಕುಳಿತ ಕಲ್ಯಾಣಿಯನ್ನು ನೋಡಿರೋ ಅವನಿಗೆ ಹುರುಪು ಬಂದಿತು. ಬಾವಿಕಟ್ಟೆ ಬಳಿ ನಿಂತು ಬಗ್ಗಿ ನೋಡಿದ. ಎರಡಾಳುದ್ದ ನೀರಿದೆ ಎಂದ. ಹಳೇಬಾವಿ ಅಲ್ವಾ ಎಂದು ಅವರಿವರ ಮುಖ ನೋಡಿದ. ಶರಟು ತೆಗೆದ. ಪಂಚೆ ಬಿಚ್ಚಿದ. ಅಭ್ಯಾಸ ಬಲದಿಂದೆಂಬಂತೆ ಕಾಚ ಸರಿಪಡಿಸಿಕೊಂಡ. ಕಟ್ಟೆಯ ಮಗ್ಗುಲಲ್ಲಿ ನಿಂತು ಉಟ್‌ಬೈಸ್ ಮಾಡಿದ. ತೋಳು ಬೀಸಿದ. ಎದೆಯೊಳಗೆ ಗಾಳಿತುಂಬಿಕೊಂಡುಬಿಟ್ಟ. ಕಲ್ಯಾಣಿ ತನ್ನನ್ನೇ ನೋಡುತ್ತಿದ್ದಾಳೆಂಬುದನ್ನು ಖಾತ್ರಿಪಡಿಸಿ ಕೊಂಡ. ಬಾವಿಯ ಅಡ್ಡೆಗೆ ಹಗ್ಗ ಕಟ್ಟಿದ. ಈ ಹಗ್ಗ ಎಳೆದು ಜಗ್ಗಿ ಕಟ್ಟೆಯ ಮೇಲೆ ನಿಂತವ ಕಲ್ಯಾಣಿಯನ್ನೊಮ್ಮೆ ನೋಡಿ ಬಾವಿಯೊಳಗೆ ಇಳಿದ.

ಕಲ್ಯಾಣಿ ಅಂಗಡಿ ಬಿಟ್ಟು ಬಾವಿಯವರೆಗೂ ಓಡಿದಳು. ಬಗ್ಗಿ ಕೆಳಗೆ ನೋಡಿದಳು.

ಸರಸರನೆ ಇಳಿದ ಹನುಮಂತ. ನೀರಿನವರೆಗೂ ಹೋದ. ನೀರು ಮುಟ್ಟಿದ. ಮುಂದಿನ ಕ್ಷಣದಲ್ಲಿ ಮಾಯವಾದ. ನೀರು ಕುಲುಕಾಡಿತು. ಬಗ್ಗಿ ನಿಂತವರು ಆತಂಕದಿಂದ ಕಾದರು.

ಹನುಮಂತಣ್ಣ ಮೂರು ಬಾರಿ ಮೇಲೆ ಬಂದ. ಮತ್ತೆ ಮಾಯವಾದ. ನಾಲ್ಕನೇ ಬಾರಿ ಹಗ್ಗಹಿಡಿದು ಮೇಲೇರಿದ. ಕಟ್ಟೆಯ ಈಚೆಗೆ ಬಂದವ ಕೈ ಚಾಚಿ ವಿರೂಪಾಕ್ಷಯ್ಯನವರ ಕೈಗೆ ವಿಲಕ್ಕಿಸರ ನೀಡಿದ.

''ಭಲೇ'' ಎಂದರು ಜನ.

ಕಲ್ಯಾಣಿ ಮೆಚ್ಚುಗೆಯಿಂದ ಅವನ ಮುಖ ನೋಡಿದಳು.

* * *

ಆ ಸಂಜೆ ಎಲೆ ಅಡಿಕೆಗಾಗಿ ಅಂಗಡಿಗೆ ಬಂದ ಹನುಮಂತಣ್ಣನನ್ನು ಕಲ್ಯಾಣಿ ಕೇಳಿದಳು –

''ಅಷ್ಟು ಕೆಳಗೆ... ಎರಡಾಳುದ್ದ ನೀರಾಗೆ ನಿಮಗೆ ಹೆದರಿಕೆ ಆಗಲಿಲ್ವ ?''

''ಹೆದರಿಕೆ ! ಏನು ಹಂಗಂದ್ರೆ ?'' ಎಂದು ಮೀಸೆಯ ಮೇಲೆ ಕೈಯಾಡಿಸಿ ಕೇಳಿದ ಹನುಮಂತಣ್ಣ.

''ಹನುಮಂತಣ್ಣ... ನೀವು ಅಸಾಧ್ಯ ಬುಡಿ...'' ಎಂದಳು ಕಲ್ಯಾಣಿ.

ರಾತ್ರಿ ಎಲ್ಲ ಇದೇ ಹುರುಪಿನಲ್ಲಿದ್ದ ಹನುಮಂತಣ್ಣ.

''ಈ ಹುಡಿಗಿ ಎಷ್ಟೊಂದು ದುಂಡುದುಂಡಾಗವಳೆ'' ಎಂದು ಹೇಳಿದ್ದ ಫಕೀರಣ್ಣ.

ಹುಡುಗಿ ದುಂಡುದುಂಡಾಗಿರುವುದು ನಿಜವೆ.

ಅಗಲ ಬಾವಿಯಲ್ಲಿ ತುಂಬಿಕೊಂಡಿರುವ ತಿಳಿ ನೀರಿನಂತೆ ಇದ್ದಾಳೆ ಹುಡುಗಿ. ಮೈಮೇಲಿನ ಭಾರ ಕಳಚಿಕೊಂಡು ನೀರಿಗೆ ಬಿದ್ದರೆ ಮೈ ಎಲ್ಲ ಹಗುರ. ಆಳಕ್ಕೆ ಇಳಿದು ಮೇಲೆ ಚಿಮ್ಮುವಾಗಿನ ಮಜವೇ ಬೇರೆ !

ಕಲ್ಯಾಣಿಯಂತಹ ಹುಡುಗಿ ಸಿಗುವುದಾದರೆ ಏಕೆ ಮದುವೆಯಾಗಬಾರದು ಎಂದು ವಿಚಾರ ಮಾಡಿದ ಹನುಮಂತ.

* * *

ಪೈಲ್ವಾನ ಮುನಿಯಪ್ಪನ ಗರಡಿ ಬೀದಿಯಲ್ಲಿಯೇ ಐದು ಹಾಗೂ ಆರನೇ ನಂಬರಿನ ಮನೆಗಳಲ್ಲಿ ಇರುವ ಈರ್ವರಲ್ಲಿ ಏನೋ ಕಸಿವಿಸಿ, ಇರಿಸುಮುರಿಸು ತಲೆದೋರಿತು.

ಪರಸ್ಪರ ಮಾತಿಲ್ಲ, ಭೇಟಿ ಇಲ್ಲ.

''...ಫಕೀರಣ್ಣ... ನಮ್ಮ ಮನೆ ಬಾವಿ ಕೆಲಸ ಇತ್ತು. ಸ್ವಲ್ಪ ಹನುಮಂತಣ್ಣನಿಗೆ ಹೇಳತೀಯ...'' ಎಂದು ಯಾರಾದರೂ ಹೇಳಿದರೆ ಫಕೀರಣ್ಣ,

''ಅವನು ನನಗೆ ಸಿಗಾಕಿಲ್ಲ ಬಿಡು'' ಎಂದು ಹೇಳತೊಡಗಿದ.

''ಹನುಮಂತಣ್ಣ... ಕಾಯಿ ಕೀಳಿಸಬೇಕಿತ್ತು'' – ಎಂದು ಮತ್ತೆ ಯಾರೋ ಮಾತು ಪ್ರಾರಂಭಿಸಿದರೆ ಹನುಮಂತಣ್ಣ ''ಯಾರು ಫಕೀರಣ್ಣನ... ಅವನ್ನ ನೋಡದೆ ಎಂಟು ದಿನವಾಯ್ತು'' ಎಂದು ಹೇಳುತ್ತಿದ್ದ.

ಫಕೀರಣ್ಣ ಸದಾ ಗೂಡಂಗಡಿ ಬಳಿ ಇರುತ್ತಾನೆ ಎಂಬುದು ಹನುಮಂತಣ್ಣನ ದೂರಾದರೆ, ಹನುಮಂತಣ್ಣ ಅಲ್ಲಿ ಬಿದ್ದಿರುತ್ತಾನೆ ಎಂಬುದು ಫಕೀರಣ್ಣನ ದೂರು.

ಮತ್ತೂ ವಿಚಿತ್ರವೆಂದರೆ –

ಫಕೀರಣ್ಣ ಅಂಗಡಿ ಬಳಿ ಇದ್ದರೆ ಅಲ್ಲಿಗೆ ಹನುಮಂತಣ್ಣ ಹೋಗುವುದಿಲ್ಲ. ಹನುಮಂತಣ್ಣ ಅಂಗಡಿ ಬಳಿ ಇದ್ದರೆ ಅಲ್ಲಿಗೆ ಫಕೀರಣ್ಣ ಹೋಗುವುದಿಲ್ಲ. ಆದರೆ ಇಬ್ಬರನ್ನೂ ಸಲಿಗೆಯಿಂದ, ಪ್ರೀತಿಯಿಂದ ನಗುನಗುತ್ತ ಮೈಕುಲುಕಿಸಿ ಮಾತನಾಡಿಸುತ್ತಾಳೆ ಕಲ್ಯಾಣಿ.

* * *

ಈ ಇಬ್ಬರ ನಡುವಣ ಮನಸ್ತಾಪ, ಸಿಟ್ಟು ನಿಧಾನವಾಗಿ ಕಲ್ಯಾಣಿಗೂ ಅರ್ಥವಾಗತೊಡಗಿತು. ಇಬ್ಬರೂ ತನ್ನ ಅಂಗಡಿಗೆ ಬರುವುದು, ತನ್ನ ಹತ್ತಿರ ಮಾತನಾಡುವುದು, ತನ್ನನ್ನು ಹೊಗಳುವುದು, ಕಣ್ಣೆವೆ ಮುಚ್ಚದೆ ತನ್ನನ್ನು ನೋಡಿ ಸಂತಸಪಡುವುದು ಅವಳಿಗೆ ಮನದಟ್ಟಾಯಿತು.

ನಿಧಾನವಾಗಿ ಅವಳೂ ಫಕೀರಣ್ಣನತ್ತ ಹನುಮಂತಣ್ಣನತ್ತ ಆಕರ್ಷಿಸಲು ತೊಡಗಿದಳು. ಇವರು ಮಾಡುವ ಕೆಲಸದ ಬಗ್ಗೆ ಅವಳ ತಕರಾರು ಏನೂ ಇರಲಿಲ್ಲ. ಓರ್ವ ತೆಂಗಿನ ಮರವೇರುತ್ತಾನೆ. ಮತ್ತೋರ್ವ ಬಾವಿಗೆ ಇಳಿಯುತ್ತಾನೆ. ಇವೆರಡೂ ಯಾರು ಯಾರೋ ಮಾಡುವ ಕೆಲಸಗಳಲ್ಲ. ಧೈರ್ಯ, ಎದೆಗಾರಿಕೆ, ಕೈಕಾಲು ಗಟ್ಟಿ, ಮನಸ್ಸು ಗಟ್ಟಿಯಾಗಿದ್ದರೆ ಈ ಕೆಲಸಗಳನ್ನು ಮಾಡಲು ಸಾಧ್ಯ. ಇದರ ಜೊತೆಗೆ ಇವರು ಚೆನ್ನಾಗಿ ದುಡಿಯುತ್ತಾರೆ. ಹಣ ಸಂಪಾದಿಸುತ್ತಾರೆ.

ನಿತ್ಯ ತಮ್ಮ ವೃತ್ತಿಗೆ ತಕ್ಕಂತೆ ಉಡುಪು ಧರಿಸುವ ಈ ಇಬ್ಬರು ಅಪರೂಪಕ್ಕೊಮ್ಮೆ ಉತ್ತಮ ಉಡುಪು ಧರಿಸಿ, ಸಿಗರೇಟು ಸೇದುತ್ತ ಹೊರಟಾಗ –

''ಅರೇ... ಇವನು ಫಕೀರಣ್ಣನೇ ?''

''ಅರೇ... ಇವನು ಹನುಮಂತಣ್ಣನೇ ?'' ಎಂದು ಬೆರಗಾಗಿ ಜನ ನೋಡುತ್ತಾರೆ.

ಇಬ್ಬರೂ ತನ್ನನ್ನು ಬಯಸುತ್ತಿದ್ದಾರೆ. ಸಾಧ್ಯವಾದರೆ ತನ್ನನ್ನು ಮದುವೆಯಾಗಬೇಕು ಎಂಬ ಆಸೆ ಇಬ್ಬರ ಮನಸ್ಸಿನಲ್ಲಿ ಇದೆ. ಆದರೆ ತಾನು ಇಬ್ಬರಲ್ಲಿ ಓರ್ವನನ್ನು ಆಯ್ಕೆ ಮಾಡಿಕೊಳ್ಳಬೇಕು.

ತೆಂಗಿನಮರ ಏರುವ ಫಕೀರಣ್ಣ ಕೊಂಚ ತೆಳ್ಳಗಿದ್ದಾನೆ. ಮರ ಏರುವಾಗ ಅವನ ತೋಳು ತೊಡೆಯ ಸ್ನಾಯುಗಳು ಸೆಟೆದುಕೊಳ್ಳುತ್ತವೆ. ಮರವನ್ನು ಕಾಲಿನಿಂದ ಒತ್ತಿಹಿಡಿದು ಆತ ಮೇಲೇರುತ್ತಾನೆ. ಮೇಲೆ ತೆಂಗಿನಮರಕ್ಕೆ ತನ್ನನ್ನು ತಾನು ಕಟ್ಟಿಕೊಂಡು ಕುಳಿತ ಆತ ಎಲ್ಲ ಕೆಲಸ ಮಾಡುತ್ತಾನೆ.

ಹನುಮಂತಣ್ಣ ತುಸು ಕುಳ್ಳ, ದಪ್ಪ. ನೀರಿಗೆ ಇಳಿಯುವ ಮುನ್ನ ಕೈಕಾಲು ಬೀಸಿ ಸಾಮು ಮಾಡುವಾಗ ನೋಡಲು ಚೆಂದ.

ಇಬ್ಬರೂ ಗುಣದಲ್ಲಿ ಮಾತಿನಲ್ಲಿ ಸರಳರು.

ಮದುವೆ ನಂತರದ ಬದುಕು ಹಾಗಿರಬೇಕು ಹೀಗಿರಬೇಕು ಎಂದು ಕನಸು ಕಾಣುತ್ತಾರೆ.

''ನಾನು ಹಳ್ಳಿ ಹೈದ... ಪ್ಯಾಟೆಗೆ ಬಂದ ಮೇಲೇನೆ ಈ ಪ್ಯಾಟೆ ಜನರ ಮಾತು ದಿರಿಸು ಎಲ್ಲ ನೋಡಿದೆ. ನನಗಂತೂ ವಿದ್ಯೆ ಕೈ ಹಿಡೀನಿಲ್ಲ... ನನ ಮಕ್ಳು ಆಫೀಸರಗೋಳಾಗಬೇಕು...'' ಎಂದು ಎಲ್ಲೋ ನೋಡುತ್ತ ಹೇಳುತ್ತಾನೆ ಫಕೀರಣ್ಣ.

ಹನುಮಂತಣ್ಣ ಕೂಡ ಅತ್ರ.

''ಈ ಬಾವಿಗಿಳಿಯೋ ಕೆಲಸ. ನನ್ ತಲೆಗೆ ಕೊನೆ... ನನ ಮಕ್ಳು ಇಂಗ್ಲೀಸ್ ಮಾತಾಡಬೇಕು...'' ಎಂದು ನಗುತ್ತಾನೆ.

ತಾನು ಗೊಂದಲದಲ್ಲಿ ಬಿದ್ದಿದ್ದೇನೆ ಈಗ. ಫಕೀರಣ್ಣ ಇಲ್ಲ ಹನುಮಂತಣ್ಣ, ಇಬ್ಬರಲ್ಲಿ ಒಬ್ಬರಿಗೆ ನಿರಾಶೆ ಯಾಗುತ್ತದೆ. ಬೇರೆ ದಾರಿ ಇಲ್ಲ. ಆದರೆ ತಾನು ಯಾರನ್ನು ಆಯ್ಕೆ ಮಾಡುವುದು ?

ಒಮ್ಮೆ ಅಂಗಡಿಗೆ ಬಂದ ಸುಬ್ಬಮ್ಮ ಅಲ್ಲಿ ಕುಳಿತ ಹನುಮಂತಣ್ಣನನ್ನು ನೋಡಿದಳು. ಆತ ಎದ್ದುಹೋದ ಮೇಲೆ

''ಈ ಇಬ್ಬರಲ್ಲಿ.. ಇವನು ಒಳ್ಳೆಯೋನು... ಆತನೂ ಅಷ್ಟೆ. ಆದರೆ ಇವನಿಗೆ ಊರಾಗೆ ನಾಲ್ಕು ಎಕರೆ ಜಮೀನೈತಂತೆ...'' ಎಂದು ಹೇಳಿದಳು.

ಈ ಇಬ್ಬರೂ ತನ್ನನ್ನು ಬಯಸಿರುವುದು, ತಾನು ಅವನೋ ಇವನೋ ಎಂದು ತಕ್ಕಡಿ ಹಿಡಿದು ತೂಗುತ್ತಿರುವುದು ಅವಳ ಗಮನಕ್ಕೂ ಬಂದಿದೆ. ಏನೋ ಅಂದುಕೊಂಡಳು ಕಲ್ಯಾಣಿ. ಅವಳು ಮಾತ್ರ ಒಂದು ನಿರ್ಣಯಕ್ಕೆ ಬರಲಿಲ್ಲ.

* * *

ಈ ನಡುವೆ ಊರಿಗೊಂದು ಸರ್ಕಸ್ ಬಂದಿತು. ಬಾಂಬೆ ಜಿ.ಎ. ಸರ್ಕಸ್. ಆರು ಆನೆಗಳು, ಎರಡು ಹುಲಿ, ಮೂರು ಸಿಂಹ, ಒಂದು ಕರಡಿ, ನಾಯಿ, ಗಿಳಿ, ಮಂಗ, ಕುದುರೆ, ಒಂಟೆ, ನೂರು ಜನ ಕಲಾವಿದರು. ಊರಿನಲ್ಲಿ ಸರ್ಕಸಿನದೇ ಸುದ್ದಿ. ಮೃತ್ಯುಗೋಲದಲ್ಲಿ ಸೈಕಲ್ ಹೊಡೆಯುವುದು, ಮೇಲೆ ಜೋಕಾಲಿಯಲ್ಲಿ ನಿಂತು ಹಲವು ಅದ್ಭುತ ಸಾಹಸಗಳನ್ನು ಮಾಡುವುದು. ಆನೆ ಹುಲಿಗಳ ಕೆಲಸ. ಕೋತಿಗಳ ಕೈಚಳಕ.

ಕಲ್ಯಾಣಿಗೆ ಸರ್ಕಸ್ಸಿನ ಹುಚ್ಚು. ಅವಳ ಅಂಗಡಿಗೆ ಹೋದರೆ ಸಾಕು ಜಾರ್ಲಿಗಳ ತಮಾಷೆ, ಹುಡುಗಿಯರ ಕಸರತ್ತು, ಒಂಟೆಯ ಓಟ, ಕುದುರೆಗಳ ಆಟ ಎಂದು ಅವಳು ಹೇಳಿದ್ದನ್ನೇ ಹೇಳುವಳು.

''ಕಲ್ಯಾಣಿ ಸರ್ಕಸ್ಸಿಗೆ ಹೋಗಿದ್ಯ ?'' ಎಂದು ಕೇಳಿದರೆ ಸಾಕು.

''ಮೂರು ಸಾರಿ ನೋಡಿದೀನಿ'' ಅನ್ನುತ್ತಾಳೆ ಅವಳು.

''ಯಾವ ಆಟ ನಿನಗೆ ಇಷ್ಟ ?''

''ಮೃತ್ಯು ಗೋಲದಲ್ಲಿ ಸೈಕಲ್ ಹೊಡಿಯೋದು... ಒಟ್ಟೊಗೇನೆ ಮೂರು ಸೈಕಲ್‌ಗಳು ಆ ಕಬ್ಬಿಣದ ಚಂಡಿನೊಳಗೆ ತಿರುಗ್ತಾವೆ. ಭರ್...ಭರ್...ಭರ್... ಹಾಗೊಂದು, ಹೀಗೊಂದು.''

ಅವಳ ಬಣ್ಣನೆ ಅಲ್ಲಿಗೇನೆ ಮುಗಿಯುವುದಿಲ್ಲ.

''ಮೇಲೆ... ಕಿರಿದಾದ ತುದೀಲಿ ಜೋಕಾಲಿ ಮೇಲೆ ನಿಂತು ಆ ಕಡೆಯಿಂದ ಈ ಕಡೆಗೆ ಹಾರಿ ಮಾಡೋ ಆಟ ಕೂಡ ಚೆಂದಾಗಿದೆ...'' ಎಂದವಳು ವರ್ಣಿಸುತ್ತಾಳೆ.

ಅವಳ ಈ ಉತ್ಸಾಹ ಕಂಡು ಫಕೀರಣ್ಣ ಒಮ್ಮೆ ಕೇಳಿದ – ''ಕಲ್ಯಾಣಿ ಸರ್ಕಸ್‌ಗೆ ಹೋಗತೇನೆ ಬರತೀಯ...''

''ಓ ! ಬರತೇನೆ...''

ಎಂದಳವಳು. ಫಕೀರಣ್ಣ ಸಂತಸದಿಂದ ಕುಣಿದಾಡಿಬಿಟ್ಟ. ಅವತ್ತು ರಾತ್ರಿ ೨ನೇ ಆಟವನ್ನು ಅವರು ಜೊತೆಯಲ್ಲಿ ಕೂತು ನೋಡಿದರು. ಅವಳ ಉತ್ಸಾಹ ಹುರುಪು ಕಂಡು




ಫಕೀರಣ್ಣ ಸಂಭ್ರಮಿಸಿದ.

* * *

ಕಲ್ಯಾಣಿ ಫಕೀರಣ್ಣನ ಜೊತೆ ಸರ್ಕಸ್ಸಿಗೆ ಹೋದದ್ದು ಹನುಮಂತಣ್ಣನ ಕಿವಿಗೆ ಬಿದ್ದಿತು.

''ಏನು ? ಕಲ್ಯಾಣಿ ಜೊತೆ ಸರ್ಕಸ್ಸಿಗೆ ಹೋಗಿದ್ದಿಯಂತೆ ?'' ಎಂದು ಗಡಸು ಗಡಸಾಗಿ ಕೇಳಿದ ಹನುಮಂತಣ್ಣ ಫಕೀರಣ್ಣನಿಗೆ.

''ಹೌದು ಏನೀಗ ? ಅವಳು ಬಂದ್ಲು ನಾನು ಕರಕೊಂಡು ಹೋದೆ ?'' ಹನುಮಂತಣ್ಣ ಮಾತನಾಡಲಿಲ್ಲ. ಸಂಜೆ ಅಂಗಡಿ ಬಳಿ ಹೋಗಿ ಕಲ್ಯಾಣಿಗೆ ಕೇಳಿದ -

''ಕಲ್ಯಾಣಿ ಸರ್ಕಸ್‌ಗೆ ಹೋಗತೇನೆ ಬರತೀಯ ?''

''ಓ ! ಬರತೇನೆ'' ಎಂದಳು ಕಲ್ಯಾಣಿ.

ಕಲ್ಯಾಣಿ ಹನುಮಂತಣ್ಣನ ಜೊತೆ ಕೂತು ಮೃತ್ಯು ಗೋಲದಲ್ಲಿ ಮೋಟಾರ್ ಬೈಕ್‌ಗಳ ಓಡಾಟ ನೋಡಿದಳು. ಬಲೆಯ ಮೇಲೆ ಬದಿಯಲ್ಲಿ ಜೋಕಾಲಿಯಾಟ ನೋಡಿದಳು.

ಸರ್ಕಸ್ ನೋಡುತ್ತ ಕೂಗಿ, ಚಪ್ಪಾಳೆ ತಟ್ಟಿ ಕುಣಿದಾಡಿದಳು ಕಲ್ಯಾಣಿ. ಅಷ್ಟೇ ಸಂತಸಪಟ್ಟ ಹನುಮಂತಣ್ಣ.

* * *

ಊರಿಗೆ ಬಂದ ಸರ್ಕಸ್ ಎಂಟೇ ದಿನಗಳಲ್ಲಿ ತನ್ನ ಡೇರೆ ಕಿತ್ತು ಊರು ಖಾಲಿ ಮಾಡಿತು. ಸರ್ಕಸ್ ಊರು ಬಿಟ್ಟು ಹೋದ ದಿನ ಗೂಡಂಗಡಿ ಸುಬ್ಬಮ್ಮ ಮುಖ ಊದಿಸಿಕೊಂಡು ಗಲ್ಲದ ಮೇಲೆ ಕೂತಿದ್ದಳು. ಕಲ್ಯಾಣಿ ಎಲ್ಲಿ ಎಂದು ಜನ ಕೇಳುವ ಮೊದಲೇ ಉತ್ತರ ಎಲ್ಲರಿಗೂ ತಿಳಿದಿತ್ತು.

ಸರ್ಕಸ್ಸಿನ ಮೃತ್ಯುಗೋಲದಲ್ಲಿ ಸೈಕಲ್ ಹೊಡೆಯು ತ್ತಿದ್ದವ ನಿತ್ಯ ಗುಟ್ಕಾ ಕೊಳ್ಳಲು ಸುಬ್ಬಮ್ಮನ ಅಂಗಡಿಗೆ ಬರುತ್ತಿದ್ದ. ಕಲ್ಯಾಣಿ ನಕ್ಕು ಅವನಿಗೆ ಗುಟ್ಕಾ ನೀಡುತ್ತಿದ್ದಳು. ಇವನೇ ಜೋಕಾಲಿಯ ಮೇಲಿನ ಎಲ್ಲಾ ಸಾಹಸಗಳನ್ನು ಮಾಡುತ್ತಿದ್ದ.

ಕಲ್ಯಾಣಿ ಈತನ ಜೊತೆಯಲ್ಲಿ ಹೊರಟುಹೋಗಿದ್ದಳು.

''ಮುಂಡೆ ಚೆನ್ನರಾಯಪಟ್ಟಣದಾಗೇ ಹೀಗೇ ಒಂದು ಬಾನಗಡಿ ಮಾಡಿಕೊಂಡಿದ್ಲು. ಇಲ್ಲಾರ ಮರ್ಯಾದೆಯಿಂದ ಇರುತಾಳೆ ಅಂದ್ರೆ, ಇಲ್ಲೂ ಹಂಗೆ ಮಾಡಿದ್ಲು...'' ಎಂದು ಸುಬ್ಬಮ್ಮ ಹಿಡಿಶಾಪ ಹಾಕಿದಳು.

* * *

ಎಂದಿನಂತೆ ಊರಿನಲ್ಲಿ ಬೆಳಗಾಗುತ್ತದೆ.

''ಯಾರ್ದಾರ ಕೊಡಪಾನ ಬಾವೀಲಿ ಬಿದ್ದೈತೇನ್ರಿ'' ಎಂದು ಕೂಗುತ್ತಾ ಹನುಮಂತ ... ನಗರಕ್ಕೆ ಬರುತ್ತಾನೆ. ಯಾರೋ ಅವನನ್ನು ನಿಲ್ಲಿಸಿಕೊಂಡು ಹೇಳುತ್ತಾರೆ –

''ನಮ್ಮ ತೆಂಗಿನ ಮರಕ್ಕೆ ನುಸಿ ರೋಗ ಬಂದಿದೆ...'' ಅವರು ಮಾತು ಮುಗಿಸುವ ಮುನ್ನ ಹನುಮಂತಣ್ಣ ಹೇಳುತ್ತಾನೆ,

''ನಮ್ಮ ಫಕೀರಣ್ಣ ಅದಕ್ಕೆ ಔಷಧಿ ಮಾಡತಾನೆ ಬಿಡಿ. ಅವನ್ನ ನಿಮ್ ಮನೆ ತಾವ ಕಳಿಸ್ತೀನಿ...''

* * *

ನೆಹರು ನಗರದ ರಸ್ತೆಯ ಮೇಲೆ ಸೊಂಟದಲ್ಲಿಯ ಕತ್ತಿಯನ್ನು ಕಣಕಣಿಸುತ್ತ ಹೊರಟ ಫಕೀರಣ್ಣನನ್ನು ನಿಲ್ಲಿಸಿಕೊಂಡು ಇನ್ನಾರೋ ಹೇಳುತ್ತಾರೆ,

''ಬೇಸಿಗೆ ಬಂತಲ್ಲ... ನಮ್ಮ ಬಾವಿನ ಮತ್ತೂ ಐದಡಿ ಆಳಕ್ಕೆ ತೋಡಿಸಬೇಕಿತ್ತು... ಫಕೀರಣ್ಣ...''

ತಟ್ಟನೆ ಫಕೀರಣ್ಣ ಹೇಳುತ್ತಾನೆ,

''... ಆ ಕೆಲಸಾನ ಹನುಮಂತಣ್ಣ ಚೆನ್ನಾಗಿ ಮಾಡತಾನೆ... ನಾನು ಹೇಳತೀನಿ ಬಿಡಿ...''

* * *

ಪೈಲ್ವಾನ ಮುನಿಯಪ್ಪನ ಗರಡಿ ಬೀದಿಯಲ್ಲಿ ಐದು ಹಾಗೂ ಆರನೇ ನಂಬರಿನ ಮನೆಗಳಲ್ಲಿ ಈ ಈರ್ವರೂ ಇದ್ದಾರೆ. ತೆಂಗಿನ ಮರವೇರಿ ಓರ್ವ ಆಕಾಶದಲ್ಲಿ ಈಜಾಡುತ್ತಾನೆ. ಐವತ್ತು ಆಳದ ಬಾವಿಗೆ ಇಳಿದು ಇನ್ನೋರ್ವ ನೀರಿನಲ್ಲಿ ಮುಳುಗೇಳುತ್ತಾನೆ. ಇಬ್ಬರ ನಡುವೆ ಸ್ನೇಹ, ಸಹಯೋಗ, ಹೊಂದಾಣಿಕೆ ಮುಂದುವರಿದಿದೆ.

ಸರ್ಕಸ್ಸಿನ ಆ ಮನುಷ್ಯ ಹಾಗೂ ಕಲ್ಯಾಣಿ ನೆಮ್ಮದಿಯಿಂದಿಲ್ಲ ಎಂಬ ಸುದ್ದಿಯನ್ನು ಸುಬ್ಬಮ್ಮ ಆಗಾಗ್ಗೆ ಹೇಳುತ್ತಿರುತ್ತಾಳೆ.

''ಬಾವೀಲಿ ಸೈಕಲ್ ಹೊಡಿಯೋನಿಗೆ... ಆಕಾಶದಲ್ಲಿ ಹಾರಾಟ ಮಾಡೋನಿಗೆ ಆ ಹುಡುಗಿ ಮರುಳಾಗಿ ಹೋದ್ಲಲ್ಲ, ಅದೇ ನನಗೆ ಸೋಜಿಗ'' ಎಂಬ ಮಾತನ್ನು ಸುಬ್ಬಮ್ಮ ಜೋಡಿಸುತ್ತಾಳೆ. ಅವಳ ಮಾತಿನಲ್ಲಿ ನೋವು ಇರುತ್ತದೆ.



ಫಕೀರಣ್ಣ ಹನು ಮಂತಣ್ಣ ತಮ್ಮ ಕೆಲಸವನ್ನು ಮುಂದುವರಿಸಿದ್ದಾರೆ. ಆದರೆ ಇಬ್ಬರೂ ಮದುವೆ ವಿಷಯ ಮರೆತು ವರ್ಷಗಳಾಗಿವೆ.

ನಾ. ಡಿಸೋಜ
೧೫/೧೪, ೨ನೇ ಕ್ರಾಸ್, ನೆಹರುನಗರ
ಸಾಗರ - ೫೭೭ ೪೦೧

With best compliments to

# HOSATHU

KANNADA MONTHLY MAGAZINE



## VAIBHAV PAPER COMPANY

*Paper and Board Distributors*

E-92, 2nd Floor
Subbannachar Lane, Cottonpet Cross
Bangalore - 560 053

Mobile : 98440 61122

ಬಿ. ಲಾವ್ರಿನ್ಯೋವ್

ನಲವತ್ತೊಂದನೆಯವ



*ಈ ಕೃತಿ ನವಕರ್ನಾಟಕ ಪುಸ್ತಕ ಮಳಿಗೆಗಳಲ್ಲಿ ಲಭ್ಯ*
*ಬೆಲೆ : ರೂ. ೫೦*

# ಹೆಣ್ಣು ಮನಸ್ಸು

**ಬಿ.** ಲಾವ್ರಿನೋವ್ ಅವರ 'ನಲವತ್ತೊಂದನೆಯವ' ಎಂಬ ಒಂದು ಪುಟ್ಟ ಕಾದಂಬರಿ ನನ್ನನ್ನು ಆಕರ್ಷಿಸಿದ ಕೃತಿ. ಕ್ರಾಂತಿಕಾರಕ ಹೆಣ್ಣೋರ್ವಳು ತನ್ನ ಕರ್ತವ್ಯ ನಿರ್ವಹಿಸಿದ್ದು, ಅದಕ್ಕಾಗಿ ಆಕೆ ಮಾಡಿದ ತ್ಯಾಗ ಇವೇ ರಷ್ಯನ್ ಕ್ರಾಂತಿಯ ಕಾಲದ ಕಥಾವಸ್ತುವಾಗಿದೆ. ಓರ್ವ ಸಾಮಾನ್ಯ ಬಡ ಹೆಣ್ಣುಮಗಳು ತನ್ನೆಲ್ಲ ಆಶೆ, ಆಕಾಂಕ್ಷೆಗಳನ್ನು ಬದಿಗೊತ್ತಿ ತನ್ನ ಜನರಿಗಾಗಿ, ಅವರ ವಿಮೋಚನೆಗಾಗಿ ಹೋರಾಡಿದ ಕಥೆಯಾಗಿದೆ.

ಮರ್‍ಯೂತ್ಕ ಓರ್ವ ಸಾಮಾನ್ಯ ಮೀನುಗಾರರ ಹೆಣ್ಣು ಮಗಳು. ತನ್ನ ಎಳಸೆಯ ವಯಸ್ಸಿನಿಂದಲೂ ಮೀನಿನ ಹೊಟ್ಟೆ ಸೀಳುತ್ತಾ ಹನ್ನೆರಡು ವರ್ಷ ಕಳೆದವಳು. ಕೆಂಪು ಸೈನ್ಯಕ್ಕೆ ಸ್ವಯಂಸೇವಕರನ್ನು ಸೇರಿಸಿಕೊಳ್ಳುವ ಸುದ್ದಿ ತಿಳಿದಾಗ ಸೈನ್ಯ ಸೇರಲು ಹೊರಟಳು. ಪ್ರಣಯವನ್ನೊಳಗೊಂಡು ಸ್ತ್ರೀಸಹಜವಾದ ಎಲ್ಲ ಜೀವನ ರೀತಿಗಳನ್ನೂ ಮರೆಯುವಳೆಂಬ ಆಶ್ವಾಸನೆಯ ಪತ್ರ ಬರೆದುಕೊಟ್ಟು ಸೈನ್ಯ ಸೇರಿದಳು. ಕವನ ಬರೆಯುವುದು ಅವಳ ಏಕೈಕ ಹವ್ಯಾಸವಾಗಿತ್ತು.

ಅವಳಿಗೋ ಕೈಗೆ ಸಿಕ್ಕಿದ ಕಾಗದಗಳಲ್ಲಿ ಕವನ ರಚಿಸುತ್ತಿದ್ದ ಆಕೆಗೆ ಎಂದಾದರೊಂದು ದಿನ ತನ್ನದೇ ಆದ ಒಂದು ಕವನ ಸಂಕಲನವನ್ನು ಹೊರತರಬೇಕು ಮತ್ತು ಅದರಲ್ಲಿ ಕವಯಿತ್ರಿ ಮರಿಯಾ ಬಾಸೋವ ಎಂದು ಬರೆಯಬೇಕು ಎಂಬ ಒಂದೇ ಒಂದು ಮಹತ್ವಾಕಾಂಕ್ಷೆ ಇತ್ತು. ಆದರೆ ಅವಳ ಕವನವನ್ನೋದಿದ ಇತರ ಸೈನಿಕರು ನಗುತ್ತಿದ್ದರು.

ಅವಳು ಗುರಿ ತಪ್ಪದಂತೆ ಬಂದೂಕಿನಿಂದ ಗುಂಡು ಹಾರಿಸುತ್ತಿದ್ದಳು. ಕದನದಲ್ಲಿ ಅವರ ಮುಖ್ಯಸ್ಥ ಯೆವ್‌ಸ್ಯುಕೋವ್‌ನ ಬಳಿಯೇ ಇರುತ್ತಿದ್ದಳು. ಪ್ರತಿಯೋರ್ವನನ್ನು ಕೊಂದಾಗಲೂ ಲೆಕ್ಕ ಮಾಡುತ್ತಾ ನಾಲ್ವತ್ತನೆಯವನನ್ನೂ ಎಣಿಸಿದ್ದಳು. ಅವಳು ಎಷ್ಟು ಗಟ್ಟಿಯಾಗಿದ್ದಳೆಂದರೆ ಅವಳನ್ನು ಕೆಣಕಿದ ಸೈನಿಕನೊಬ್ಬನಿಗೆ ಬಂದೂಕಿನ ಹಿಡಿಯಿಂದ ಹೊಡೆದು ಹಲ್ಲುರುಳಿಸಿದ್ದಳು. ಫೆಬ್ರವರಿಯ ಶೀತಲ ಚಂಡಮಾರುತದ ಒಂದು ದಿನ ಕೊಸ್ಸಾಕ್ ಸೈನಿಕರಿಂದ ತಪ್ಪಿಸಿಕೊಂಡ ಯೆವ್‌ಸ್ಯುಕೋವ್ ಮತ್ತು ಇಪ್ಪತ್ತಮೂರು ಜನ ಸೈನಿಕರಲ್ಲಿ ಮರ್‍ಯೂತ್ಕ ಒಬ್ಬಳಾಗಿದ್ದಳು ಮತ್ತು ಓರ್ವಳೇ ಸ್ತ್ರೀಯಾಗಿದ್ದಳು. ಉತ್ತರದ ಮರುಭೂಮಿಯಲ್ಲಿ ಅರಾಲ್ ಸಮುದ್ರದ ಬಳಿಗೆ ಅವರು ಹೊರಟಿದ್ದರು. ಅಲ್ಲಿಂದ ಕಜಾಲಿಸ್ಕ್‌ನ ತಂಬ ಕೇಂದ್ರ ಕಚೇರಿಗೆ ಹೋಗುವುದು ಅವರ ಗುರಿಯಾಗಿತ್ತು.

ಈ ರೀತಿ ಒಂದೆಡೆ ತಂಗಿದ್ದಾಗಲೇ ದೂರದಲ್ಲಿ ಒಂಟೆಗಳ ಸಾಲಿನ ಕ್ಯಾರವಾನ್ ಕಂಡಾಗ ಅದನ್ನು ಸುತ್ತುವರಿದು ಅವರೆಲ್ಲರನ್ನೂ ಹಿಡಿಯುವ ಪ್ರಯತ್ನ ಮಾಡಿದರು. ಮುಖ್ಯಸ್ಥನು ಮರ್‍ಯೂತ್ಕಳಿಗೆ ಆಫೀಸರ್ ಒಬ್ಬನನ್ನು ತೋರಿಸಿದಾಗ ಆಕೆ ಗುರಿಯಿಟ್ಟು ಗುಂಡು ಹಾರಿಸಿದಳು. ಆದರೆ ಪ್ರಥಮ ಬಾರಿಗೆ ಆಕೆಯ ಗುರಿ ತಪ್ಪಿತು. ಆ ಅಧಿಕಾರಿ ತಾನೇ ಶರಣಾದ. ಆತ ಶ್ವೇತದಳದ ಓರ್ವ ಲೆಫ್ಟಿನೆಂಟ್. ಮುಖ್ಯಸ್ಥ ಆ ಅಧಿಕಾರಿಯನ್ನು ಮರ್‍ಯೂತ್ಕಳ ವಶಕ್ಕೊಪ್ಪಿಸುತ್ತಾ, ''ಈತ ತಪ್ಪಿಸಿಕೊಂಡು ಹೋಗಲು ಬಿಟ್ಟರೆ ನಿನ್ನ ಚರ್ಮ ಸುಲೀತೀನಿ'' ಎಂಬ ಎಚ್ಚರಿಕೆಯನ್ನೂ ನೀಡಿದನು. ಆಕೆ ಅವನ ಕೈಕಾಲುಗಳನ್ನು ಕಟ್ಟಿ ಹಗ್ಗದ ಕೊನೆಯನ್ನು ತನ್ನ ಸೊಂಟಕ್ಕೆ ಕಟ್ಟಿಕೊಂಡು ಮಲಗಿದಾಗ ಉಳಿದವರೆಲ್ಲ ನಕ್ಕರು.

ಆದರೆ ಪಹರೆಯವನ ಅಜಾಗ್ರತೆಯಿಂದ ಉಳಿದ ಖೈದಿಗಳು ತಮ್ಮ ಒಂಟೆಗಳೊಡನೆ ಈ ಕೆಂಪು ಸೈನಿಕರ ಒಂಟೆಗಳನ್ನೂ ಹಾರಿಸಿಕೊಂಡು ಹೋಗಿದ್ದುದರಿಂದ ಅವರು ನಡೆದುಕೊಂಡೇ ತಮ್ಮ ಪ್ರಯಾಣ ಮುಂದುವರಿಸಬೇಕಾಯಿತು. ಬಹಳ ಸಂಕಷ್ಟವನ್ನನುಭವಿಸಿದ್ದರಿಂದ ಹಾದಿಯಲ್ಲಿ ಬಹಳ ಜನರು ಸತ್ತು ಕೇವಲ ಹತ್ತು ಮಂದಿಯಷ್ಟೇ ಉಳಿದು ಕೊನೆಗೆ ಅರಾಲ್ ಸಮುದ್ರ ತೀರ ತಲುಪಿದರು.

ಅಲ್ಲೊಂದು ಪುಟ್ಟ ಜನವಸತಿಯ ಬಳಿ ಬಂದಾಗ ಆ ಜನರು ಇವರಿಗೆ ಅನ್ನಾಹಾರವನ್ನಿತ್ತು ಸ್ವಾಗತಿಸುತ್ತಾರೆ. ಎಲ್ಲರೂ ನಿದ್ದೆ ಹೋದಾಗ ಮರ್‍ಯೂತ್ಕ ಈವರೆಗಿನ ತನ್ನ ಕಟು ಅನುಭವಗಳನ್ನು ಮರೆತು ಚೀಲದಿಂದ ಪೆನ್ಸಿಲ್ ಮತ್ತು ಕಾಗದವನ್ನು ತೆಗೆದು ಕವನ ರಚನೆಗೆ ತೊಡಗಿದಳು.



ಕ್ರಾಂತಿ ಮಾಡಿ ವಿಮೋಚನೆ ಪಡೆದ ಬಳಿಕವಷ್ಟೇ ವಿಶ್ರಾಂತಿ. ಅದು ಆಕೆಯ ಗುರಿ. ಅದಕ್ಕಾಗಿ ಎಂತಹ ಸಂಕಷ್ಟವನ್ನಾದರೂ ಸಹಿಸಬಲ್ಲಳು; ಎದುರಿಸಬಲ್ಲಳು. ಎಂತಹ ತ್ಯಾಗಕ್ಕೂ ಆಕೆ ಸಿದ್ಧಳೇ. ಆತನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಾ ಆತನಿಗಾಗಿ ತನ್ನ ಪ್ರಾಣದಂತೆ ಪ್ರೀತಿಸುತ್ತಿದ್ದ ಕವನದ ಹಾಳೆಗಳನ್ನು ಆತನ ಸಿಗರೇಟಿಗಾಗಿ ನೀಡಿದ್ದಾಳೆ. ಆತನ ಸೇವೆ ಮಾಡಿದ್ದಾಳೆ. ಎಲ್ಲವೂ ಹೌದು. ಆದರೆ ತನ್ನ ಜನರು, ಅವರ ಬದುಕು, ಈ ಕ್ರಾಂತಿ ಇವೆಲ್ಲವೂ ಈ ಪ್ರಿಯಕರನಿಗಿಂತಲೂ ಹಿರಿದು. ಪ್ರಿಯಕರನೊಡನೆ ಬಂಗಾರದ ಬದುಕು; ತನ್ನ ಜನರಿಗಾಗಿ ಮುಂದೆ ತಾನನುಭವಿಸಬೇಕಾದ ಚಿತ್ರಹಿಂಸೆ ಮತ್ತು ಪ್ರಿಯಕರನ ಬಲಿದಾನ. ಈ ಎರಡರಲ್ಲಿ ಆಕೆಯ ಆಯ್ಕೆ ಎರಡನೆಯದೆ; ಮೊದಲಿನದಲ್ಲ!

**ಸಾರಾ ಅಬೂಬಕ್ಕರ್**

ಲೆಫ್ಟಿನೆಂಟ್‌ನನ್ನು ಕಟ್ಟಿದ್ದ ಹಗ್ಗವಿನ್ನೂ ಆಕೆಯ ಸೊಂಟವನ್ನು ಸುತ್ತುವರಿದಿತ್ತು. ಆತನು ''ಏನು ಬರೆಯುತ್ತಿದ್ದೀಯಾ ?'' ಎಂದು ಕೇಳಿದಾಗ ''ಕವನ ಬರೆಯುತ್ತಿದ್ದೇನೆ'' ಎಂದಳು. ''ಕವನ ಬರೆಯಲು ಇದು ಸೂಕ್ತ ಸಮಯವೇ ?'' ಎಂದಾಗ ಆಕೆ ಹೇಳುವ ಮಾತುಗಳು ನಮ್ಮ ಹೃದಯವನ್ನು ತಟ್ಟುತ್ತವೆ.

''ಕವನ ಬರೆಯುವುದಕ್ಕೆ ತುಪ್ಪಳದ ಹಾಸಿಗೆಯಲ್ಲಿ ಮಲಗಿರಬೇಕೇ ? ಒಳಗೆ ಭಾವನೆಗಳು ತುಡಿಯುತ್ತಿದ್ದರೆ ಸಾಲದೇ ? ಅವನ್ನೆಲ್ಲ ಬರೆಯಲು ನಾನು ಹಗಲೂ ರಾತ್ರಿ ಕನಸುತ್ತಿದ್ದೇನೆ. ಆ ಮರಳುಗಾಡನ್ನು ನಾವು ಹೇಗೆ ದಾಟಿದೆವು, ಹೇಗೆ ಚಳಿಯಿಂದ ನಡುಗುತ್ತಿದ್ದೆವು, ಹಸಿವಿನಿಂದ ಎಷ್ಟು ಕಂಗಾಲಾಗಿದ್ದೆವು ಎಂಬುದೆಲ್ಲವನ್ನೂ ಬರೆದಿಡಲು ನಾನು ಹಾತೊರೆಯುತ್ತಿದ್ದೇನೆ. ಇವೆಲ್ಲ ಜನರ ಹೃದಯಗಳಲ್ಲಿ ಮನೆಮಾಡಿಕೊಂಡರೆ ಎಷ್ಟು ಚೆನ್ನ! ನಾನು ನನ್ನ ರಕ್ತದಿಂದ ಬರೆಯುತ್ತಿದ್ದೇನೆ. ಆದರೆ ಯಾರೂ ಅದನ್ನು ಇಷ್ಟಪಡುತ್ತಿಲ್ಲ. ನಾವು ಮೊದಲು ಸ್ವಲ್ಪ ಅಭ್ಯಾಸ ಮಾಡಬೇಕೆನ್ನುತ್ತಾರೆ. ಈ ದಿನಗಳಲ್ಲಿ ಅಭ್ಯಾಸ ಮಾಡುವುದಕ್ಕೆ ಸಮಯವೆಲ್ಲಿದೆ ? ಇವೆಲ್ಲ ನನ್ನ ಹೃದಯದಿಂದ ನೇರವಾಗಿ ಬರುತ್ತಿವೆ'' ಎನ್ನುತ್ತಾಳೆ ಆಕೆ.

''ನಿನ್ನ ಕಾವ್ಯವನ್ನು ನನಗೆ ಓದಿ ಹೇಳು'' ಎಂದು ಆತನೆಂದಾಗ, ''ನಿನಗೆ ಇವು ಅರ್ಥವಾಗುವುದಿಲ್ಲ. ನಿನ್ನದು ಶ್ರೀಮಂತರ ರಕ್ತ. ಪುಸಕಲಾದದ್ದು. ಹೂವು, ಪ್ರೇಮ ಇವುಗಳ ಮೇಲಷ್ಟೇ ಬರೆಯಬೇಕು ನಿನಗೆ. ನಾನು ಬಡಜನರ ಬಗ್ಗೆ ಬರೆಯುತ್ತೇನೆ. ಕ್ರಾಂತಿಯ ಕುರಿತು ಬರೆಯುತ್ತೇನೆ'' ಎನ್ನುತ್ತಾಳೆ ವಿಷಾದದಿಂದ. ಬಡವರ ಪ್ರತಿಭೆ ಹೊರಹೊಮ್ಮಲು ಇರುವ ತಡೆಯನ್ನು ಈ ಮಾತುಗಳಿಂದ ಸಮರ್ಥಿಸುತ್ತಾಳೆ : ''ಬಹುಶಃ, ನಿನ್ನ ಅಪ್ಪ ನಿನಗೆ ಇಪ್ಪತ್ತು ವರ್ಷಗಳಾಗುವವರೆಗೂ ಮನೆಯಲ್ಲೇ ಪಾಠ ಹೇಳಿಕೊಡುವ ಶಿಕ್ಷಕರನ್ನು ಗೊತ್ತು ಮಾಡಿದ್ದರೆಂದು ಕಾಣುತ್ತದೆ. ಆದರೆ ನಾನು ಎಲ್ಲವನ್ನೂ ಸ್ವತಃ ಕಲಿತೆ.''

''ನಿನ್ನ ಕವನಗಳಲ್ಲಿ ಭಾವನೆಗಳಿವೆ; ಒಪ್ಪವಿಲ್ಲ'' ಎಂದು ಆತನೆಂದಾಗ ''ಎಲ್ಲರೂ ಹಾಗನ್ನುತ್ತಾರೆ. ಅದಕ್ಕೆ ಒಪ್ಪ ನೀಡುವುದು ಹೇಗೆ ? ನೀವು ಪುಸ್ತಕ ಓದಿ ತಿಳಿದವರು; ನನಗೆ ಹೇಳಿಕೊಡುವಿರಾ ?'' ಎಂದು ಭಾವೋದ್ರಿಕ್ತಳಾಗಿ ಕೇಳುತ್ತಾಳೆ. ''ಈ ಯುದ್ಧ ಮುಗಿದ ಮೇಲೆ ನಾನು ಕಾವ್ಯ ರಚಿಸಲು ಹೇಳಿಕೊಡುವ ಶಾಲೆಗೆ ಹೋಗುತ್ತೇನೆ'' ಎಂದೂ ಹೇಳುತ್ತಾಳೆ.

ಕೊನೆಗೂ ಯೆವ್‌ಸ್ಯುಕೋವ್ ಈ ಖೈದಿಯನ್ನು ಇನ್ನಿಬ್ಬರೊಡನೆ ಮರ್ಯೂತ್ಕಳ ಬೆಂಗಾವಲಿನಲ್ಲಿ ದೋಣಿಯೊಂದರಲ್ಲಿ ತಮ್ಮ ಕೇಂದ್ರ ಕಚೇರಿಗೆ ಕಳುಹಿಸಿದನು. ಆತನಿಂದ ವಶಪಡಿಸಿಕೊಂಡಿದ್ದ ಕಾಗದಪತ್ರಗಳನ್ನೂ ವರದಿಯನ್ನೂ, ಕ್ಯಾನವಾಸ್ ಚೀಲದಲ್ಲಿ ಹಾಕಿ ಹೊಲಿದು ಮರ್ಯೂತ್ಕಳ ಕೈಯಲ್ಲಿಟ್ಟು ಕೊನೆಯ ಎಚ್ಚರಿಕೆಯನ್ನೂ ನೀಡಿದನು : ''ಈ ಅಧಿಕಾರಿಯನ್ನು ಎಂದಿಗೂ ತಪ್ಪಿಸಿಕೊಂಡು ಹೋಗಲು ಬಿಡಬೇಡ. ದಾರಿಯಲ್ಲಿ ಶ್ವೇತದಳದವರೇನಾದರೂ ಕಣ್ಣಿಗೆ ಬಿದ್ದಲ್ಲಿ ಇವನನ್ನು ಜೀವಂತವಾಗಿ ಬಿಡಬೇಡ !''

ದೋಣಿಯಲ್ಲಿ ಸಮುದ್ರ ದಾಟುವಾಗ ಬಿರುಗಾಳಿಗೆ ಸಿಲುಕಿದ ದೋಣಿಯ ಹಾಯಿ ಹರಿದು ದೋಣಿಯು ಸಮುದ್ರ ತೀರದಲ್ಲಿ ಬಂದುನಿಂತಾಗ ಅದರಲ್ಲಿದ್ದವರು ಮರ್ಯೂತ್ಕ ಮತ್ತು ಆ ಲೆಫ್ಟಿನೆಂಟ್ ಮಾತ್ರ. ಉಳಿದಿಬ್ಬರು ನೀರುಪಾಲಾಗಿದ್ದರು.



ಅದೊಂದು ದ್ವೀಪವಾಗಿತ್ತು. ಬೇಸಿಗೆಯಲ್ಲಿ ಜನರು ಅಲ್ಲಿಗೆ ಬಂದು ಮೀನು ಹಿಡಿದು ಶೇಖರಿಸಿ ತಾವು ಕೊಂಡೊಯ್ಯಲಾಗದೆ ಉಳಿದ ಮೀನನ್ನು ಅಲ್ಲೇ ಶೆಡ್ಡುಗಳಲ್ಲಿ ಶೇಖರಿಸಿ ಹೋಗುತ್ತಿದ್ದರು. ಇಂತಹ ಒಂದು ಶೆಡ್ಡಿನಲ್ಲಿ ದೀಪದ ಬದಲಿಗೆ ಮೀನನ್ನು ಉರಿಸುತ್ತಾ ಮೀನನ್ನೇ ಆಹಾರವಾಗಿ ತಿನ್ನುತ್ತಾ ಆ ಹಾದಿಯಾಗಿ ಬರುವ ಯಾವುದೇ ಒಂದು ದೋಣಿಗಾಗಿ ಅವರು ಕಾಯತೊಡಗಿದರು. ಅಂತಹ ಒಂದು ದಿನ ಲೆಫ್ಟಿನೆಂಟನು ಕಾಯಿಲೆ ಬಿದ್ದನು. ''ಮನೆಯಲ್ಲಿ ಇವನನ್ನು ಬಾಳೆ ಹಣ್ಣಿನ ಗುಡಾಣದಲ್ಲಿ ಬೆಳೆಸಿರಬೇಕು. ಎಂತಹ ಜೀವನ ಇವರದು ?'' ಎಂಬುದು ಆಗಿನ ಆಕೆಯ ಪ್ರತಿಕ್ರಿಯೆ.

ಆತನು ಜ್ವರದ ಕಾವಿನಲ್ಲಿ ಏನೇನೋ ಹರಟತೊಡಗಿದಾಗ ದುಃಖಿತಳಾದ ಆಕೆ ಅವನ ಸೇವೆ ಮಾಡತೊಡಗಿದಳು. ಇವನನ್ನು ಜೀವಂತವಾಗಿ ಕೇಂದ್ರ ಕಚೇರಿಗೆ ತಲುಪಿಸುವುದೂ ಅವಳ ಜವಾಬ್ದಾರಿಯಾಗಿತ್ತು. ಅವನ ನೀಲಿಗಣ್ಣುಗಳತ್ತ ನೋಡಿದಾಗ ಕರುಣೆ ಅವಳ ಹೃದಯವನ್ನು ಇರಿಯುತ್ತದೆ. ಕರ್ತವ್ಯ ಪಾಲನೆ ಒಂದೆಡೆಯಾದರೆ, ವೈರಿಯಲ್ಲಿ ಪ್ರೇಮಾಂಕುರ ಇನ್ನೊಂದೆಡೆ. ಎಂಟು ದಿನಗಳವರೆಗೆ ಎಚ್ಚರವಿಲ್ಲದೆ ಬಿದ್ದಿದ್ದ ಅವನ ಸೇವೆ ಮಾಡಿ ಅವನನ್ನು ಬದುಕಿಸುತ್ತಾಳೆ. ಅವನು ಹೀಗೆ ಪುನರ್ಜನ್ಮ ಪಡೆದಾಗ ಅವಳು ಅವನಲ್ಲಿ ಗಾಢವಾಗಿ ಅನುರಕ್ತಳಾಗಿರುತ್ತಾಳೆ, ತನ್ನದೆಲ್ಲವನ್ನೂ ಅವನಿಗಾಗಿ ತ್ಯಾಗ ಮಾಡುವಷ್ಟು. ಅವನು ಸಿಗರೇಟು ಸೇದಬೇಕೆಂದು ಬಯಸಿದಾಗ, ''ಸಿಗರೇಟು ಸೇದುವವರಿಗೆ ಕಾಯಿಲೆಯಾದ ಮೇಲೆ ಸೇದುವ ಚಟ ಅಧಿಕವಾಗುತ್ತದೆ. ಸೆಮ್ಯಾನ್ನಿ (ಮುಳುಗಿದ ಸೈನಿಕ) ಯ ಚೀಲದಲ್ಲಿದ್ದ ಹೊಗೆಸೊಪ್ಪು ಒಣಗಿಸಿಟ್ಟಿದ್ದೇನೆ. ತಗೋ'' ಎನ್ನುತ್ತಾ ಅವನಿಗೆ ನೀಡುತ್ತಾಳೆ. ಹೊಗೆಸೊಪ್ಪು ಸುತ್ತಲು ಕಾಗದವಿಲ್ಲವೆಂದಾಗ ಕೊಂಚ ಹೊತ್ತು ಯೋಚಿಸುತ್ತಿದ್ದ ಆಕೆ ತನ್ನ ಜೇಬಿನಿಂದ ತನ್ನ ಕವನದ ಕೆಲವು ಹಾಳೆಗಳನ್ನೇ ಆತನಿಗೆ ನೀಡುತ್ತಾಳೆ ! ತನ್ನ ಪ್ರಾಣಕ್ಕಿಂತ ಪ್ರಿಯವಾದ ಕವನಗಳ ಹಾಳೆಗಳನ್ನು ಆತನಿಗೆ ಹೊಗೆಸೊಪ್ಪು ಸುತ್ತಿ ಸಿಗರೇಟು ಸೇದಲು ನೀಡುತ್ತಾಳೆ !

''ನಿನ್ನ ಕಡುನೀಲಿ ಕಣ್ಣುಗಳು ಹೆಂಗಸರಿಗೆ ಅಪಾಯಕಾರಿ. ಅದು ಅವರನ್ನು ವಿಚಲಿತಗೊಳಿಸುತ್ತವೆ'' ಎಂದು ಆಕೆಯೆಂದಾಗ, ''ನಿನ್ನನ್ನೂ ವಿಚಲಿತಗೊಳಿಸುತ್ತವೆಯೇ ?'' ಎಂದು ಆತ ಕೇಳಿದಾಗ ಉತ್ತರ ನೀಡದೆ ಹೊರಟು ದೂರದಿಂದ, ''ತುಂಟ, ನೀಲಿಗಣ್ಣಿನ ತುಂಟ ನೀನು'' ಎಂದಾಕೆ ನುಡಿಯುತ್ತಾಳೆ.

ಮರುದಿನ ಅವರು ಅಲ್ಲಿಂದ ತಮ್ಮ ವಸತಿಯನ್ನು ಇನ್ನೊಂದೆಡೆಗೆ ಬದಲಾಯಿಸಿದಾಗ ಒಂಟೆಯಂತೆ ಮೂಟೆಗಳನ್ನೆಲ್ಲಾ ಅವಳೇ ಹೊತ್ತುಕೊಂಡು ನಡೆದಳು. ಆತನಿಂದ ಮೂಟೆ ಹೊರಿಸಲಿಲ್ಲ.

ವಸಂತಕ್ಕಾಗಿ, ಮೀನುಗಾರರಿಗಾಗಿ ಆ ನಿರ್ಜನ ದ್ವೀಪದಲ್ಲಿ ಅವರು ದಿನಗಳೆಯುತ್ತಿದ್ದಾಗ ರಾತ್ರಿಗಳಲ್ಲಿ ಆಕೆ ಆತನಿಂದ ಕಥೆಗಳನ್ನು ಹೇಳಿಸಿ ಕೇಳುತ್ತಿದ್ದಳು. ಕತೆಗಳೆಂದರೆ ಆಕೆಗೆ ತುಂಬಾ ಇಷ್ಟ. ಆತನು ರಾಬಿನ್ಸನ್ ಕ್ರೂಸೊ ಕತೆ ಪ್ರಾರಂಭಿಸುತ್ತಾ, ''ಇಂಗ್ಲೆಂಡಿನಲ್ಲಿ ಒಬ್ಬ ಶ್ರೀಮಂತ ವಾಸವಾಗಿದ್ದ...'' ಎನ್ನುತ್ತಿದ್ದಂತೆ ಆಕೆ,

''ತಾಳು, ಯಾಕೆ ಕತೆಗಳೆಲ್ಲ ಶ್ರೀಮಂತರು, ರಾಜಕುಮಾರರು, ರಾಜಕುಮಾರಿಗಳು ಇವರ ಬಗೆಗೇ ಇರುತ್ತವೆ ? ಯಾಕೆ ಅವರು ಬಡ ಜನರ ಬಗೆಗೆ ಕಥೆಗಳನ್ನು ಬರೆದಿಲ್ಲ ?'' ಎಂದು ಕೇಳುತ್ತಾಳೆ. ''ನಾನು ಅದರ ಬಗ್ಗೆ ಎಂದೂ ಯೋಚಿಸಿಲ್ಲ'' ಎನ್ನುತ್ತಾನೆ ಅವನು.

''ಯಾಕೇಂದ್ರೆ ಶ್ರೀಮಂತರೇ ಕತೆಗಳನ್ನು ಬರೆದಿರಬೇಕು. ಇದೆಲ್ಲ ಒಂದೇ. ನನ್ನಂತೆಯೇ. ನಾನೂ ಕಾವ್ಯ ಬರೆಯಬೇಕು ಅಂತ ಇಷ್ಟಪಡುತ್ತೇನೆ. ಆದರೆ ನನಗೆ ಅದಕ್ಕೆ ಬೇಕಾದ ಕಲಿಕೆ ಇಲ್ಲ. ಇದ್ದಿದ್ದರೆ ನಾನು ಬಡಜನರ ಬಗ್ಗೆ ಕಾವ್ಯ ಬರೆಯುತ್ತಿದ್ದೆ. ಯಾವತ್ತಾದರೊಂದು ದಿನ ನಾನೂ ಕಲಿತುಕೊಳ್ಳೇನೆ. ಆಮೇಲೆ ನಾನೂ ಬರೆಯುತ್ತೇನೆ.'' ಮಾತನಾಡುತ್ತಾ ಆಕೆ ಅವನ ತಲೆಗೂದಲು ನೇವರಿಸಿದಳು. ಅವನ ದೃಷ್ಟಿ ಅವಳತ್ತ ತಿರುಗಿದಾಗ, ಆ ನೀಲಿ ಕಣ್ಣುಗಳ ಆಳದಲ್ಲಿ ಕೋಮಲತೆಯ ಕಿಡಿ ಕೂಡಿ ಮರ್ಯೂತ್ಕಳ ಹೃದಯ ಹೊಕ್ಕಿತು. ಆಕೆ ದಿಗ್ಭ್ರಾಂತಳಾಗಿ ಅವನತ್ತ ಬಾಗಿ ಅವನ ಒಣಗಿದ ಕೆನ್ನೆಗೆ ತುಟಿಯೊತ್ತಿದಳು.

ಮರ್ಯೂತ್ಕಳು ಗುಂಡು ಹೊಡೆದವರ ಪಟ್ಟಿಯಲ್ಲಿ ಗೊವೊರೂಹ ಓತ್ರೊಕ್ ನಲವತ್ತೊಂದನೆಯವನಾಗಬೇಕಿತ್ತು. ಆದರೆ ಅವನೀಗ ಅವಳಿಗೆ ಆನಂದ ನೀಡುವವರ ಪಟ್ಟಿಯಲ್ಲಿ ಮೊದಲಿಗನಾದ. ಈಗವಳಿಗೆ ಆತ ಬದುಕಿನ ಜ್ಯೋತಿಯಾದ. ಆ ನಿರ್ಜನ ದ್ವೀಪವೇ ಆಕೆಯ ಇಡೀ ಪ್ರಪಂಚವಾಗಿ ರೂಪುಗೊಂಡಿತ್ತು. ಸಮುದ್ರದಾಚೆಯ ಜನರಾಗಲಿ, ಯಾವುದೇ ಸುಖ ಸೌಲಭ್ಯಗಳಾಗಲಿ, ಆಕೆಗೆ ಗೌಣ. ಆತನ ನೀಲಿ ಕಣ್ಣುಗಳಲ್ಲಿ ಆಕೆ ಪೂರ್ತಿ ಮುಳುಗಿದಳು. ಆತನೂ ಕೂಡ ಆಕೆಯಂತೆಯೇ ತನ್ನ ಭಾವನೆಗಳನ್ನು ವ್ಯಕ್ತಪಡಿಸುತ್ತಾನೆ.

ಆದರೆ ಮರ್ಯೂತ್ಕ ಎಂದೂ ಕರ್ತವ್ಯದಿಂದ ಪೂರ್ತಿ ವಿಮುಖಳಾಗುವುದಿಲ್ಲ. ಆಕೆಯ ಮನದ ಒಂದು ಭಾಗ ಕರ್ತವ್ಯ ಪ್ರಜ್ಞೆಯಿಂದ ತುಡಿಯುತ್ತಲೇ ಇರುತ್ತದೆ. ''ಅಗ್ಗಿಷ್ಟಿಕೆಯ ಬೆಚ್ಚನೆಯ ಬಡುವಿನ ಮೇಲೆ ಮೈಚಾಚಿಕೊಂಡಿರಲು ಇದು ಕಾಲವಲ್ಲ. ನಮ್ಮ ಜನ ಅಲ್ಲಿ ಹೋರಾಡುತ್ತಾ ರಕ್ತ ಸುರಿಸುತ್ತಿದ್ದಾರೆ. ಪ್ರತಿಯೊಬ್ಬರ ಪ್ರಯತ್ನವೂ ಅವಶ್ಯವಾಗಿದೆ. ಇಂತಹ ಸಮಯದಲ್ಲಿ

ನಾನು ಹೇಗೆ ಹಿಂದೆ ನಿಂತು ಆನಂದಿಸಲು ಸಾಧ್ಯ ? ನಾನು ಕೆಂಪು ಸೈನ್ಯದ ಪ್ರಮಾಣ ವಚನ ಸ್ವೀಕರಿಸಿರುವುದು ಇದಕ್ಕೇನಲ್ಲ'' ಅವಳು ಸೈನ್ಯಕ್ಕೆ ಹಿಂತಿರುಗುವಳೆಂದರಿತ ಲೆಫ್ಟಿನೆಂಟನು,

''ಈ ರಕ್ತಪಾತವನ್ನು ಕಂಡು ನನ್ನ ಮನಸ್ಸು ರೋಸಿ ಹೋಗಿದೆ. ಯುದ್ಧಕ್ಕೆ ಮುನ್ನ ವಿದ್ಯಾರ್ಥಿಯಾದ ನಾನು ಎಂದಿಗೂ ದ್ರೋಹ ಬಗೆಯದಂತಹ ಪ್ರೀತಿಪಾತ್ರ ಪುಸ್ತಕಗಳ ಮಧ್ಯೆ ಜೀವಿಸುತ್ತಿದ್ದೆ. ನನ್ನ ಬಳಿ ಬಹಳ ಪುಸ್ತಕಗಳಿದ್ದುವು'' ಎನ್ನುತ್ತಾ ತನ್ನ ತಂದೆ ತನ್ನನ್ನು ಯುದ್ಧಕ್ಕೆ ಹೋಗಲು ಹುರಿದುಂಬಿಸಿದ್ದನ್ನು ಹೇಳಿದನು. ಅದಕ್ಕೆ ಮರ್ಯೂತ್ಕ,

''ನನ್ನ ಮುದುಕ ಅಪ್ಪ ಕುಡಿದಿದ್ದಾಗ ಗೋಡೆಗೆ ತಲೆ ಚಚ್ಚಿಕೊಂಡನೆಂದು ನಾನೂ ಹಾಗೆ ಮಾಡಬೇಕೇ ?'' ಎಂದು ಕೇಳುತ್ತಾಳೆ.



''ಮನೆತನದ ಖ್ಯಾತಿಯ, ಕುಟುಂಬ ಗೌರವದ ಭಾರವನ್ನು ನೀನೆಂದೂ ಹೊರಬೇಕಾಗಿರಲಿಲ್ಲ'' ಎನ್ನುತ್ತಾನೆ ಲೆಫ್ಟಿನೆಂಟ್. ''ನಾನು ಯುದ್ಧಕ್ಕೆ ಸೇರಿದೆ. ನನ್ನ ಮಾನವೀಯ ಹೃದಯವನ್ನು ನನ್ನ ಕೈಗಳಿಂದಲೇ ಆ ಕೊಳೆತಿದ್ದ ಕುಪ್ಪೆಯೊಳಕ್ಕೆ, ಆ ಸಾರ್ವತ್ರಿಕ ಮಸಣ ಭೂಮಿಯೊಳಕ್ಕೆ ಮುಳುಗಿಸಿದೆ. ಕ್ರಾಂತಿ ಬಂದಾಗ ನನಗೆ ಸಂತೋಷವಾಯಿತು'' ಎನ್ನುತ್ತಾ, ಕ್ರಾಂತಿಯ ಕುರಿತು ತನ್ನ ಭ್ರಮನಿರಸನವನ್ನೂ ತಿಳಿಸುತ್ತಾನೆ. ''ಮಾತೃದೇಶಕ್ಕಾಗಿ ಹೋರಾಡಿದಾಗ ಮಾತೃದೇಶವೂ ಕ್ರಾಂತಿಯಂತೆಯೇ ಬರಡಾದುದು. ಎರಡೂ ರಕ್ತಪಾತವನ್ನು ಇಷ್ಟಪಡುತ್ತವೆ'' ಎನ್ನುತ್ತಾ, ''ವಾಸ್ತವಿಕವಾದ ಏಕೈಕ ಮಾತೃಭೂಮಿ ಚಿಂತನೆ, ಈಗಲೂ ನಾನು ಇಚ್ಛಿಸುವುದೆಲ್ಲ ನನ್ನ ಪುಸ್ತಕಗಳ ಬಳಿಗೆ ಹಿಂತಿರುಗುವುದು; ಅವುಗಳ ಮಧ್ಯದಲ್ಲಿ ಮುಳುಗಿಹೋಗುವುದು. ಅವುಗಳ ಕ್ಷಮೆ ಕೇಳುವುದು; ಅವುಗಳೊಂದಿಗೆ ಜೀವಿಸತೊಡಗುವುದು.''

ಮನುಷ್ಯರ ಬದುಕಿನ ಇಂತಹ ಸನ್ನಿವೇಶಗಳು ನಮ್ಮ ಮನ ಕಲಕುತ್ತವೆ. ಪುಸ್ತಕಗಳೊಂದಿಗೆ ಜೀವಿಸಬಯಸುವ ಆತನು ಓರ್ವ ಬುದ್ಧಿಜೀವಿ. ಆಕೆಯ ಪ್ರತಿಭೆಯೂ ಹೊರಹೊಮ್ಮಲವಕಾಶ ದೊರೆಯದೆ ಮುರುಟಿಹೋಗುತ್ತಿದೆ. ಇಬ್ಬರೂ ಕರ್ತವ್ಯದ ಕರೆಗೆ ಓಗೊಟ್ಟವರು; ಪರಸ್ಪರ ಶತ್ರುಗಳು. ಆದರೆ ಈ ನಿರ್ಜನವಾದ ದ್ವೀಪದಲ್ಲಿ ಒಬ್ಬರನ್ನೊಬ್ಬರು ಪ್ರೀತಿಸತೊಡಗುತ್ತಾರೆ !

ಏನನ್ನೋ ಬಯಸುತ್ತಾ, ಇನ್ನಾವ ರೀತಿಯಲ್ಲೋ ಬದುಕಲು ಮಾನವನನ್ನು ಇಂತಹ ಪರಿಸ್ಥಿತಿಗೆ ತಳ್ಳಿದ ಜಗತ್ತಿನ ಈ ವ್ಯವಸ್ಥೆಯ ಕುರಿತು ಜಗತ್ತಿನ ಮಹಾನಾಯಕರು ಚಿಂತಿಸಿದ್ದರೆ ?

ಆದರೆ ಮರ್ಯೂತ್ಕಳೆಂದೂ ಮೈಮರೆತು ಪ್ರೀತಿಸುವುದಿಲ್ಲ. ಆತ ಈ ಮಾತುಗಳನ್ನೆಂದಾಗ ಆಕೆಯ ಕರ್ತವ್ಯಪ್ರಜ್ಞೆ ಜಾಗೃತಗೊಳ್ಳುತ್ತದೆ. ''ಜಗತ್ತು ಇಬ್ಭಾಗವಾಗಿ ಒಡೆಯುತ್ತಿದೆ; ಜನ ನ್ಯಾಯಕ್ಕಾಗಿ ಹೋರಾಡುತ್ತಿದ್ದಾರೆ, ರಕ್ತ ಚೆಲ್ಲುತ್ತಿದ್ದಾರೆ. ಮತ್ತೆ ನೀನು ಮೆತ್ತೆಯ ಮೇಲೆ ಮುದುಡಿ ಕುಳಿತು ಪುಸ್ತಕಗಳನ್ನು ಓದಬಯಸುತ್ತೀಯಾ ?'' ಎನ್ನುತ್ತಾಳೆ.

''ಈ ಜಗತ್ತು ಇಬ್ಭಾಗವಾಗಿ ಒಡೆಯುತ್ತಲೇನೋ ಇದೆ. ಅದು ಕೊಳೆತಿದೆ. ಚೂರು ಚೂರಾಗಿ ಕುಸಿದುಬೀಳುತ್ತಿದೆ. ಅದು ಬರಿದಾಗಿದೆ. ಅದರೊಳಗೆ ಕರುಳೇ ಇಲ್ಲ. ಒಂದು ಕಾಲದಲ್ಲಿ ಅದು ಯೌವನದಿಂದ ಕೂಡಿತ್ತು. ಫಲವತ್ತಾಗಿತ್ತು. ಹೊಸ ಭೂಮಿಗಳನ್ನೂ ಹೊಸ ಸಂಪತ್ತುಗಳನ್ನೂ ಕಂಡುಹಿಡಿಯುವ ಆಕರ್ಷಣೆ ಇದ್ದಿತ್ತು. ಅವೆಲ್ಲ ಈಗ ಮುಗಿದು ಹೋಗಿದೆ. ಇರುವುದನ್ನೇ ಉಳಿಸಿಕೊಳ್ಳುವುದಕ್ಕಾಗಿ, ಮಾನವನ ಅಸ್ತಿತ್ವವನ್ನೇ ಉಳಿಸಿಕೊಳ್ಳುವುದಕ್ಕಾಗಿ ಬುದ್ಧಿವಂತಿಕೆ ಖರ್ಚುಮಾಡಬೇಕಾಗಿದೆ. ಯಂತ್ರಗಳು ನಿರ್ಜೀವ ಸಂಖ್ಯೆಗಳು. ಈ ಸಂಖ್ಯೆಗಳಿಂದ ಬರಡುಗೊಳಿಸಲ್ಪಟ್ಟ ಚಿಂತನೆ ಮಾನವ ಜೀವಿಗಳನ್ನು ಹೇಗೆ ನಾಶಗೊಳಿಸಬೇಕು ಎಂಬ ಸಮಸ್ಯೆಗಳ ಮೇಲೆ ಕೇಂದ್ರೀಕೃತವಾಗಿರುತ್ತದೆ. ನಾವು ಮಾನವ ಜೀವಿಗಳನ್ನು ನಾಶಗೊಳಿಸುತ್ತಾ ಹೋದಂತೆ ನಮ್ಮ ಹೊಟ್ಟೆ, ಜೇಬುಗಳು ಅಷ್ಟೂ ಹೆಚ್ಚು ದಪ್ಪವಾಗುತ್ತವೆ'' ಎನ್ನುತ್ತಾ ಬೋಲ್ಶೆವಿಕರ ಕುರಿತೂ ಹೇಳುತ್ತಾನೆ : ''ಜೀವಂತ ಮಾನವ ಆತ್ಮವನ್ನು ಹೊರಗಟ್ಟಿ ಅದರ ಸ್ಥಳದಲ್ಲಿ ವಸತಿ ಹಾಗೂ ಪಡಿತರ ಚೀಟಿಗಳನ್ನು ಸ್ಥಾಪಿಸುವುದು ತಾನೆ ? ನನ್ನ ಕೈಗಳನ್ನು ಇನ್ನೆಷ್ಟು ಮಾತ್ರವೂ ಮಲಿನಗೊಳಿಸಿಕೊಳ್ಳಲಾರೆ. ನಾನು ಇಲ್ಲಿಂದ ನಿರ್ಗಮಿಸುವೆ.''

ಆತನು ಆಕೆಗೆ ಸುಂದರವಾದ ಬದುಕು ನೀಡುವ ವಾಗ್ದಾನವೀಯುವನು. ಅಧ್ಯಯನದ ಆಮಿಷವೊಡ್ಡುವನು. ಈ ಯುದ್ಧದಿಂದ ದೂರ ಹೋಗಿ ಮನಃಶಾಂತಿ ಪಡೆಯಲು ಹಂಬಲಿಸುವನು.

ಆದರೆ ಆತ ಕರ್ತವ್ಯದಿಂದ ವಿಮುಖನಾಗುವ ಮಾತನಾಡಿದರೆ ಮರ್ಯೂತ್ಕ ಎಂದೂ ಸಹಿಸಳು. ''ಜನ ನ್ಯಾಯಕ್ಕಾಗಿ ರಕ್ತ ಸುರಿಸುತ್ತಿರುವಾಗ ನಾನು ನಿನ್ನ ಪಕ್ಕದಲ್ಲಿ ತುಪ್ಪಳದ ಹಾಸಿಗೆಯಲ್ಲಿ ಮಲಗಿರಬೇಕೇ ? ಬೇರೆ ಯಾರದೋ ರಕ್ತ ಸುರಿಸಿಕೊಂಡು ತಂದ ಚಾಕೊಲೇಟಿನಿಂದ ನನ್ನ ಹೊಟ್ಟೆ ತುಂಬಿಸಿಕೊಳ್ಳುವುದೋ ? ಇದನ್ನೇ ತಾನೇ ನೀನು ಬಯಸುವುದು ?'' ಆತ ಬೋಲ್ಶೆವಿಕ್‌ರನ್ನು ದೂರಿದ್ದಕ್ಕಾಗಿ ಆಕೆಗೆ ಅಸಾಧ್ಯ ಕೋಪ ಬಂದುಬಿಡುತ್ತದೆ. ''ನೀನೊಬ್ಬ ಬೆನ್ನೆಲುಬಿಲ್ಲದ ಪ್ರಾಣಿ. ಹಾಸಿಗೆಯಲ್ಲಿ ಮಲಗಿ ನೆಮ್ಮದಿಯಾದ ಶಾಂತ ಜೀವನ ನಡೆಸುವುದಕ್ಕೆ ಲಾಯಕ್ಕಾದವನು. ಇತರ ಜನರು ನವ ಜಗತ್ತನ್ನು ನಿರ್ಮಿಸಲೋಸುಗ ಬರಿ ಕೈಗಳಿಂದಲೇ ನೆಲ ಉಳುತ್ತಿದ್ದಾರೆ. ನೀನೊಬ್ಬ ಹಾದರಕ್ಕೆ ಹುಟ್ಟಿದವ !'' ಎಂದು ಬೈದುಬಿಡುತ್ತಾಳೆ.

ಆದರೆ ಆ ನಿರ್ಜನ ದ್ವೀಪದಲ್ಲಿ ಪುನಃ ಅವರು ರಾಜಿಯಾಗುತ್ತಾರೆ. ಇಬ್ಬರ ಚಿಂತನೆಗಳೂ ಬೇರೆ ಬೇರೆ. ಈಗ ಅವನಿಗೂ ಬುದ್ಧಿ ಬಂದಿರುತ್ತದೆ. ಅವನೆನ್ನುತ್ತಾನೆ, ''ನನಗೆ ಪಾಠ ಕಲಿಸಿದ್ದಕ್ಕಾಗಿ ನಿನಗೆ ವಂದನೆಗಳು. ಇಂತಹ ಕಾಲದಲ್ಲಿ ಪುಸ್ತಕಗಳ ಮಧ್ಯೆ ಮುಳುಗಿಕೊಂಡು ನಮ್ಮ ಈ ಭೂಮಿಯನ್ನು ಇತರರ ಪ್ರಭಾವಕ್ಕೆ ಸಂಪೂರ್ಣವಾಗಿ ಬಿಟ್ಟುಕೊಟ್ಟಲ್ಲಿ ಅದಕ್ಕಾಗಿ ಭಾರಿ ದಂಡ ತೆರಬೇಕಾಗುತ್ತದೆ. ಸಂಸ್ಕೃತಿಯ ವಿರುದ್ಧ ಸಂಸ್ಕೃತಿ ಇರುವುದರಿಂದ ಇದರ ಕೊನೆಯವರೆಗೂ ನೋಡಬೇಕಾಗಿದೆ...''

ಹೇಳುತ್ತಿದ್ದಂತೆ ದೂರ ದಿಗಂತದಲ್ಲಿ ಹಡಗಿನ ಹಾಯಿಯೊಂದು ಗೋಚರಿಸಿತು. ತಮ್ಮ ಬಿಡುಗಡೆ ಸಮೀಪಿಸಿತೆಂದು ಇಬ್ಬರೂ ಆನಂದತುಂದಿಲರಾದರು. ಲೆಫ್ಟಿನೆಂಟನಿಗೆ ದೋಣಿಯಲ್ಲಿದ್ದವರ ಗುರುತು ಸಿಕ್ಕಿತು. ತಮ್ಮವರೇ; ಶ್ವೇತ ದಳದವರು ! ಆತನು ಬಂದೂಕನ್ನು ಕೆಳಗೆ ಹಾಕಿ ಸಮುದ್ರದೆಡೆಗೆ ಧಾವಿಸುತ್ತಾನೆ.

ಒಂದೇ ಒಂದು ಕ್ಷಣ. ಆಕೆ ಪಕ್ಷಿಯಂತೆ ತತ್ತರಿಸುತ್ತಾಳೆ. ಯೆವ್‌ಸ್ಯೂಕೋವ್‌ನ ಮಾತುಗಳು ನೆನಪಾಗುತ್ತವೆ. 'ನೀನೇನಾದರೂ ಶ್ವೇತ ದಳದವನ ಕೈಗೆ ಸಿಕ್ಕಿಬಿದ್ದರೆ ಇವನನ್ನು ಜೀವಂತವಾಗಿ ಅವರಿಗೆ ಒಪ್ಪಿಸಬೇಡ.'

ಆಕೆ ತುಟಿಕಚ್ಚಿ ಬಂದೂಕವನ್ನು ಕೈಗೆತ್ತಿಕೊಂಡಳು. ''ಹಿಂದೆ ಬಾ, ಹಾಳಾದ ಶ್ವೇತ ದಳದವನೇ'' ಎಂಬ ಆಕೆಯ ಕೂಗು ಆತನ ಕಿವಿ ತಲುಪುವುದೇ ಇಲ್ಲ. ಆತನ ಬೆನ್ನಿನ ಕಡೆಯಿಂದ ಭಯಂಕರ ಶಬ್ದದೊಂದಿಗೆ ಬಂದೂಕಿನಿಂದ ಗುಂಡುಹಾರುತ್ತದೆ. ಆಕೆಯ ಕೈ ಲವಲೇಶವೂ ನಡುಗುವುದಿಲ್ಲ; ಗುರಿ ತಪ್ಪುವುದಿಲ್ಲ. ಆತನ ತಲೆ ನೀರಿನಲ್ಲಿ ಬಿತ್ತು. ಒಡೆದ ತಲೆಬುರುಡೆಯಿಂದ ರಕ್ತ ಹರಿಯಿತು. ಆಕೆ ಬಂದೂಕನ್ನು ಕೆಳಗೆ ಹಾಕಿ ತನ್ನ ರವಿಕೆಯ ಕಾಲರ್ ಪಟ್ಟಿಯನ್ನು ಹರಿದು ಕಿತ್ತು ಆತನ ದೇಹದ ಮೇಲೆ ಕುಸಿದಳು.

ಆಕೆಯ ಎಲ್ಲ ಆಸೆ, ಆಕಾಂಕ್ಷೆಗಳನ್ನೂ ಪೂರೈಸುವ ಹಾದಿಯನ್ನು ಆತನು ತೋರಿದ್ದನು. ಆತನೊಡನೆ ಸೇರಿಕೊಂಡಿದ್ದರೆ ಆಕೆಯ ಬದುಕು ಬಂಗಾರವಾಗುತ್ತಿತ್ತು. ಆದರೆ ಅಂತಹ ಬದುಕು ಆಕೆಗೆ ಬೇಕಾಗಿರಲಿಲ್ಲ. ತನ್ನ ಜನರು ನೆತ್ತರು ಹರಿಸುತ್ತಿರುವಾಗ, ಅರೆ ಹೊಟ್ಟೆ ಉಣ್ಣುತ್ತಿರುವಾಗ ತಾನು ಸುಪ್ಪತ್ತಿಗೆಯ ಕುರಿತು ಊಹಿಸಲೂ ಸಾಧ್ಯವಾಗದು. ಅದು ಆಕೆಯ ಬದುಕಲ್ಲ; ಆಕೆಯ ಗುರಿಯಲ್ಲ. ಕ್ರಾಂತಿ ಮಾಡಿ ವಿಮೋಚನೆ ಪಡೆದ ಬಳಿಕವಷ್ಟೇ ವಿಶ್ರಾಂತಿ. ಅದು ಆಕೆಯ ಗುರಿ. ಅದಕ್ಕಾಗಿ ಎಂತಹ ಸಂಕಷ್ಟವನ್ನಾದರೂ ಸಹಿಸಬಲ್ಲಳು; ಎದುರಿಸಬಲ್ಲಳು. ಎಂತಹ ತ್ಯಾಗಕ್ಕೂ ಆಕೆ ಸಿದ್ಧಳೇ. ಆತನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಾ ಆತನಿಗಾಗಿ ತನ್ನ ಪ್ರಾಣದಂತೆ ಪ್ರೀತಿಸುತ್ತಿದ್ದ ಕವನದ ಹಾಳೆಗಳನ್ನು ಆತನ ಸಿಗರೇಟಿಗಾಗಿ ನೀಡಿದ್ದಾಳೆ. ಆತನ ಸೇವೆ ಮಾಡಿದ್ದಾಳೆ. ಎಲ್ಲವೂ ಹೌದು. ಆದರೆ ತನ್ನ ಜನರು, ಅವರ ಬದುಕು, ಈ ಕ್ರಾಂತಿ ಇವೆಲ್ಲವೂ ಈ ಪ್ರಿಯಕರನಿಗಿಂತಲೂ ಹಿರಿದು. ಪ್ರಿಯಕರನೊಡನೆ ಬಂಗಾರದ ಬದುಕು; ತನ್ನ ಜನರಿಗಾಗಿ ಮುಂದೆ ತಾನನುಭವಿಸಬೇಕಾದ ಚಿತ್ರಹಿಂಸೆ ಮತ್ತು ಪ್ರಿಯಕರನ ಬಲಿದಾನ. ಈ ಎರಡರಲ್ಲಿ ಆಕೆಯ ಆಯ್ಕೆ ಎರಡನೆಯದೆ; ಮೊದಲಿನದಲ್ಲ!

ಅಬೂಬಕ್ಕರ್
೨/೨೧/೧೬೩೧/೨, ಸೂಕ್ಷ್ಮತರಂಗ ನಿಲಯ ರಸ್ತೆ, ಮಂಗಳೂರು - ೫೭೫ ೦೦೬

# ಹೀಗೂ ಆಗಬಹುದೆ ?

ಬ. ನಾ. ರಘುರಾಮ

ಧಾರವಾಡದ ಮಾಳಮಡ್ಡಿಯ ತನ್ನದೇ ಸ್ವಂತ ಮನೆಯಲ್ಲಿ ಅನಂತ ಪ್ಯಾಟಿ ಕೋಣೆಯಲ್ಲಿ ಕ್ವಿಜ್ ಕಾರ್ಯಕ್ರಮ ನೋಡುತ್ತ ಕುಳಿತಿದ್ದ. ರಾತ್ರಿ ೯.೩೦ ಆಗಿತ್ತು. ಊಟಕ್ಕೆ ಯಾಕೆ ಇನ್ನೂ ಬುಲಾವ್ ಬರ್ತಿಲ್ಲ ಅಂತ ಯೋಚನೆ ಬಂತು. ಇದ್ದಕ್ಕಿದ್ದಂತೆ ಕ್ವಿಜ್ ಕಾರ್ಯಕ್ರಮ ಮಸುಕಾಗುತ್ತ ಟಿ.ವಿ. ಪರದೆ ಆರಿತು. ಟಿ.ವಿ.ಯಿಂದ ಒಂದು ಗುಂಭ-ಗಂಭೀರ ಹಾಗೂ ಶಾಂತ-ಕರುಣಾಪೂರ್ಣ ವಾಣಿ ಹೊಮ್ಮಿತು. ''ಇದು ನಾನು. ಕ್ಷಮಿಸಿ, ನಿಮ್ಮ ಕ್ವಿಜ್ ಕಾರ್ಯಕ್ರಮ ತಡೆಯಬೇಕಾಯ್ತು. ಸೃಷ್ಟಿಯ ಸಕಲ ಯೋಜನೆಗಳು ಕರಾರುವಾಕ್ಕಾಗಿ ತಮ್ಮದೇ ವಿಶೇಷ ನಿಯಮಗಳ ಪ್ರಕಾರ ನಡೆಯುತ್ತಿರುತ್ತವೆ. ಹಾಗೆ ನಡೆಸುವುದು ಅವುಗಳ ಹಕ್ಕು! ಆದರೆ... ನೀವು, ನನ್ನ ಪ್ರೀತಿಯ ಮಕ್ಕಳು – ಸೌರಮಂಡಲದ ಮೂರನೆಯ ಗ್ರಹವಾಸಿಗಳು – ನಿಮ್ಮ ತಲೆಗಳ ಮೇಲೆ ನೀವೇ ಚಪ್ಪಡಿ ಎಳೆದುಕೊಳ್ಳುತ್ತಿರುವುದನ್ನು ಗಮನಿಸುತ್ತ ನಿಷ್ಕ್ರಿಯನಾಗಿ ಇನ್ನೂ ಸುಮ್ಮನೆ ಕುಳಿತರೆ ನನಗೆ ಕ್ಷಮೆ ಇರದು. ಅದಕ್ಕೋಸ್ಕರ ಅಡ್ಡಹಾಯುತ್ತಿರುವೆ, ಮಕ್ಕಳೇ. ಇಂದಿನಿಂದ ಒಂದುವಾರ ಪೂರ್ತ ನಿಮ್ಮೊಡನೆ ಕಳೆಯಲು ಇಚ್ಛಿಸಿರುವೆ. ಶುಭ ರಾತ್ರಿ !''

ಅನಂತ ಗಪ್ಪನೆ ಎದ್ದುನಿಂತ. ಗಡಿಯಾರ ನೋಡಿದ. ೯.೪೦ ಆಗಿತ್ತು. ''ಎಲಾ ಇವನ! ಇದ್ಯಾರಪ್ಪ ಹೀಗೆ ಮಾತಾಡ್ತಿರೋದು ? ಮೇಲಿನ ಕೋಣೆ ಒಳಗೆ ಆ ಶ್ಯಾಮಿ ಏನೋ ಮಂಗಚಾಷ್ಟಿ ಮಾಡತಿರ್ತಾನೆ ತನ್ನ ಮೈಕ್‌ನಿಂದ'' ಎಂದು ಗೊಣಗುತ್ತ ಮಹಡಿ ಹತ್ತಿದ. ಶ್ಯಾಮ ಅಂದರೆ ತನ್ನ ಮುದ್ದುಮಗನ ಕೋಣೆಯೊಳಕ್ಕೆ ಕಾಲಿಡುತ್ತ, ''ಏನ್ ನಡಸೀಯೋ, ಶ್ಯಾಮಿ ! ಆ ಟಿ.ವಿ. ಪಿಕ್ಚರ್ ಆರಿಹೋಗಿ ಏನೇನೋ ಬಡಬಡಸ್ತಾ ಅದೆ.'' ಶ್ಯಾಮ, ಒಂದು ಕಾಲು ಕುರ್ಚಿಯ ಕೈಮೇಲೆ, ಇನ್ನೊಂದು ಮೇಜಿನ ಮೇಲೆ ಹಾಕ್ಕೊಂಡು, ವಕ್ರಮುಸುಡಿ ಮಾಡಿಕೊಂಡು ತಲೆಕೆರೆದುಕೊಳ್ಳುತ್ತ ಕುಳಿತಿದ್ದವನು, ''ನಾ ಏನ್ ಮಾಡಿದೆ, ಅಪ್ಪಾ! ಈ ಸುಡುಗಾಡು ಆಲ್‌ಜೀಬ್ರಾ ಪ್ರಾಬ್ಲಮ್ಮು ಬಿಡ್ಸಲಿಕ್ಕಾಗತಾನೆ ಇಲ್ಲ!'' ''ಅಲ್ಲೋ ಹಾಗಾದ್ರೆ ಆ ಟಿ.ವಿ. ಯಾಕೆ ಹಾಗ್ಮಾಡ್ತಾ ಅದೆ ?'' ''ನಂಗೇನ್ ಗೊತ್ತು. ಅದು ಲಡಕಾಸಿ ಆಗ್ಹೋಗ್ಯದೆ, ಬೇರೆ ಹೊಸದು ತರಾಣಾಪ್ಪ ಅಂದರೆ ನೀನು ಚೌಕಾಸಿ ಮಾಡ್ತಿದ್ದಿ.''

ಕೆಳಗಿನಿಂದ ಊಟಕ್ಕೆ ಕೂಗು ಕೇಳಿಸ್ತು. ಅನಂತ ದಡದಡ ಮಹಡಿ ಇಳಿದು ಬಂದು ಹೆಂಡತಿಗೆ, ''ಲೇ, ಸ್ವಲ್ಪ ತಡಿಯೇ. ಆ ಟಕಾರೇನ ನೋಡಿಕೊಂಡು ಈಗ ಬಂದುಬಿಡ್ತೇನೆ'' ಅಂತ ಓಡಿದ.

''ಏ, ಟಕಾರೇ, ಟಿ.ವಿ. ಕ್ವಿಜ್ ಕಾರ್ಯಕ್ರಮ ಕೇಳಿದೆ ಏನು ?'' ''ಇಲ್ಲ, ಬೇರೆ ಪ್ರೋಗ್ರಾಂ ನೋಡ್ತಿದ್ದೆ.'' ''ಹಾಗಾದ್ರೇ... ನೀನು... ನಾ ಕೇಳಿಸಿಕೊಂಡದ್ದು ಕೇಳಿಲ್ಲ ಅಂತಾಯ್ತು.'' ''ಪ್ಯಾಟಿ, ನೀನೂ ಅದನ್ನ ಕೇಳಿದ್ಯಾ ? ನನ್ ಟಿ.ವಿ.ನು ಪಿಚ್ಚರ್ ಬಂದ್ ಆಗಿ ಅದೇನೇನೋ ಲೆಕ್ಚರ್ ಬರ್ಲಿಕ್ಕೆ ಹತ್ತಿತು. ಯಾವ ಚಾನೆಲ್ ತಿರುಗಿಸಿದರೂ ಅದೇ ಮಾತುಗಳು !'' ಇಬ್ಬರೂ ಮುಖ ಮುಖ ನೋಡಿಕೊಳ್ಳುತ್ತ ತಲೆ ಕೆರೆದುಕೊಂಡರು.

ಧಾರವಾಡ ಪಟ್ಟಣ ಒಂದೇ ಅಲ್ಲ ಅಚ್ಚರಿಗೊಂಡದ್ದು. ಮಾರನೆಯ ದಿನ ಮುಂಜಾನೆಯಿಂದಲೇ ಬಿ.ಬಿ.ಸಿ., ಎನ್.ಬಿ.ಸಿ., ಎ.ಬಿ.ಸಿ., ಡಿ.ಡಿ, ಎಲ್ಲ ರೇಡಿಯೋ, ಟಿ.ವಿ. ನಿಲಯಗಳೂ ಈ ವಿಚಿತ್ರ ಬಿಸಿಬಿಸಿ ಸುದ್ದಿಯನ್ನು ಪ್ರಸಾರಮಾಡುತ್ತಿದ್ದವು. ಚಾ ಕುಡಿಯುವ ಹೊತ್ತಿಗೆಯೇ ಪ್ರಪಂಚದ ಎಲ್ಲ ದೇಶಗಳಲ್ಲೂ ಆಯಾ ಭಾಷೆಗಳಲ್ಲಿ ಎಲ್ಲರೂ ಹಿಂದಿನ ರಾತ್ರಿ ಸರಿಯಾಗಿ ೯.೪೦ಕ್ಕೆ ಆ ಗಂಭೀರ ಮಾತುಗಳನ್ನು ಆಲಿಸಿದ್ದು ಖಚಿತವಾಯಿತು – ಅರಬರು ಅರಬ್ಬಿಯಲ್ಲಿ, ಅಮೆರಿಕಾದ ಜನ ಇಂಗ್ಲಿಷ್, ಸ್ಪ್ಯಾನಿಷ್, ಚೀಣಿ, ಹಿಂದೀ ಮುಂತಾದ ಭಾಷೆಗಳಲ್ಲಿ, ನಮ್ಮ ಲಮಾಣಿಜನ ತಮ್ಮದೇ ಲಮಾಣಿ ಆಡುಮಾತಿನಲ್ಲಿ!

ವಿಚಿತ್ರ ಗಹನ ವಿಷಯ! ''ನಿನಗೇನನಸತ್ತಪ್ಪ ?'', ಒಬ್ಬಾತನ ಪ್ರಶ್ನೆ, ''ಏನೋಪ್ಪ, ಏನಂತ ಹೇಳ್ಲಿ, ಏನೂ ಗೊತ್ತಾಗ್ತಾ ಇಲ್ಲ.'' ಉತ್ತರ. ಪ್ರಪಂಚದ ಎಲ್ಲೆಲ್ಲೂ ಇಷ್ಟೇ ಪ್ರಶ್ನೋತ್ತರ, ಆ ಮಾರ್ಚ್ ಮಂಗಳವಾರ ಮುಂಜಾನೆ.

ಹಿಂದಿನ ಸೋಮವಾರ ರಾತ್ರಿ ಸರಿಯಾಗಿ ೯.೪೦ಕ್ಕೆ ಆ ಗಂಭೀರವಾಣಿ ಪ್ರಪಂಚದ ಎಲ್ಲ ಕಡೆ, ಎಲ್ಲ ಭಾಷೆಗಳಲ್ಲಿ ತೇಲಿ ಬಂದಿತ್ತಲ್ಲ – ರೇಡಿಯೋ, ಟಿ.ವಿ.ಗಳಿಗೆ, ಅದೇ ದಿನ ಅದೇ ವೇಳೆಯನ್ನು ಅದು ಯಾಕೆ ಆರಿಸಿಕೊಂಡಿತ್ತೆಂದು ಯಾರು ಹೇಳಬೇಕು ? ಬಹಳ ಜನಕ್ಕೆ ಮೊಟ್ಟಮೊದಲ ಅನ್ನಿಸಿಕೆ ಅವಿಶ್ವಾಸ. ಯಾರಿರಬಹುದು ಮಾತಾಡಿದವರು ? ಇವತ್ತು ರಾತ್ರಿ ಸಹ ನಿನ್ನೆಯ ಹಾಗೆಯೇ ಆದರೆ ಪತ್ತೆಮಾಡಲು ಯತ್ನಿಸಬೇಕು ಎಂಬ ನಿರ್ಧಾರ.

ಮಂಗಳವಾರದ ಸೂರ್ಯ ಮುಳುಗಿದ. ಎಂಟು ಗಂಟೆಗಾಗಲೇ ಎಲ್ಲ ವಿದ್ಯುತ್ ಕೇಂದ್ರಗಳಲ್ಲೂ ಆ್ಯಮ್ಮೀಟರ್‌ಗಳು ಗಿರಿಗಿರಿ ಸುತ್ತುತ್ತ ಹೆಚ್ಚುತ್ತಿರುವ ಒತ್ತಡ ಸೂಚಿಸತೊಡಗಿದವು. ಎಲ್ಲೆಲ್ಲೂ ಜನ, ರೇಡಿಯೋ ಇರುವವರು ರೇಡಿಯೋ, ಟಿ.ವಿ. ಇರುವವರು ಟಿ.ವಿ., ಎರಡೂ ಇಲ್ಲದವರು ಇರುವವರ ಮನೆ, ಅಂಗಡಿ ಮುಂಗಟ್ಟುಗಳ ಬಳಿ ನೆರೆದು ಮೈಯೆಲ್ಲ ಕಿವಿಮಾಡಿಕೊಂಡಿದ್ದರು. ನಿರಾಸೆಯಾಗಲಿಲ್ಲ! ೯.೩೦ರಿಂದಲೇ ಕಾರ್ಯಕ್ರಮಗಳು ಕ್ಷೀಣವಾಗತೊಡಗಿ ಸರಿಯಾಗಿ ಗಡಿಯಾರದ ಉದ್ದಮುಳ್ಳು ೯.೪೦ ತೋರಿಸುತ್ತಲೇ ಟಿ.ವಿ.ಗಳ ಸ್ಕ್ರೀನ್ ಅಳಿಸಿಹೋಯಿತು. ರೇಡಿಯೋಗಳ ಮಾತು ನಿಂತಿತು. ಅದೇ ಗಂಭೀರ ಶಾಂತವಾಣಿ ಮೂಡಿಬಂದಿತು : ''ಮಕ್ಕಳೇ, ಅಂಜಿಕೆ ಬೇಡ. ಅಪನಂಬಿಕೆಯೂ ಬೇಡ. ಇನ್ನೂ ಸಂಶಯವೇ ? ಮುಂಜಾನೆಯಿಂದ ಗಮನಿಸುತ್ತಿದ್ದೇನೆ.'' ಅಷ್ಟರಲ್ಲಿ



ಹಲವು ವಿಜ್ಞಾನಿಗಳು, ತಂತ್ರಜ್ಞರು ಆ ವಾಣಿ ಎಲ್ಲಿಂದ ಮೂಡುತ್ತಿರುವುದೆಂದು ಪತ್ತೆ ಹಚ್ಚಲು ಶತಪ್ರಯತ್ನ ಮಾಡತೊಡಗಿದ್ದರು. ''ಯಾರೋ. ಕುಚೇಷ್ಟೆ ಮಾಡುತ್ತಿರ ಬಹುದೆಂದೇ ನಿಮ್ಮ ಎಣಿಕೆ. ನಿಮ್ಮಲ್ಲಿ ಕೆಲವರು ಈಗಲೇ ಪತ್ತೆಗೆ ಪ್ರಯತ್ನಿಸುತ್ತಿದ್ದಾರೆ ಸಹ, ನೋಡಿರಿ. ನಿಮ್ಮೆಲ್ಲರ ತಂದೆ, ಸೃಷ್ಟಿಕರ್ತ, ನಾನು. ನಂಬಿಕೆ ಬರುತ್ತಿರುವುದೇ ? ಈ ವಾರವೆಲ್ಲ ನಿಮ್ಮೊಡನಿರಲು ಬಂದಿರುವೆ, ಮಕ್ಕಳೇ.''

ಮಾತು ನಿಂತಿತು. ಪತ್ತೆಹಚ್ಚಲು ಪ್ರಯತ್ನಿಸಿದವರೆಲ್ಲ ನಿರಾಶರಾಗಿ, ಯಾರದೇ ಕುಚೇಷ್ಟೆ ಅಥವಾ ಕೈವಾಡವಿಲ್ಲ ಇದರಲ್ಲಿ ಎಂದು ಸಾಮಾನ್ಯವಾಗಿ ಖಚಿತವೇ ಆಯಿತು. ನಿರೀಶ್ವರವಾದಿ ಕಮ್ಯುನಿಸ್ಟ್ ರಷ್ಯಾದ ಕುತಂತ್ರವೂ ಅಲ್ಲವೆಂದು ಸದ್ಯಕ್ಕೆ ಅಮೆರಿಕಾಕ್ಕೆ ನೆಮ್ಮದಿಯಾಯಿತು.

ಬುಧವಾರ ಬೆಳಿಗ್ಗೆ ಎಲ್ಲ ದೇಶಗಳ ವೃತ್ತಪತ್ರಿಕೆಗಳೂ ಪುಟಗಟ್ಟಲೆ ಬಣ್ಣಿಸತೊಡಗಿದ್ದವು. ಟಿ.ವಿ.– ರೇಡಿಯೋಗಳಲ್ಲಿ ಸಹ. ಸಂಪರ್ಕಿಸಿದ ವಿಜ್ಞಾನಿಗಳ ಒಟ್ಟಾರೆ ಅಭಿಪ್ರಾಯವೆಂದರೆ – ಅವರಲ್ಲಿ ಕೆಲವರು ಬಾತ್ಮೀದಾರರಿಗೆ ಸಿಕ್ಕದೆ ಬಚ್ಚಿಟ್ಟುಕೊಂಡಿದ್ದರೆನ್ನಿ – ಆ ಗಂಭೀರವಾಣಿ ಅಶರೀರವಾಣಿಯೇನಲ್ಲ, ಭೂಮಿಯ ಮೇಲಿನ ಮನುಷ್ಯನದೇ ಎಂದು. ಏಕೆಂದರೆ, ತಾನು ಸೃಷ್ಟಿಕರ್ತನೆಂದು ವಾಣಿ ಹೇಳಿದ್ದರೂ, ಅದು ನಿಜವಿದ್ದರೆ ಆತ ಈ ರೇಡಿಯೋ, ಟಿ.ವಿ. ಏಕೆ ಅವಲಂಬಿಸಬೇಕು ?! ಅವುಗಳ ಅಗತ್ಯ ಅವನಿಗೇಕೆ ? ತರ್ಕಶಾಸ್ತ್ರ ಪಂಡಿತನೊಬ್ಬ ದನಿ ತೆಗೆದ.

ಪ್ರಪಂಚದ ಎಲ್ಲ ಕಡೆ ಅನೇಕ ಮತ-ಧರ್ಮಗಳ ವಕ್ತಾರರು – ಕ್ರಿಸ್ತೀ ಗುರುಗಳು, ಮೌಲಾನಾ ಮೌಲ್ವಿಗಳು, ನಮ್ಮ ಜಗದ್ಗುರುಗಳು – ಎಲ್ಲರೂ ಮೌನಿಗಳಾಗಿದ್ದರು. ಇಲ್ಲವೇ, ''ಯೋಚಿಸಿ ತರುವಾಯ ಹೇಳುವೆವು'' ಎಂದು ಚುಟುಕ ಹೇಳಿಕೆ ನೀಡಿದ್ದರು. ಒಬ್ಬ ಗುರು ಮಾತ್ರ, ''ಆ ವಾಣಿ ಖಚಿತವಾಗಿ ದೇವರದೇ ಅಲ್ಲವೆನ್ನಿಸಿದರೂ, ನಮ್ಮಲ್ಲಿ ಬಹಳಷ್ಟು ಮಂದಿ ಮರೆತಿರುವುದನ್ನು ಅದು ನಮಗೆ ನೆನಪು ಮಾಡಿಕೊಡುತ್ತಿರುವುದೆಂಬುದು ಮಾತ್ರ ನಿಜ. ದೇವರು ಸದಾ ನಮ್ಮೊಳಗೆಯೇ ನೆಲೆಸಿರುವನು'' ಎಂದ.

ಬುಧವಾರ ಸಂಜೆ ಪ್ರಪಂಚದ ಎಲ್ಲ ಕಡೆಗಳ ಮಠ-ಮಂದಿರ-ಮಸೀದಿಗಳಲ್ಲೂ ಪ್ರಾರ್ಥನಾ ಸಭೆಗಳು ತುಂಬಿದ್ದವು. ಒಳಗೆ ಸ್ಥಳ ಸಿಗದವರಿಗಾಗಿ ಧ್ವನಿವರ್ಧಕಗಳು ಬಿತ್ತರಿಸುತ್ತಿದ್ದವು.

ಆದರೆ ಅಂದಿನ ವಾಣಿ ನಿರಾಸೆಯಾಗುವಷ್ಟು ಸಂಕ್ಷಿಪ್ತವಾಗಿತ್ತು. ೯.೪೦ಕ್ಕೆ ಸರಿಯಾಗಿ ಮೂಡಿಬಂದದ್ದು ಕೇವಲ ಎರಡೇ ಶಬ್ದಗಳು, ''ಇದು ನಾನೇ.'' ದೇವರ ವಾಣಿ ಗಂಭೀರವಿರುವ ಜೊತೆಗೆ ಸಂಕ್ಷಿಪ್ತ, ನಿರುತ್ಸಾಹವಿರಬೇಕು ಎಂದೇ ನಿಶ್ಚಯದ ಕೆಲವರಿಗೆ ಆ ದನಿಯಲ್ಲಿ ನಗೆಯ ಛಾಯೆ ಕೇಳಿಸಿದಂತಾಗಿ ದೇವರ ಮೇಲೆ ಕಿಂಚಿತ್ ಮುನಿಸಾಯಿತು, ''ಎಂಥ ದೇವರೀತ !'' ಎಂದಿನಂತೆ, ಈ ಮೂರನೆಯ ಸಲ, ರೇಡಿಯೋ-ಟಿ.ವಿ. ಪ್ರೇಷಕಗಳಿಂದ ಮಾತ್ರ ವಾಣಿ ಮೂಡಿಬರದೆ ಸಮುದ್ರಯಾನ ಮಾಡುತ್ತಿದ್ದ ಹಡಗುಗಳು, ಜಲಾಂತರ್ಗಾಮಿಗಳಲ್ಲೂ ಕೋಡ್‌ವ್ಯವಸ್ಥೆ ಮೂಲಕ ಅರ್ಥವತ್ತಾಗಿತ್ತು. ಮಾನವ ನಿರ್ಮಿತ ಯಂತ್ರೋಪಕರಣಗಳ ಮೂಲಕವಲ್ಲದೆ ನೀರವ ಆಕಾಶದಿಂದಲೇ ವಾಣಿ ಕೇಳಿಸಿದರೆ ಮನುಷ್ಯಮಾತ್ರದವರು ಭೂತಚೇಷ್ಟೆ ಎಂದು ಅಂಜಿಯಾರೆಂದೇ ಕರುಣೆ-ಕಕುಲಾತಿಯಿಂದ ಆತ ಅವುಗಳನ್ನೇ ಬಳಸಿರಬೇಕು. ಅವು ಜನರ ನಿತ್ಯಬಳಕೆಯ ವಸ್ತುಗಳು ತಾನೆ ?

ಮಾನವ ಮನೋವಿಜ್ಞಾನದ ಬಗ್ಗೆ ಆತನ ತಿಳುವಳಿಕೆ ಅತ್ಯಮೋಘ! (ಇದರಲ್ಲೇನಾಶ್ಚರ್ಯ, ಆತ ಸರ್ವಜ್ಞ, ಸೃಷ್ಟಿಕರ್ತನಲ್ಲವೇ ?) ''ಇದು ನಾನೇ'' – ಎರಡೇ ಶಬ್ದಗಳ ಆ ಪುಟ್ಟ ವಾಕ್ಯ; ಮಾತುಗಾರಿಕೆಯಲ್ಲಿ ಗಾಂಭೀರ್ಯ ಸಂಕ್ಷಿಪ್ತತೆಗಳನ್ನು ನಿರೀಕ್ಷಿಸುವವರಿಗೆ ದೇವರ ಬಗ್ಗೆ ಅತ್ಯಂತ ಮೆಚ್ಚುಗೆಯಾಯಿತಲ್ಲದೆ ವಿಶ್ವಾಸವೂ ಅಧಿಕವಾಯಿತು.

ನಾಲ್ಕನೆಯ ದಿನ, ಗುರುವಾರ. ಅಂದು ಮಾತುಗಳಿಂದಲೇ ವಿಶ್ವಾಸ ಮೂಡದ ಮೂಢರು, ಮೂಢನಂಬಿಕೆಯ ಜನರಿಗಾಗಿ ಬೇರೊಂದು ರೀತಿಯ ಪ್ರಯತ್ನ ಮಾಡಿದನೆನ್ನಬೇಕು ಆತ – ಪವಾಡಗಳ ಬಳಕೆ. ಭೂಗೋಳದ ಸುತ್ತಲೂ ಪ್ರತಿ ಎಂಬತ್ತು ಕಿ.ಮೀ. ಅಂತರದಲ್ಲಿ ಪವಾಡಗಳು ಹಗಲಿನಲ್ಲಿಯೇ (ಮಾತುಗಳಿಗೆ ರಾತ್ರಿ ಸರಿಯಾದೀತು, ಪವಾಡಗಳು ಕಣ್ಣಿಗೆ ಗೋಚರಿಸಬೇಕಲ್ಲವೇ ? ದೇವರು ಬುದ್ಧಿವಂತ !) ಗೋಚರಿಸತೊಡಗಿದವು – ಸಣ್ಣಪುಟ್ಟವಷ್ಟೇ – ಮಾಂಟ್ರಿಯಲ್‌ನ ಫಲಪುಷ್ಪ ಮಾರುಕಟ್ಟೆಯಲ್ಲಿ ಬುಟ್ಟಿಗಳಲ್ಲಿನ ಕಿತ್ತಳೆ ಸೇಬುಗಳು ಎಗರಿ ನೆಲದ ಮೇಲೆ ಉರುಳಾಡಿದುವಲ್ಲದೆ ಅಂಗಡಿಗಳ ಗೋಡೆಗಳನ್ನೇರತೊಡಗಿದವು, ಅಕ್ಷರಗಳಾಗಿ ಮಾರ್ಪಟ್ಟು ಹೂಗಳು ರಚಿಸಿದ ಚೌಕಟ್ಟುಗಳಲ್ಲಿ ವಾಕ್ಯರಚನೆಗೊಂಡವು, ''ಮಾನವರೆಲ್ಲ ನನ್ನ ಮಕ್ಕಳು, ಆದಕಾರಣ ಅವರೆಲ್ಲ ಸಹೋದರರು.'' ಕೊಪನ್‌ಹೇಗನ್ ಜೂನಲ್ಲಿ ದೊಡ್ಡ ಸಿಂಹ ಒಂದು ತಾನೆ ಪಂಜರ ತೆರೆದು ಹೊರಬಂದು ಹತ್ತಿರದ ಹಳ್ಳಿಗೆ ಹೋಗಿ, ಅಲ್ಲಿ ಮೇಯುತ್ತಿದ್ದ ಕುರಿಮಂದೆಯ ಮಧ್ಯೆ ಆಕಳಿಸುತ್ತ ಮಲಗಿಬಿಟ್ಟಿತ್ತು. ಅಮೆರಿಕಾದ ಪಾಸಡೀನಾ ನಗರದಲ್ಲಿ ಪುಕ್ಕಲ ಹೆಂಗಸೊಬ್ಬಾಕೆ ಪಕ್ಕದಲ್ಲಿ ಮಲಗಿದ್ದ ಗಂಡ ಕನಸಿನಲ್ಲಿ ಕಟಕಟ ಹಲ್ಲುಕಡಿದಾಗ ಭಯಗೊಂಡು ಮನೆಯಿಂದೋಡಿ ದಾರಿಯಲ್ಲಿದ್ದ ಸೇತುವೆಯಿಂದ ನದಿಗೆ ಹಾರಿಕೊಂಡಳೇನೋ ನಿಜ; ಆದರೆ ನೀರಿಗೆ ಬೀಳದೆ ಮುಕ್ಕಾಲು ಗಂಟೆ ಅಂತರಾಳದಲ್ಲಿಯೇ ಉಳಿದಳು – ಏನಾಶ್ಚರ್ಯ ! ಅಗ್ನಿಶಾಮಕ ದಳದವರು ಆಕೆಯನ್ನು ಪಾರುಮಾಡಬೇಕಾಯಿತು. ಹೀಗೆ, ಸಣ್ಣಪುಟ್ಟ ಪವಾಡಗಳೇ ಇವುಗಳಾದರೂ ಜನ ಅಚ್ಚರಿಯಿಂದ ಗಮನಿಸುವ ಘಟನೆಗಳೇ ತಾನೆ ? ಟಿ.ವಿ., ರೇಡಿಯೋಗಳಲ್ಲಿ ಕಿವಿಗೆ ಕೇಳಿಸಿದ ಗಂಭೀರವಾಣಿಯಿಂದ ಪರಿಣಾಮ ವಿರದಿದ್ದ – ಆದರೆ ಮೂಢನಂಬಿಕೆ ಇರದ – ಕೆಲವರಿಗೆ, ಈ ಇಂಥ ಘಟನೆಗಳನ್ನು ದೇವರ ಪವಾಡಗಳೆಂದು ಕೊಂಡಾಡುತ್ತಿದ್ದವರ ಬಗ್ಗೆ, ವಿಪರೀತ ಸಿಟ್ಟು ಬಂದಿತೇ ವಿನಾ ಯಾವ ನಂಬಿಕೆಯೂ ಉಂಟಾಗಲಿಲ್ಲ. ಸಾಮಾನ್ಯ ಜನರ ಈ ಮೌಢ್ಯ ಮತ್ತು ಮೂಢನಂಬಿಕೆಗಳನ್ನು ಕಂಡು ಸಿಡಿದೆದ್ದ ವ್ಯಕ್ತಿ ಎಂದರೆ ನ್ಯೂಯಾರ್ಕ್‌ನ ''ನಿರೀಶ್ವರವಾದ – ಮೂರ್ತಿ ಭಂಜನ ಪ್ರೋತ್ಸಾಹಕ ಒಕ್ಕೂಟ''ದ ಅಧ್ಯಕ್ಷ ವಾಲ್ಟರ್ ವೆಲೇರಿಯನ್. ಸಾಮೂಹಿಕ ವಿರೋಧ ಪ್ರಕಟಣೆ ನಿಮಿತ್ತ ಎಲ್ಲ ಶಾಖೆಗಳಿಗೂ ಸೂಚನಾ ದೂರವಾಣಿ ಕರೆ ಮಾಡಿದ.

ಸೃಷ್ಟಿಕರ್ತನ ಗುರುವಾರದ ಸಂದೇಶ ಸುದೀರ್ಘವಿತ್ತು ಮತ್ತು ನೀತಿ-ಧರ್ಮ ಉಪದೇಶವೂ ಆಗಿತ್ತು: ''ಮಕ್ಕಳೇ, ನೀವೆಲ್ಲ ಪವಾಡಗಳನ್ನು ಬಯಸುತ್ತೀರಿ, ಬೇಡುತ್ತೀರಿ, ನಿಮ್ಮ ಹೃದಯದಲ್ಲಿ ವಿಶ್ವಾಸವಿಲ್ಲದಿರುವುದರಿಂದ. ನಿಮ್ಮ ಕಾಲಡಿ ಇರುವ ಅಸಂಖ್ಯಾತ ಕಲ್ಲುಹರಳುಗಳು, ಆಕಾಶ ತುಂಬಿ ತುಳುಕುವಷ್ಟು ನಕ್ಷತ್ರಗಳು, ಉದುರುವ ಒಂದೊಂದು ಹನಿ ಮಳೆನೀರು ಸಹ ಪವಾಡವೇ ಅಲ್ಲವೆ ? ನೀವು ಕಣ್ದೆರೆದು ನಿಮ್ಮ ಸುತ್ತಲೂ ನೋಡಿ ಅಚ್ಚರಿಪಡುವ ಶಕ್ತಿಯನ್ನೇ ಕಳೆದುಕೊಂಡಿರುವಿರಿ. ಆದ್ದರಿಂದಲೇ ಪವಾಡ ನಿರೀಕ್ಷಿಸುವಿರಿ. ಹಾಗೆಂದೇ ಕೆಲವು ಪವಾಡಗಳನ್ನು ನಿಮಗೆ ತೋರಿಸಿರುವೆ. ನಿಮ್ಮನ್ನು ಸರಿದಾರಿಗೆ ತರಲು ನೈಸರ್ಗಿಕ ನಿಯಮಗಳನ್ನೂ ಮೀರುವಂಥ ಪವಾಡ ತೋರಿಸಬೇಕೆ ? ನಿಮ್ಮನ್ನು ವಿಶೇಷ ಪ್ರೀತಿಸುವ ನಾನು ಅದಕ್ಕೆ ಸಾಕ್ಷಿಯಾಗಿ ಅದನ್ನೂ ಮಾಡುವೆ. ಸರ್ವಶಕ್ತನೇ ನಾನಾದರೂ ನನ್ನ ಅದ್ಭುತ ಶಕ್ತಿಯನ್ನು ಮಿತಿಯಲ್ಲಿರಿಸಿಕೊಳ್ಳಬೇಕು, ನಿಜ. ಆದರೆ ನಿಮ್ಮಲ್ಲಿನ ಹಠಮಾರಿ ನಿರೀಶ್ವರವಾದಿಗಳು, ಪವಾಡ ಪ್ರತಿಭಟಿಸುವವರು ಆ ಎಲ್ಲರನ್ನು ನನಗೆ ಸಾಧ್ಯವಾದರೆ ಪರಿವರ್ತಿಸಲು ಒಂದು ಅದ್ಭುತ ಪವಾಡ ಪ್ರದರ್ಶಿಸಲು ಇಚ್ಛಿಸಿರುವೆ. ನಾಳೆ ಅದನ್ನು ನೋಡುವಿರಿ. ಸರಿ, ಮಧ್ಯಾಹ್ನ ಇಡೀ ಆಸ್ಟ್ರೇಲಿಯಾ ಖಂಡವನ್ನು ಒಂದು ನಿಮಿಷದವರೆಗೆ ಸಾಗರದಲ್ಲಿ ಮುಳುಗಿಸುವವನಿದ್ದೇನೆ.''

ಈ ಪ್ರಸಾರ ಭಾಷಣ ಹಠಮಾರಿ ಪ್ರತಿಭಟನಕಾರರ ಅವಿಶ್ವಾಸವನ್ನು ಕರಗಿಸಿತೇ ? ಆತನಿಗೇ ಗೊತ್ತು. ಇತರ ಸಾಮಾನ್ಯರಿಗಂತೂ ಅದು ದೇವರೆಂದೇ ಖಚಿತವಾಗಿಹೋಯಿತು, ಯಾವ ಅಪನಂಬಿಕೆಯೂ ಉಳಿಯಲಿಲ್ಲ. ಮುಸ್ಲಿಂ ರಾಷ್ಟ್ರಗಳ ಜನ ತಂಡೋಪತಂಡವಾಗಿ ಮಕ್ಕಾಯಾತ್ರೆ ಕೈಗೊಂಡರು. ಭಾರತ-ನೇಪಾಳಾದಿ ಹಾಗೂ ಪ್ರಪಂಚದ ನಾನಾ ಕಡೆಗಳಲ್ಲಿನ ಹಿಂದೂ ಸಂಸ್ಕೃತಿ ಭಕ್ತರು ಬದರಿ-ಕೇದಾರ, ಕಾಶಿ-ರಾಮೇಶ್ವರಗಳಿಗೆ ದಾಳಿ ಇಟ್ಟರು. ಕಾಡು-ಮೇಡುಗಳ ಬುಡಕಟ್ಟುಜನ ಶುಕ್ರವಾರ ಮುಂಜಾನೆಯಿಂದ ತಂತಮ್ಮ ಪ್ರದೇಶಗಳ ಗುಡ್ಡ-ಬೆಟ್ಟಗಳನ್ನೇರಿ ಪ್ರಪಂಚಪ್ರಳಯವನ್ನು ನಿರೀಕ್ಷಿಸತೊಡಗಿದರು.

ಆಸ್ಟ್ರೇಲಿಯಾ ಜನರು ಪುಕ್ಕಲರೇನಲ್ಲ. ಅವರಿಗೆ ಖುಷಿಯೇ ಆಯಿತು. ಎಬಿಸಿ ರೇಡಿಯೋ – ನಿಲಯಗಳು, ''ದೇವರು ತನ್ನ ಕೊಟ್ಟಕೊನೆಯ ಪವಾಡಕ್ಕೆಂದು ನಮ್ಮ ನಾಡನ್ನು ಸರಿಯಾಗಿಯೇ ಆರಿಸಿಕೊಂಡಿರುವ. ಆತನನ್ನು ಅಭಿನಂದಿಸೋಣ. ಬೇರೆ ದೇಶವಾಗಿದ್ದರೆ ಮುಳುಗಿ ಸಾಯುವೆವೆಂದು ಜನ ಅಂಜಿ ಕಂಗಾಲಾಗುತ್ತಿದ್ದರು'' ಎಂದು ಪ್ರಸಾರ ಮಾಡಿದವು. ಮೆಲ್‌ಬೋರ್ನ್‌ನ ಪ್ರಸಾರಕ, ''ನನ್ನ ನಗರದ ಯಾವನೂ ನಡುಗುತ್ತಿಲ್ಲ ಅಂಜಿ. ಸಾಮಾನ್ಯ ಅಭಿಪ್ರಾಯವೆಂದರೆ, 'ಒಂದು ನಿಮಿಷ ನಮ್ಮ ಖಂಡ ಜಲಸಮಾಧಿ ಹೊಂದುವುದು ಒಳ್ಳೆಯದೇ. ಅನುಕೂಲವೂ ಆದೀತು.'' ಮಧ್ಯಾಹ್ನಕ್ಕೆ ಒಂದು ಗಂಟೆ ಮುಂಚಿನಿಂದ ಸಿಡ್ನಿ, ಪರ್ತ್, ಮೆಲ್‌ಬೋರ್ನ್‌ಗಳ ಆಕಾಶದಲ್ಲಿ ಹೆಲಿಕಾಪ್ಟರ್‌ಗಳು ಹಾರಾಟ ನಡೆಸಿ ಈ ಎರಡನೇ ಮಹಾಜಲಪ್ರಳಯದ (ಮೊದಲನೆಯದು ಕ್ರಿ.ಪೂ.ದ ನಮ್ಮ ಭಾರತದವನೇ ಆದ ವೈವಸ್ವತ ಮನುವಿನ ಕಾಲದ್ದು) ವೀಕ್ಷಕ-ವಿವರಣೆಗೆ ಎಲ್ಲ ತಯಾರಿ ನಡೆಯಿತು.

ದೇವರು ತಿಳಿಸಿದ್ದಂತೆ ಶುಕ್ರವಾರ ಮುಂಜಾವಿನಿಂದ ಸಾಕಷ್ಟು ಅದ್ಭುತ ಪವಾಡಗಳು ಕಾಣಿಸತೊಡಗಿದ್ದವು : ಅಮೆರಿಕಾದ ಹಾಗೂ ರಷ್ಯಾದ ಮಿಲಿಟರಿ ಕೇಂದ್ರಗಳಲ್ಲಿ ದಾಸ್ತಾನಾಗಿದ್ದ ಎಲ್ಲ ತರಹ ಲೋಹಯುಕ್ತ ಯುದ್ಧಸಾಮಗ್ರಿಗಳು ಬೆಲ್ಟ್-ಬಕ್ಲ್‌ನಿಂದ ಹಿಡಿದು ಭಾರಿ ಬ್ಯಾಟ್ಲ್-ಷಿಪ್‌ನವರೆಗಿನವು – ತುಂಡುತುಂಡಾಗಿ ಸ್ಕ್ರ್ಯಾಪ್ ಆಯಿತು. ನಾಶಗೊಂಡ ಟ್ಯಾಂಕ್, ಜಲಾಂತರ್ಗಾಮಿ, ಭಾರಿ ಯುದ್ಧನೌಕೆಗಳ ಸ್ಥಾನವನ್ನು ಗೊಬ್ಬರ ಹೇರಿ

ಸಾಗಿಸುವ ಭಾರಿ ಟ್ರಕ್‌ಗಳು ಆಕ್ರಮಿಸಿದ್ದವು. ಅವುಗಳ ಮುಂಭಾಗದಲ್ಲಿ ಲೆನಿನ್ ಮಹಾಶಯನ ಸದಾಶಯದ ಸೂಕ್ತಿ ಇದ್ದ ಪ್ಲೇಕಾರ್ಡ್‌ಗಳು ಢಾಳಾಗಿ ಕಂಗೊಳಿಸಿದ್ದವು, ''ಶಾಂತಿ, ರೊಟ್ಟಿ ಮತ್ತು ಜಮೀನು ಪ್ರತಿ ವ್ಯಕ್ತಿಗೂ!'' – ರಷ್ಯಾದಲ್ಲಲ್ಲದೆ ಅಮೆರಿಕಾದಲ್ಲೂ ಇನ್ನೂ ಅನೇಕ ಪವಾಡಗಳು ನಡೆದಿದ್ದವು. ದೊಡ್ಡ ಗಡಿಯಾರ ಗೋಪುರದಲ್ಲಿ ೧೨ ಗಂಟೆ ಕಡೆಗೆ ದೊಡ್ಡ ಮುಳ್ಳು ಸರಿದಂತೆಲ್ಲ ಹೆಲಿಕಾಪ್ಟರ್‌ನಿಂದ ವರದಿಗಾರರು ತಂತಮ್ಮ ಕೈಗಡಿಯಾರಗಳನ್ನು ಗಮನಿಸುತ್ತಾ, ''೧೧.೫೨... ೧೧.೫೫... ೧೧.೫೮... ೧೧.೫೯... ಅಗೋ! ೧೨!'' ಎಂದು ಅರಚುತ್ತಿದ್ದರು. ಬಿ.ಬಿ.ಸಿ. ವರದಿಗಾರ ಮಾತ್ರ ಶಾಂತವಾಗಿ ವರ್ಣಿಸತೊಡಗಿದ್ದ, ಕ್ರಿಕೆಟ್ ಕಾಮೆಂಟರಿ ಕೊಡುತ್ತಿರುವನೋ ಎಂಬಂತೆ. ''ದೇವರು ನಿನ್ನೆ ರಾತ್ರಿ ಹೇಳಿದ ಪ್ರಕಾರವೇ ಈ ಖಂಡ ನಿಧಾನವಾಗಿ ಹಿಂದು ಮಹಾಸಾಗರದಲ್ಲಿ ಮುಳುಗತೊಡಗಿದೆ... ಮುಳುಗುವ ವೇಗ ಹೆಚ್ಚುತ್ತಲಿದೆ... ಅಗೋ, ಆ ಅತಿ ಎತ್ತರದ ಚರ್ಚ್ ಗೋಪುರ ಕಣ್ಮರೆಯಾಯಿತು... ತೇಲಾಡುತ್ತಿರುವ ವಿವಿಧ ವಸ್ತುಗಳು ಸುಳಿಗಳಿಗೆ ಸಿಕ್ಕು ಗಿರಕಿಹೊಡೆಯುತ್ತಿವೆ. ಈ ನಗರಗಳ ಜನ ಏನೇನು ಎಂಥೆಂಥ ನಿರುಪಯೋಗಿ ಸಾಮಾನುಗಳನ್ನು ಮನೆಗಳಲ್ಲಿ ತುಂಬಿಕೊಂಡಿರುತ್ತಾರಪ್ಪಾ!..., ಹೋ, ಆ ಅತಿ ಎತ್ತರದ ಗುಡ್ಡದ ತುದಿ ಮುಳುಗುತ್ತಿದೆ... ಈಗ ಎಲ್ಲ ಮಾಯ!... ೫೦ ಕ್ಷಣಗಳು ಮುಗಿಯಿತು. ಎಲ್ಲ ಜಲಮಯ... ೫೫ ಕ್ಷಣಗಳು... ಅಗೋ, ಆ ಗುಡ್ಡದ ತುದಿ!? ಇಗೋ, ಈ ಚರ್ಚ್ ಗೋಪುರದ ಶಿಖರ!... ಹೌದು, ನಮ್ಮ ಆಸ್ಟ್ರೇಲಿಯಾ, ನಮ್ಮ ಪ್ರೀತಿಯ ತಾಯ್ನಾಡು (ಬಿ.ಬಿ.ಸಿ.ಯವನು ಮೈಮರೆತು ಕವಿಯಂತಾಗಿದ್ದಾನೆ) ನೀರಿನೊಳಗಿಂದ ಉದ್ಭವಿಸುತ್ತಿರುವಳು! ತೊಯ್ದು ತೊಪ್ಪಡಿಯಾಗಿದ್ದರೇನು? ಸ್ವಚ್ಛ-ಶುಭ್ರಳಾಗಿ ಕಂಗೊಳಿಸುತ್ತಿದ್ದಾಳೆ... ಆಕೆ ಮುಳುಗುತ್ತಿದ್ದಾಗ ಪುಕ್ಕಲರು ಕೆಲವರು ದೋಣಿಗಳಲ್ಲಿ ದೂರ ದೂರ ಸಾಗಿದ್ದವರು, ಈಗ ಮತ್ತೆ ಅಂಜಿ, ಕಾಣಸಿಕೊಳ್ಳುತ್ತಿರುವ ತೀರಗಳ ಕಡೆಗೆ ಧಾವಿಸುತ್ತಿದ್ದಾರೆ. ಈಗ ಎಲ್ಲ ಮನೆಗಳು ಎದ್ದುನಿಂತಿವೆ... ತನ್ನ ಮನೆಯಿಂದ ಹೊರಗೆ ಬಾರದೆ ಒಳಗೇ ಉಳಿದಿದ್ದ ಒಬ್ಬ ಧಡಿಯ ವ್ಯಕ್ತಿ, ಕುಡಿದಿದ್ದ ನೀರು ಉಗುಳುತ್ತ ಹೊರಗೆ ಬಂದಿದ್ದಾನೆ. ವರದಿಗಾರನೊಬ್ಬ ಅವನ ಬಳಿಗೆ ಧಾವಿಸಿ ಮೈಕ್ ಅವನ ಮುಸುಡಿಗೆ ಚಾಚುತ್ತ, ''ರೇಡಿಯೋ ಆಲಿಸುತ್ತಿರುವವರಿಗೆ ಹೇಳಿ, ಸರ್, ನೀವು ಸತ್ಯವಾಗಿ ಒಂದು ನಿಮಿಷ ನೀರಿನಲ್ಲಿ ಮುಳುಗಿಹೋಗಿದ್ದಿರಾ?'' ಮೇಲುಸಿಲರುಬಿಡುತ್ತಾ ಪ್ರಶ್ನಿಸಿದ. ''ಈ ಬಟ್ಟೆ-ಬರೆ ಒದ್ದೆಮುದ್ದೆಯಾಗಿರೋದು ಕಾಣಿಸದೇನಯ್ಯಾ? ಕೇಳ್ತಾನೆ, ಮುಳುಗಿದ್ದೆಯಾ ಎಂದು.'' ''ಸರ್, ನಿಮ್ಮ ಹೆಸರು?'' ''ಕರ್ನಲ್ ಹಂಫ್ರಿ ಬುತ್ನಾಟ್. ಡಿ.ಎಸ್.ಸಿ. (ನಿವೃತ್ತ). ಆಯಿತಾಪ್ಪ ನಿನ್ನ ಪ್ರಶ್ನೆ? ಒಂದು ಒಣ ಟವಲೇನಾದರೂ ಇದೆಯಾಪ್ಪಾ? ಇದ್ದರೆ ಕೊಡು'' – ಎಂದ. ''ಭಾರಿ ಪವಾಡವನ್ನೇ ತೋರಿಸಿದ್ದಾನೆ, ದೇವರು. ಪರವಾಗಿಲ್ಲವೇ!'' ಬಿ.ಬಿ.ಸಿ.ಯವ ವರದಿ ಮುಗಿಸಿದ್ದ.

ಅಂದು ಸಂಜೆ ದೇವರ ಪ್ರಕಟಣೆ ಇಷ್ಟು: ''ಮಕ್ಕಳೇ, ನಿಮ್ಮೊಡನೆ ನಾಲ್ಕು ದಿನ ಇರಲು ನಾ ಬಂದಿದ್ದುದು ನಿಮ್ಮ ಭೂಮಿಯನ್ನು ಮುಳುಗಿಸಿ ನಿಮ್ಮನ್ನು ನಾಶಮಾಡಲೆಂದೇ ಎಂದು ಅಂಜಿರುವಿರಾ? ಛೇ! ಉಂಟೇ?... ನಿಮ್ಮನ್ನು ಎಚ್ಚರಿಸುವ ಸಲುವಾಗಿಯಷ್ಟೇ, ಮಕ್ಕಳೇ. ಬುದ್ಧಿವಂತರಾಗಿರಿ, ಆತ್ಮಪರೀಕ್ಷೆ ಮಾಡಿಕೊಳ್ಳಿರಿ. ಸರಿಯಾದುದನ್ನೇ ಸೂಚಿಸುತ್ತದೆ ನಿಮ್ಮ ನಿಮ್ಮ ಆತ್ಮಸಾಕ್ಷಿ. ಅದು ಸೂಚಿಸಿದ ಪ್ರಕಾರವೇ ನಡೆದುಕೊಳ್ಳಿರಿ. ಶುಭರಾತ್ರಿ!''




ಶನಿವಾರ ಈ ಭೂಗೋಳ ಎಂಥ ಬದಲಾವಣೆ ಕಂಡಿತ್ತು! ಬೆಳಗಿನಿಂದ ಬಲು ಗಡಿಬಿಡಿ. ಒಣಗಿ ಸುರುಟಿ ಹೋಗಿದ್ದ ಆತ್ಮಸಾಕ್ಷಿಗಳು ಮೃದುಗೊಂಡು ಹಸಿರೊಡೆಯ ತೊಡಗಿದ್ದವು. ಸರ್ವಾಧಿಕಾರಿಗಳು ತಾವು ದಬ್ಬಾಳಿಕೆ ನಡೆಸಿದ್ದ ದೇಶಗಳಲ್ಲಿ ಸ್ವಇಚ್ಛೆಯಿಂದ ಪದ ತ್ಯಜಿಸಿದ್ದರು. ಠೇವಣಿದಾರರಿಗೆ ಮೋಸಮಾಡಿ ಕೋಟ್ಯಂತರ ಕಮಾಯಿಸಿದ್ದು ತಲೆಮರೆಯಿಸಿಕೊಂಡಿದ್ದವರು ತಾವಾಗಿ ಶರಣುಬಂದು ಬಡ್ಡಿಸಹಿತ ಹಣ ಹಿಂದಿರುಗಿಸಿದ್ದರು. ಮೋಟಾರ್ ರಿಪೇರಿ ಗರಾಜ್‌ನ ಮಾಲೀಕ ತನ್ನ ಕೆಲಸಗಾರರಿಗೆ, ''ಇನ್ನು ಮುಂದೆ ರಿಪೇರಿಗೆ ಕೊಟ್ಟ ವಾಹನಗಳನ್ನು ಪ್ರಾಮಾಣಿಕವಾಗಿ ಮಾಡೋಣ''... ಇತ್ಯಾದಿಯಾಗಿ ಎಲ್ಲ ಕಡೆಯಲ್ಲಿ ಜನ ಬಹುಮಟ್ಟಿಗೆ ಬದಲಾಯಿಸಿದಂತೆ ಕಾಣತೊಡಗಿತ್ತು. ಜೊತೆಗೆ, ಜನರ ಹೃದಯ ಹಗುರಗೊಂಡಿತ್ತು – ಸಂತೋಷ, ಸೌಹಾರ್ದ, ಸಹಕಾರ ಮೇಲ್ಮೈ ಪಡೆದಿರುವಂತೆ ಕಂಡಿತ್ತು. ಒಟ್ಟಿನಲ್ಲಿ ಆ ಶನಿವಾರ ರಾತ್ರಿ ವೇಳೆಗೆ ಈ ಭೂಮಾತೆ ತನ್ನ ಪರಿವರ್ತನಗೊಂಡಿರುವ ಮಕ್ಕಳನ್ನು ನೋಡುತ್ತ ಎಷ್ಟೋ ವರ್ಷಗಳುದ್ದದ ಬೇಗುದಿಯನ್ನು ಮರೆತಳೇನೋ!

ಶನಿವಾರ ರಾತ್ರಿ ೯.೪೦ರ ವೇಳೆಗಾಗಲೇ ಪ್ರಪಂಚದ ಎಲ್ಲ ಕಡೆ ರೇಡಿಯೋ-ಟಿ.ವಿ.ಗಳ ಇತರ ಕಾರ್ಯಕ್ರಮಗಳು ನಿಂತವು, ಶಾಂತತೆ ನೆಲೆಸಿತು – ದೇವವಾಣಿ ನಿರೀಕ್ಷಿಸುತ್ತ. ಅಂದು ಪ್ರಸಾರಗೊಂಡ ಮಾತುಗಳಿವು: ''ನನ್ನ ಪ್ರೀತಿಯ ಮಕ್ಕಳೇ, ಎಷ್ಟು ಬೇಗ ಆರು ದಿನಗಳು ಮುಗಿದಿವೆ! ಒಂದು ವಾರ ನಿಮ್ಮೊಡನೆ ನಾನಿದ್ದ ಮಾತ್ರಕ್ಕೆ ನಿಮ್ಮೆಲ್ಲ ಸಮಸ್ಯೆಗಳು ಮಾಯವಾದವೆಂದೇನಲ್ಲ, ಅವು ಉಳಿದೇ ಇರುವುವು. ಅಲ್ಪ-ಸ್ವಲ್ಪ ಸಂತೋಷದೊಡನೆ ನೋವು, ಕಿರಿಕಿರಿ ಮುಂದುವರೆಯುವುದು ತಪ್ಪದು. ಹೊಟ್ಟೆ-ಬಟ್ಟೆ-ಗೂಡುಗಳ ಸಮಸ್ಯೆಗೆ ಪರಿಹಾರ ದೂರವೇ. ನಿಮ್ಮ ಪ್ರತಿನಿಧಿಗಳು ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು ಮಾತ್ರ. ಇದೇನು ದೇವರು ಹೀಗೆ ಹೇಳುತ್ತಿರುವ ಎಂದು ಚಿಂತೆಯೇ ನಿಮಗೆ? ಮಕ್ಕಳೇ, ನೀವೆಲ್ಲ ವಾಸಿಸುತ್ತಿರುವ ನಿಮ್ಮ ಭೂಗ್ರಹ ನಿಜಕ್ಕೂ ಒಂದು ಶಾಲೆ ಎಂದು ಅರ್ಥ ಮಾಡಿಕೊಳ್ಳಿರಿ. ಬದುಕಿನಿಂದ ಸದಾ ಕಲಿಯುತ್ತಿರಬೇಕು, ತಿದ್ದಿಕೊಳ್ಳಬೇಕು. ಇಷ್ಟು ಸಾಕು. ಅವಶ್ಯಕತೆ ಬಂದರೆ (ಅದು ಬಾರದಿರಲೆಂದೇ ನನ್ನಾಸೆ!) ನಾವು ಮತ್ತೊಮ್ಮೆ ಸೇರುವ. ಶುಭಮಸ್ತು!'' ರೇಡಿಯೋ-ಟಿ.ವಿ.ಗಳಲ್ಲಿ ಇತರ ಕಾರ್ಯಕ್ರಮಗಳು ಬರತೊಡಗಿದವು.

ಭಾನುವಾರ ಏಳನೆಯ ದಿವಸ. ನಮಗನ್ನಿಸುತ್ತದೆ, ಪಾಪ! ಪರಲೋಕದಲ್ಲಿರುವ ನಮ್ಮ ತಂದೆ ತನ್ನ ಸುಸ್ತು ಪರಿಹರಿಸಿಕೊಳ್ಳಲು ಏಕಾಂತಕ್ಕೆ ನಿರ್ಗಮಿಸಿರಬೇಕು. ಏಕೆಂದರೆ ಅಂದು ರಾತ್ರಿ ೯.೪೦ಕ್ಕೆ ಆತನ ವಾಣಿ ಮೂಡಲಿಲ್ಲ. ರೇಡಿಯೋ-ಟಿ.ವಿ.ಯ ಕಾರ್ಯಕ್ರಮಗಳಿಲ್ಲದೆ ಜನರಿಗೆ 'ಬರ' ಬಂದಿತ್ತು. ಈಗ ಉತ್ಸಾಹದಿಂದ ಅವುಗಳಿಗೆ ಅಂಟಿಕೊಂಡರು.

(ಆಂಗ್ಲ ಲೇಖನವೊಂದರ ಅವಲಂಬನೆ)

ಬ. ನಾ. ರಘುರಾಮ
ಹೌಸಿಂಗ್ ಬೋರ್ಡ್ ಕಾಲೊನಿ, ಸಾಗರ - ೫೭೭ ೪೦೧



# ಬೆಂಗಳೂರಿನ ಬಖೈರುಗಳು

ಬೆಂಗಳೂರಿನ ಬಗ್ಗೆ ತಿಳಿಯಬೇಕಾದ ಅನೇಕ ಸಂಗತಿಗಳಿವೆ. ಮಾಹಿತಿ ತಂತ್ರಜ್ಞಾನದಲ್ಲಿ ಇಡೀ ವಿಶ್ವದ, ಗಮನ ಸೆಳೆದು, ಅಡ್ಡಾದಿಡ್ಡಿಯಾಗಿ ಬೆಳೆಯುತ್ತಲೇ ಇರುವ, ಸಮಸ್ಯೆಗಳ ಆಗರವೇ ಆದ ಬೆಂಗಳೂರಿನ ಹುಟ್ಟು ಮತ್ತು ಈವರೆಗಿನ ಬೆಳವಣಿಗೆಯ ಬಗ್ಗೆ ಪುನಃ ಸಮಗ್ರ ಅಧ್ಯಯನ ನಡೆಯಲು ಇರುವ ಅವಕಾಶಗಳನ್ನು ಗುರುತಿಸಲು ನಿರಂತರ ಪ್ರಯತ್ನ ಮುಂದುವರಿಯುವ ನಿರೀಕ್ಷೆ ಇದೆ. ಈ ಬಖೈರುಗಳನ್ನು ಈವರೆಗೆ ರಕ್ಷಿಸಿದ್ದ ಮತ್ತು ಅವುಗಳನ್ನು ಲೋಕಕ್ಕೆ ಅನಾವರಣಗೊಳಿಸಿದ ಸಂಪಾದಕರು ಮತ್ತು ಸಂಬಂಧಿಸಿದ ಎಲ್ಲರೂ ಅಭಿನಂದನೆಗಳಿಗೆ ಪಾತ್ರರಾಗಿದ್ದಾರೆ.

ಇತಿಹಾಸದ ಅಧ್ಯಯನದಲ್ಲಿ ಇಂದಿಗೂ ಕೆಲವು ಸಮಸ್ಯೆಗಳಿವೆ. ಕೆಲವು ದಿನಗಳ ಹಿಂದೆ ದೂರದರ್ಶನದಲ್ಲಿ ಪೌಷ್ಟಿಕ ಪೇಯವೊಂದರ ಜಾಹೀರಾತಿನಲ್ಲಿ ಒದಿನ ತೊಂದರೆಯನ್ನು ವಿವರಿಸುವಾಗ ಕಣ್ಣಿಗೆ ಕಂಡ ಪುಸ್ತಕ ಇತಿಹಾಸಕ್ಕೆ ಸಂಬಂಧಿಸಿದ್ದು. ಅಂದರೆ ಇತಿಹಾಸದ ಅಧ್ಯಯನ ಎಂದರೆ ಕಷ್ಟ. ಇತಿಹಾಸದ ಅಭ್ಯಾಸದಿಂದ ಒಳ್ಳೆಯ ಕೆಲಸವೇನೂ ಸಿಗುವುದಿಲ್ಲ.

ಇತಿಹಾಸದ ಅಧ್ಯಯನ ನಿಂತ ನೀರಲ್ಲ, ಅದು ಒಂದು ಜೀವನದಿ. ಹರಿಯುವ ನದಿ ತಂದುಹಾಕುವ ಮಣ್ಣಿನೊಳಗೆ ಏನೇನಿದೆ ಎಂದು ಸಂಶೋಧಕ ಹುಡುಕಬೇಕು. ಯಾವುದೇ ಒಂದು ವಿಷಯದ ಅಧ್ಯಯನ ಮುಗಿಯಿತು ಎಂದು ಹೇಳುವಂತಿಲ್ಲ, ಅಧ್ಯಯನ ನಿರಂತರ. ಹೊಸ ವಿಚಾರಗಳು ತಿಳಿದಾಗ ಅವುಗಳನ್ನು ಸಮರ್ಪಕವಾಗಿ ಮತ್ತು ಸೂಕ್ತ ಸ್ಥಳದಲ್ಲಿ ಜೋಡಿಸಿ ಇತಿಹಾಸವನ್ನು ಮತ್ತಷ್ಟು ಸ್ಪಷ್ಟಪಡಿಸುವ ಕೆಲಸ ಆಗುತ್ತಲೇ ಇರುತ್ತದೆ. ಆಗ ಮೊದಲಿಗೆ ರೂಪಿತವಾಗಿದ್ದ ತಪ್ಪು ಅಭಿಪ್ರಾಯಗಳನ್ನು ತಿದ್ದಿಕೊಳ್ಳಲು ಸಹಜವಾಗಿಯೇ ಅವಕಾಶಗಳು ಇರುತ್ತವೆ. ಆಯಾ ಕಾಲಕ್ಕೆ ಲಭ್ಯವಿದ್ದ ಆಕರಗಳನ್ನು ಆಧರಿಸಿ ಸಿದ್ಧಪಡಿಸಿದ್ದ ಇತಿಹಾಸವನ್ನು ಹೊಸ ಆಕರಗಳು ದೊರೆತಾಗ, ಅವುಗಳ ಹಿನ್ನೆಲೆಯಲ್ಲಿ ಪುನಃ ಪರಿಶೀಲನೆ ಮಾಡುವುದು ಅವಶ್ಯಕ. ಇತಿಹಾಸದ ಪರಿಷ್ಕರಣ ನಿರಂತರವಾಗಿ ಆಗುತ್ತಲೇ ಇರಬೇಕಾದ್ದು ಅನಿವಾರ್ಯ.

ಪುರಾಣ ಮತ್ತು ಜಾನಪದ ಆಕರಗಳನ್ನು ಆಧರಿಸಿ ಸಿದ್ಧಪಡಿಸಿದ ಕಥೆಗಳನ್ನು ಇತಿಹಾಸ ಎಂದು ಒಪ್ಪಿಕೊಳ್ಳುವಂತಿಲ್ಲ. ಹಾಗೆಂದು ಈ ಎರಡೂ ಆಕರಗಳನ್ನು ಗೌಣ ಎಂದು ಪಕ್ಕಕ್ಕಿಡುವುದೂ ಸಮರ್ಥನೀಯವಲ್ಲ. ಯಾವುದೇ ಆಕರಗಳನ್ನು ತರ್ಕಬದ್ಧವಾಗಿ ಬಳಸಿಕೊಳ್ಳುವ ವಿವೇಕದ ಅಗತ್ಯತೆ ಇದೆ. ಇತಿಹಾಸಕಾರ ಎಷ್ಟೇ ಸ್ಪಷ್ಟವಾಗಿ ಹೇಳಿದರೂ, ಜನರ ನಂಬಿಕೆಗಳನ್ನು ಬದಲಿಸುವುದು ಸುಲಭವಲ್ಲ. ಬೆಂಗಳೂರು ನಗರಕ್ಕೆ ಅದೇ ಹೆಸರು ಬಂದ ಬಗೆಗೂ ಇಂತಹುದೇ ಕಥೆ ಇದೆ. ಜನ ಅದನ್ನು ನಂಬಿದ್ದಾರೆ. ಇತಿಹಾಸಕಾರರು ದಾಖಲೆಗಳ ಸಹಿತ ಆ ಕಥೆಯಲ್ಲಿ ಸತ್ಯವಿಲ್ಲ; ಕಥೆಗೆ ಅನ್ವಯಿಸಿರುವ ಕಾಲಕ್ಕೂ ಮೊದಲೇ ಬೆಂಗಳೂರು ಇತ್ತು ಎಂದು ಇತಿಹಾಸಕಾರ ಹೇಳಿದರೆ, ಅದನ್ನು ಜನ ಒಪ್ಪಲು ಸಿದ್ಧರಿಲ್ಲ.

ದಿನದಿಂದ ದಿನಕ್ಕೆ ಬೆಂಗಳೂರು ಬೆಳೆಯುತ್ತಿದೆ. ಸುಂಕೇನಹಳ್ಳಿಯ ಮತ್ತು ಬನಶಂಕರಿಯ ಟೆಂಟ್‌ಗಳಲ್ಲಿ ಸಿನಿಮಾಗಳನ್ನು ನೋಡಿದ್ದ ಜನ ಇನ್ನೂ ಇದ್ದಾರೆ. ಮೊದಲಿಗೆ ಈಗಿನ ಸಿಟಿ ಮಾರ್ಕೆಟ್‌ನಿಂದ ಮೈಸೂರು ಬ್ಯಾಂಕ್ ಚೌಕ ಮತ್ತು ಕಬ್ಬನ್ ಪೇಟೆಯಿಂದ ಗೂಡ್ಸ್ ಷೆಡ್‌ವರೆಗಿನ ಪ್ರದೇಶಕ್ಕಷ್ಟೇ ಸೀಮಿತಗೊಂಡಿದ್ದ ಬೆಂಗಳೂರು ನಗರ ಈಗ ಬೆಳೆದಿರುವ ಮತ್ತು ಬೆಳೆಯುತ್ತಿರುವ ರೀತಿಯನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯವಾಗುತ್ತದೆ. ನಮಗೇ ತಿಳಿದ ಕಳೆದ ಕಾಲವನ್ನು ನೆನಪು ಮಾಡಿಕೊಂಡಾಗ ವಿಸ್ಮಯವಾಗುತ್ತದೆ. ನಮಗೆ ತಿಳಿಯದ ಕಳೆದ ಕಾಲದ ಬಗ್ಗೆ ತಿಳಿದಾಗ ಮತ್ತಷ್ಟು ವಿಸ್ಮಯ ಆಗುವುದು ಸಹಜ.

ಬೆಂಗಳೂರಿನ ಇತಿಹಾಸವನ್ನು ಇತಿಹಾಸಕಾರರು ತಿಳಿದಿದ್ದಾರೆ; ತಿಳಿಸಿದ್ದಾರೆ. ಶಾಸನಗಳು, ಪ್ರವಾಸೀ ಕಥನಗಳು, ಅಧಿಕಾರಿಗಳ ವರದಿಗಳ ಜೊತೆಗೆ ಐತಿಹ್ಯ ಮತ್ತು ಜಾನಪದ ವಿಚಾರಗಳನ್ನೂ ಬಳಸಿಕೊಂಡು ಬೆಂಗಳೂರಿನ ಇತಿಹಾಸವನ್ನು ರಚಿಸಲಾಗಿದೆ. ಹೊಸ ಹೊಸ ವಿಚಾರಗಳು ತಿಳಿದಂತೆಲ್ಲಾ, ಇತಿಹಾಸದ ಪರಿಷ್ಕರಣೆ ಮಾಡಲಾಗಿದೆ. ಇತಿಹಾಸದ ಪುನಾರಚನೆಯೂ ಒಂದು ನಿರಂತರ ಪ್ರಕ್ರಿಯೆ.

ಬೇಗೂರಿನ ಕ್ರಿ.ಶ. ೧೦ನೆಯ ಶತಮಾನದ ಶಾಸನ ದೊರೆತಾದ ಮೇಲೆ ಬೆಂದಕಾಳೂರಿನ ಕಥೆಯನ್ನು ಪ್ರಶ್ನಿಸಿ, ಆ ಕಥೆಯಲ್ಲಿ ಪ್ರಸ್ತಾಪಿತನಾಗುವ ವೀರಬಲ್ಲಾಳನ ಕಾಲಕ್ಕೂ ಮೊದಲು ಬೆಂಗಳೂರು ಇತ್ತು ಎಂದು ತಿಳಿದು, ತಕ್ಕಂತೆ ಬೆಂಗಳೂರಿನ ಇತಿಹಾಸಕ್ಕೆ ತಿದ್ದುಪಡಿ ಮಾಡಲಾಯಿತು. ಹೊಸ ಹೊಸ ದಾಖಲೆಗಳು, ಆಕರಗಳು ದೊರೆತಾಗ ಇಂತಹ ತಿದ್ದುಪಡಿಗಳು ಅಗತ್ಯವಾಗುತ್ತವೆ. ಆಕರಗಳನ್ನು ಹುಡುಕುವ ಕೆಲಸ ನಿರಂತರವಾಗಿ ಆಗುತ್ತಿರಬೇಕು. ಆಕರಗಳನ್ನು ಹುಡುಕುವ ಕೆಲಸದಲ್ಲಿ ಇತ್ತೀಚಿನ ದಿನಗಳಲ್ಲಿ ವಿದ್ಯಾರ್ಥಿ ಮಿತ್ರ, ತರುಣ ವಿದ್ವಾಂಸ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಪ್ರವಾಚಕರಾಗಿರುವ ಡಾ|| ಎಂ. ಜಿ. ಮಂಜುನಾಥರ ಕಾರ್ಯ ಗಮನಾರ್ಹವಾಗಿದೆ. ಈ ಸಂದರ್ಭದಲ್ಲಿ ಅವರಿಗೆ ದೊರೆತಿರುವ ಬೆಂಗಳೂರು ವಿಶ್ವವಿದ್ಯಾಲಯದ ಶ್ರೀ ಕೆಂಪೇಗೌಡ ಅಧ್ಯಯನ ಪೀಠದ ನೆರವೂ ಮಹತ್ವದ್ದಾಗಿದೆ. ಯಲಹಂಕದ ನಾಡಪ್ರಭು ಕೆಂಪೇಗೌಡ ಮತ್ತು ಅವರ ಇಡೀ ವಂಶವನ್ನು ಕುರಿತು ವಿಶೇಷ ಅಧ್ಯಯನಕ್ಕೆ ತೊಡಗಿರುವ ಕೆಂಪೇಗೌಡ ಅಧ್ಯಯನ ಪೀಠ ಕೆಂಪೇಗೌಡರ ವಂಶಕ್ಕೆ ಸಂಬಂಧಿಸಿದ ಶಾಸನ, ಜಾನಪದ, ಸಾಹಿತ್ಯ ಇತ್ಯಾದಿ ಎಲ್ಲ ಆಕರಗಳ ಬಗೆಗೂ ಮುತುವರ್ಜಿ ವಹಿಸಿ ಅಧ್ಯಯನಕ್ಕೆ ಪ್ರೇರಣೆ ನೀಡಿದೆ. ವಿಚಾರ ಸಂಕಿರಣಗಳ ಮೂಲಕ ಹೊಸ ವಿಚಾರಗಳನ್ನು ಆಸಕ್ತರ ಗಮನಕ್ಕೆ ತಂದು, ಪ್ರಕಟಣೆಯ ಮೂಲಕ ದಾಖಲಿಸಿ, ಅಭಿನಂದನಾರ್ಹ ಕಾರ್ಯ ಮಾಡಿದೆ.

ಅವೆನ್ಯೂ ರಸ್ತೆಯ ಸೆಕೆಂಡ್‌ಹ್ಯಾಂಡ್ ಪುಸ್ತಕದ ವ್ಯಾಪಾರಿಯೊಬ್ಬರ ಬಳಿ ಇದ್ದ ಇಂಗ್ಲಿಷ್ ಭಾಷೆಯ ಹಸ್ತಪ್ರತಿಗಳನ್ನು ಪತ್ತೆಮಾಡಿ, ಅಧ್ಯಯನ ಮಾಡಿ, ಅನುವಾದಿಸಿ, ಸಂಪಾದಿಸಿರುವ ಡಾ|| ಎಂ. ಜಿ. ಮಂಜುನಾಥ್ ಬೆಂಗಳೂರಿನ ಇತಿಹಾಸದ ಪುನಾರಚನೆಗೆ ಪುನಃ ಅವಕಾಶ ಕಲ್ಪಿಸಿದ್ದಾರೆ. ಇತಿಹಾಸದ ವಿವರಗಳಿರುವ ಗದ್ಯರೂಪದ ಬರಹವನ್ನು 'ಬಖೈರ್' ಎಂದು ಕರೆಯಲಾಗುತ್ತದೆ. ಇಂತಹ ಒಂಭತ್ತು ಬಖೈರುಗಳು ಈಗ ಅಧ್ಯಯನಕ್ಕೆ ಲಭ್ಯವಾಗಿವೆ. ಒಂದೇ ಕಟ್ಟಿನಲ್ಲಿದ್ದ ಈ ಒಂಭತ್ತು ಬಖೈರುಗಳು ಇಂಗ್ಲಿಷ್ ಭಾಷೆಯಲ್ಲಿದ್ದು, ಇವುಗಳಲ್ಲಿ ಒಂದೆರಡನ್ನು ಹಿಂದೆ ಬೆಂಗಳೂರಿನ ಇತಿಹಾಸ ಬರೆದವರು ಗಮನಿಸಿರಬಹುದಾದರೂ, ವಿವರವಾದ ಪರಿಶೀಲನೆ ಇದ್ದಂತೆ ಕಾಣುವುದಿಲ್ಲ. ಈಗ ಎಲ್ಲಾ ಒಂಭತ್ತು ಬಖೈರುಗಳೂ ಪ್ರಕಟಗೊಂಡಿವೆ. ಬಹುತೇಕ ಕ್ರಿ.ಶ. ೧೯ನೆಯ ಶತಮಾನದ ಆರಂಭದ ದಶಕದಲ್ಲಿ ಬರಯಲಾಗಿರುವ ಈ ಬಖೈರುಗಳ ಪೈಕಿ ಬೆಂಗಳೂರು ಬಖೈರು ಹೆಚ್ಚು ಐತಿಹಾಸಿಕ ವಿವರಗಳನ್ನು ನೀಡಿದೆ. ಕೆಲವು ಬಖೈರುಗಳು ದೇವಾಲಯಗಳ ಹೆಸರು ಮತ್ತು ಅಲ್ಲಿರುವ ದೇವರುಗಳ ಬಗ್ಗೆ ಮಾತ್ರ ತಿಳಿಸುತ್ತವೆ. ಹೆಚ್ಚಿನ ಐತಿಹಾಸಿಕ ವಿವರಗಳು ಅಲ್ಲಿ

**ಡಾ|| ಎಚ್. ಎಸ್. ಗೋಪಾಲ ರಾವ್**

ಇಲ್ಲವಾದರೂ, ಆ ಕಾಲಕ್ಕೆ ಅಸ್ತಿತ್ವದಲ್ಲಿದ್ದ ದೇವಾಲಯಗಳ ಬಗ್ಗೆ ತಿಳಿಯುವುದು ಮಾತ್ರವಲ್ಲದೆ, ಬಖೈರನ್ನು ಬರೆದವನು ಚೆನ್ನಾಗಿ ತೆಲುಗು ಬಲ್ಲವನಾಗಿರಬೇಕು ಅಥವಾ ತೆಲುಗು ಬಲ್ಲವರಿಂದ ಮಾಹಿತಿಯನ್ನು ಪಡೆದಿರಬಹುದಾದ ಕಾರಣಗಳಿಂದ ದೇವರುಗಳ ಹೆಸರುಗಳ ಸಂಬೋಧನೆಯಲ್ಲಿ ತೆಲುಗು ಭಾಷೆಯ ಛಾಯೆ ಇದೆ. ಇಲ್ಲಿನ ಹೆಚ್ಚಿನ ಬಖೈರುಗಳು ಮೂಲತಃ ಮರಾಠೀ ಭಾಷೆಯಲ್ಲಿದ್ದು ಮೊದಲು ಇಂಗ್ಲಿಷ್‌ಗೆ ಅನುವಾದವಾಗಿದ್ದ ಅವುಗಳನ್ನು ಡಾ|| ಮಂಜುನಾಥ್ ಈಗ ಕನ್ನಡ ಭಾಷೆಗೂ ಅನುವಾದ ಮಾಡಿ ಉಪಕರಿಸಿದ್ದಾರೆ.

ಬೆಂಗಳೂರಿನ ಬಖೈರಿನಲ್ಲಿ ವೀರಬಲ್ಲಾಳನ ಕಾಲದಿಂದ ಟಿಪ್ಪು ಸುಲ್ತಾನನ ಮರಣದವರೆಗಿನ ಇತಿಹಾಸದ ಕಥನ ಇದೆ. ಇದು ಬಹುತೇಕ ಹೇಳಿಕೆಯ ಅಥವಾ ಕೇಳಿದ್ದ ಕಥೆಗಳನ್ನು ಮತ್ತು ಸ್ಥಳ ಪುರಾಣಗಳನ್ನು ಆಧರಿಸಿ ಬರೆದ ಬಖೈರು. ಪೆನುಗೊಂಡೆ ಸಂಸ್ಥಾನದ ವ್ಯಾಪ್ತಿಗೆ ಎಲ್ಲ ರಾಜ್ಯಗಳು ಸೇರಿದ ನಂತರ ಬೆಂಗಳೂರು ತಾಲ್ಲೂಕಿನ ಯಲಹಂಕ ಹೋಬಳಿಯನ್ನು ಪೆನುಗೊಂಡೆಯ ಅರಸರು ಜೇಯಗೌಡನಿಗೆ ನೀಡಿದರು. ಈ ಜೇಯಗೌಡನ ಹೆಸರನ್ನು ಕುಕ್ಕೆ ಸುಬ್ರಹ್ಮಣ್ಯದ ಒಂದು ತಾಮ್ರ ಶಾಸನ ಮಾತ್ರ ಪ್ರಸ್ತಾಪಿಸಿತ್ತು. ಈಗ ಈ ಬಖೈರಿನಲ್ಲಿಯೂ ಅವನ ಹೆಸರು ಪ್ರಸ್ತಾಪಗೊಂಡಿರುವುದರಿಂದ ಜೇಯಗೌಡನ ಅಸ್ತಿತ್ವದ ಬಗೆಗಿದ್ದ ಅನುಮಾನಗಳನ್ನು ಈಗ ಬದಿಗಿರಿಸಬಹುದು. ಅದೇ ಬಖೈರು ಯಲಹಂಕ ನಾಡಪ್ರಭು ಎಂಬ ಬಿರುದನ್ನು ಧರಿಸಿದ ಕೆಂಪೇಗೌಡನು ಜೂನ ಎಂಬ ಸ್ಥಳದಲ್ಲಿ ಹೊಸ ಬೆಂಗಳೂರನ್ನು ಸ್ಥಾಪಿಸಿದ ವಿಷಯ ತಿಳಿಸುತ್ತದೆ. ಈ ಜೂನ ಎಂಬ ಸ್ಥಳ ಯಾವುದು ಎಂದು ಈಗ ಸ್ಪಷ್ಟವಿಲ್ಲದಿದ್ದರೂ, ಒಂದಲ್ಲ ಒಂದು ದಿನ ಆ ಸ್ಥಳವನ್ನು ಪತ್ತೆ ಮಾಡುವ ಸಾಧ್ಯತೆಗಳಿವೆ. ಈ ಬಖೈರಿನಿಂದ ಸ್ಪಷ್ಟವಾಗುವ ವಿಷಯವೆಂದರೆ ಕೆಂಪೇಗೌಡ ಹೊಸ ಬೆಂಗಳೂರನ್ನು ಕಟ್ಟಿಸಿದ. ಎಂದರೆ ಆ ಮೊದಲೇ ಒಂದು ಬೆಂಗಳೂರು ಇತ್ತು. ಕೆಂಪೇಗೌಡ ಹೊಸದಾಗಿ ಕಟ್ಟಿಸಿದ ಬೆಂಗಳೂರು ಎಂದರೆ ಕೋಟೆ ಮತ್ತು ಪೇಟೆಗಳು ಸೇರಿದ್ದ ಬೆಂಗಳೂರು ಎಂದು ತಿಳಿಯುವ ಸಾಧ್ಯತೆಗಳಿವೆ. ಬಖೈರಿನ ಪ್ರಕಾರ ಬೆಂಗಳೂರಿನ ನಿರ್ಮಾಪಕ ಮೊದಲನೆಯ ಕೆಂಪೇಗೌಡ. ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ಬೆಂಗಳೂರು ಶಹಜಿಯ ವಶವಾಯಿತು. ಇಮ್ಮಡಿ ಕೆಂಪೇಗೌಡ ಮಾಗಡಿಗೆ ಹೋಗಿ, ಅಲ್ಲಿಂದ ಆಳ್ವಿಕೆ ನಡೆಸಿದ. ಶಹಜಿಯ ಮನೆತನದವರು ಒಟ್ಟು ೮೧ ವರ್ಷಗಳ ಕಾಲ ಆಳ್ವಿಕೆ ನಡೆಸಿದ ನಂತರ ಬೆಂಗಳೂರು ಬಿಜಾಪುರದ ರಣದುಲ್ಲಾಖಾನನ ವಶವಾಯಿತು. ಬೆಂಗಳೂರು ಬಖೈರಿನ ಪ್ರಕಾರ ಶಹಜೀ ಮನೆತನದ ಕೊನೆಯ ದೊರೆ ಏಕೋಜಿಯ ಕಾಲದಲ್ಲಿ ಬೆಂಗಳೂರನ್ನು ಖಾಸಿಂಖಾನನಿಗೆ ಬಿಟ್ಟುಕೊಡಲಾಯಿತು. ಖಾಸಿಂಖಾನನಿಂದ ಮೈಸೂರಿನ ಚಿಕ್ಕದೇವರಾಜ ಒಡೆಯರು ಕ್ರಿ.ಶ. ೧೬೮೭ (ಶಕ ೧೬೦೯)ರಲ್ಲಿ ಬೆಂಗಳೂರನ್ನು ಖರೀದಿಸಿದರು. ಈವರೆಗೆ ತಿಳಿದಿದ್ದ ಪ್ರಕಾರ ಚಿಕ್ಕದೇವರಾಜ ಒಡೆಯರು ಮೊಗಲರಿಂದ ಬೆಂಗಳೂರನ್ನು ಗುತ್ತಿಗೆಗೆ ಪಡೆದುಕೊಂಡರು. ಆದರೆ ಈ ಬಖೈರಿನ ಪ್ರಕಾರ ಚಿಕ್ಕದೇವರಾಜರು ಬೆಂಗಳೂರನ್ನು ಖರೀದಿಸಿದರು.

ಈಗ ದೊರೆತಿರುವ ಬೆಂಗಳೂರಿಗೆ ಸಂಬಂಧಿಸಿದ ಬಖೈರುಗಳ ಪೈಕಿ ಸ್ವಲ್ಪಮಟ್ಟಿಗೆ ವಿಸ್ತಾರವಾದ ಬಖೈರೆಂದರೆ 'ಬೆಂಗಳೂರಿನ ಐತಿಹಾಸಿಕ ಬಖೈರು'. ಈ ಬಖೈರಿನಲ್ಲಿ ವೀರಬಲ್ಲಾಳರಾಯ ಮತ್ತು ಬೆಂದ ಅವರೆ ಕಾಳಿನ ಕಥೆ ಪ್ರಸ್ತಾಪಿತವಾಗಿದೆ. ಶಕವರ್ಷ ೧೩೪೦ (ಕ್ರಿ.ಶ. ೧೪೧೮) ರಲ್ಲಿ ಪಾಲಾರ್ (ಈ ನದಿಗೆ ಚೀರ ಎಂಬ ಹೆಸರೂ ಇದ್ದುದನ್ನು ಬಖೈರು ತಿಳಿಸಿದೆ) ನದಿಯನ್ನು ದಾಟಿ ಬಂದ ಏಳು ಬಂಡಿಕಾಪುಲು ಕುಟುಂಬದವರು ಬೇರೆ ಬೇರೆ ಭಾಗಗಳಲ್ಲಿ ನೆಲೆಸಿ ಆಳ್ವಿಕೆ ನಡೆಸಿದ್ದನ್ನು ಸಂಕ್ಷಿಪ್ತವಾಗಿ ತಿಳಿಸುತ್ತಲೇ ಜಯಗೌಡ ಮತ್ತು ಅವನ ವಂಶಸ್ಥರು ಯಲಹಂಕನಾಡನ್ನು ಆಳಿದ ವಿಷಯವನ್ನು ವಿಸ್ತಾರವಾಗಿಯೇ ತಿಳಿಸಿದೆ. ಶಾಲಿವಾಹನ ಶಕ ೧೪೫೮ರ ಹೇವಿಳಂಬಿ ಸಂವತ್ಸರದ ಮಾಘ ಶುದ್ಧ ತ್ರಯೋದಶಿ (೧೪-೧-೧೫೩೭)ಯಂದು ಪ್ರಶಸ್ತವೆಂದು ಒಪ್ಪಿತವಾಗಿದ್ದ ಸ್ಥಳದಲ್ಲಿ ಕೆಂಪೇಗೌಡನು ಅಚ್ಯುತರಾಯನ ಅನುಮತಿಯ ಮೇರೆಗೆ ಕೋಟೆ ಕಟ್ಟಿ ಪಟ್ಟಣವೊಂದನ್ನು ನಿರ್ಮಿಸಿದ. ಆ ಪಟ್ಟಣವೇ ಇಂದಿನ ಬೆಂಗಳೂರು. ಇದಕ್ಕೆ ಆ ಕಾಲಕ್ಕೆ ೧೨ ಹೋಬಳಿಗಳು ಸೇರಿದ್ದವು. ಬೆಂಗಳೂರು ಮತ್ತು ಅದರ ನೆರೆಹೊರೆಯಲ್ಲಿ ಕೆಂಪೇಗೌಡನ ಕಾಲದಲ್ಲಿ ನಿರ್ಮಾಣವಾದ ಐದು ದೇವಾಲಯಗಳ (ಗವಿಗಂಗಾಧರೇಶ್ವರ, ಬಸವೇಶ್ವರ, ದೊಡ್ಡವಿಘ್ನೇಶ್ವರ, ಹನುಮಂತ ಮತ್ತು ಚೆನ್ನಿಗರಾಯಸ್ವಾಮಿ) ಹೆಸರುಗಳಿವೆ. ಬಖೈರಿನ ಪ್ರಕಾರ ಚೆನ್ನಿಗರಾಯಸ್ವಾಮಿ ದೇವಾಲಯ ಕೋಟೆಯ ಒಳಗಿದೆ. ಅದೇ ಬಖೈರಿನ ಮುಂದುವರಿದ ಭಾಗದಲ್ಲಿ ಕೆಂಪೇಗೌಡ ಕಟ್ಟಿಸಿದ ಕೆಂಪಾಂಬುಧಿ ಕೆರೆ ಮತ್ತು ಸ್ಥಾಪಿಸಿದ ಮೂರು ಅಗ್ರಹಾರಗಳ ವಿಚಾರವಿದೆ. ಸದಾಶಿವರಾಯನ ಹೆಸರಿನಲ್ಲಿ ಅಳಿಯ ರಾಮರಾಯ ವಿಜಯನಗರ ಸಾಮ್ರಾಜ್ಯವನ್ನು ಆಳುತ್ತಿದ್ದಾಗ ರಾಜನ ಅನುಮತಿಯಿಲ್ಲದೆ ಕೆಂಪೇಗೌಡ ಭೈರವ ನಾಣ್ಯಗಳನ್ನು ಅಚ್ಚುಹಾಕಿಸಿದ ಎಂಬ ಆಪಾದನೆಯ ಮೇಲೆ ಅವನನ್ನು ಬಂಧನದಲ್ಲಿಡಿಸಿ, ಚನ್ನಪಟ್ಟಣದ ಜಗದೇವರಾಯನಿಗೆ ಬೆಂಗಳೂರು ಸೇರಿದ್ದ ೪೬ ಜಿಲ್ಲೆಗಳನ್ನು ಅಮರಮಾಗಣೆಯಾಗಿ ನೀಡಲಾಗಿತ್ತು. ಕೆಂಪೇಗೌಡ ಬಂಧನದಿಂದ ಬಿಡುಗಡೆಯಾಗಿ ಬಂದ ನಂತರ ಅವನಿಗೆ ರಾಜ್ಯವನ್ನು ಹಿಂದಿರುಗಿಸಲಾಯಿತು. ಕೆಂಪೇಗೌಡನ ಮಗ ಇಮ್ಮಡಿ ಕೆಂಪೇಗೌಡ ಮಾಗಡಿ ಮತ್ತು ಸಾವಂತಿದುರ್ಗಗಳನ್ನು ವಶಪಡಿಸಿಕೊಂಡ. ಅದೇ ಸಂದರ್ಭದಲ್ಲಿ ಬೆಂಗಳೂರು ಬಿಜಾಪುರದ ರಣದುಲ್ಲಾಖಾನನ ವಶವಾಯಿತು. ಆಡಳಿತವು ಶಹಜಿಯ ಪಾಲಾಯಿತು. ಶಹಜಿಯ ವಂಶಸ್ಥರ ಆಳ್ವಿಕೆಯು ಮೊಘಲರ ಪಾಲಾಯಿತು. ಆಗ ಮೊಘಲರಿಗೆ ಮೈಸೂರಿನ ಚಿಕ್ಕದೇವರಾಜ ಒಡೆಯರ ಸಹಾಯವಿತ್ತು. ಮೊಘಲ್ ಸರ್ದಾರ ಖಾಸಿಂಖಾನನಿಂದ ಮೂರು ಲಕ್ಷ ಪಗೋಡಗಳಿಗೆ ಬೆಂಗಳೂರು ಜಿಲ್ಲೆಯ ಹನ್ನೆರಡು ಹೋಬಳಿಗಳನ್ನು ಕೊಂಡುಕೊಂಡನು. ಬೆಂಗಳೂರನ್ನು ಕೊಂಡ ವಿಷಯ ಈಗಾಗಲೇ ತಿಳಿದಿದೆ. ಆದರೆ ಈ ಬಖೈರಿನ ಪ್ರಕಾರ ಬೆಂಗಳೂರಿನ ಜೊತೆಗೆ ಇತರ ಹೋಬಳಿಗಳ ಮಾರಾಟವೂ ಆಗಿರುವುದು ಹೊಸ ವಿಚಾರವಾಗಿದೆ. ಮೈಸೂರು ಅರಸರ ಪಾರುಪತ್ಯೆಗಾರರ ಪೈಕಿ ಮಾಲಾರಂಗಯ್ಯನ ಕಾಲದಲ್ಲಿ (ಕ್ರಿ. ಶ. ೧೬೯೮) ಕೋಟೆಯ ದುರಸ್ತಿಯಾಗಿ, ಕೋಟೆಯೊಳಗೆ ಶಿಥಿಲ


'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ
ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಾರ್ಡೋಜ್ ಗ್ರಂಥಾಲಯದ ಆವರಣ, ಸ್ಟೇಷನ್ ರಸ್ತೆ, ಗದಗ - ೫೮೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಪರ್ವೀನ್ ಟಾಕೀಸ್ ಬಳಿ, ಉದ್ಗೀರ್ ರಸ್ತೆ, ಬೀದರ್ - ೫೮೫ ೪೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಈಡಿಗರ ಹಾಸ್ಟೆಲ್ ಆವರಣ, ಕೋರ್ಟ್ ರಸ್ತೆ, ಬಳ್ಳಾರಿ - ೫೮೩ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ.ಬಿ. ರಸ್ತೆ, ದಾವಣಗೆರೆ - ೫೭೭ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕನ್ನಡ ಸಾಹಿತ್ಯ ಭವನ ಆವರಣ, ಕಿತ್ತೂರು ರಾಣಿ ಚೆನ್ನಮ್ಮ ವೃತ್ತ, ಬೆಳಗಾವಿ - ೫೯೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಿತ್ತೂರ ಕಾಂಪ್ಲೆಕ್ಸ್, ದೇನಾ ಬ್ಯಾಂಕ್ ಬಳಿ, ಜುಬಿಲಿ ಸರ್ಕಲ್, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾ ಕೇಂದ್ರ ಗ್ರಂಥಾಲಯದ ಆವರಣ, ಬಿ. ಎಚ್. ರಸ್ತೆ, ತುಮಕೂರು - ೫೭೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯ, ಮೊದಲನೇ ಮಹಡಿ, ಕಸ್ತೂರಬಾ ರಸ್ತೆ, ಬೆಂಗಳೂರು - ೫೬೦ ೦೦೧

# ಪುಣ್ಯಾತಗಿತ್ತಿ ನನ್ನ ಮಡದಿ



ಎಂಥ ಪುಣ್ಯಾತಗಿತ್ತಿ ನನ್ನ ಮಡದಿ
ಬಡತನಕss ಹೊಂದಿ ಬಾಳ್ವೆ ಮಾಡುವಾಕಿ
ಮನೆ, ಕೇರಿ, ಊರಮಂದಿಗೆಲ್ಲಾ
ಮೆಚ್ಚಿನ ಸೊಸೆ ಅಂತ ಕರೆಯಿಸಿಕೊಂಡಾಕಿ.

ಹೆಗಲಿಗೆ ಹೆಗಲಕೊಟ್ಟು ನನ್ನ ಕೂಡ
ಗಂಡಸರ್‍ಹಾಂಗ ದುಡಿಯುವಾಕಿ
ಧ್ವನಿಗೆ ಧ್ವನಿಯಾಗಿ, ಶಕ್ತಿಗೆ ಶಕ್ತಿಯಾಗಿ
ಬಾಳ ಬಂಡಿಯ ಗಾಲಿ ನೂಕುವಾಕಿ

ಆಸರಕಿ ಬ್ಯಾಸರಕಿ ಇಲ್ಲದೇ
ಮನೆ ಕೆಲಸವೆಲ್ಲ ತಾನೇ ಮಾಡುವಾಕಿ
ಮನಿಮಂದಿಯೆಲ್ಲ ಊಟ ಮಾಡಿದ ಮ್ಯಾಲ
ಇದ್ದದ್ದು ತಿಂದು ದೊಡ್ಡತನ ಮೆರೆದಾಕಿ

ಅಳುವ ಮಗುವನ್ನೆತ್ತಿ ಮುದ್ದಾಡಿ
ಅಂಗೈ ಮುಂಗೈಯಲ್ಲಿ ಲಾಲಿ ಹಾಡುವಾಕಿ
ಕಣ್ಣನದರು ತಾಕಿತ್ತೆಂದು ಹಾಂಗ
ಸೆರಗ ಮರೆಮಾಡಿ ಎದೆಹಾಲು ಕುಡಿಸುವಾಕಿ

ಹಾಸಿಗೆ ಹಾಸಿ ಮಕ್ಕಳ ಮಲಗಿಸಿ
ನನ್ನ ಮಂಚಕ ಬರುವಾಕಿ
ಸರಸ ಸಲ್ಲಾಪದಿಂದೊಡಗೂಡಿ
ಸುಖದ ಹೊಳೆಯನ್ನೇ ಹರಿಸುವಾಕಿ.

ಅತ್ತಿ-ಮಾವ, ಭಾವ-ಮೈದುನರಿಗಂಜಿ
ನೀತಿ ಮಗಳು ನಡೆದುಕೊಂಡಾಕಿ
ನೆಗಣ್ಣಿ-ನಾದಿನಿ ಚಾಡಿ ಚುಗ್ಲಿ ಮಾತ ಮನದಲ್ಲಿರಿಸಿ
ಮನೆ ಬಾಗಿಲದ ಹೊರಗ ಬಿಡದಾಕಿ.

ಏನಾದರೂನು ಯೇನ ಬಡತನ ಸಿರಿತನ
ಕಡೆತನಕ ಬರುವುದಿಲ್ಲಯೆನ್ನುವಾಕಿ
ನೀತಿ-ನಡಾವಳಿಕೆ, ಕೈಬಾಯಿ ಹಸನ
ಲೋಕದಲ್ಲಿ ಉಳಿತಾವಯೆನ್ನುವಾಕಿ.


**ಡಾ|| ಎಸ್ಸಾರ್. ರಾಮರಥ**
'ಹೊಂಬೆಳಕು', ಅಂಚೆ : ಯರನಾಳ
ಬಸವನ ಬಾಗೇವಾಡಿ ತಾಲ್ಲೂಕು,
ಬಿಜಾಪುರ ಜಿಲ್ಲೆ - ೫೮೬ ೧೨೨


ವಾಗಿದ್ದ ಬಸವಣ್ಣನ ಗುಡಿಯನ್ನು ದುರಸ್ತಿ ಮಾಡಿಸಿ, ಆ ದೇವಾಲಯದಲ್ಲಿ ವೆಂಕಟರಮಣನ ವಿಗ್ರಹವನ್ನು ಪ್ರತಿಷ್ಠಾಪಿಸಿದ ವಿಷಯದ ಜೊತೆಗೆ ಅಲ್ಲಿ ಮೊದಲಿದ್ದ ಬಸವೇಶ್ವರ ವಿಗ್ರಹವನ್ನು ಮಾಮೂಲು ಪೇಟೆಯ ಕೆಲವು ಲಿಂಗಾಯತ ವ್ಯಾಪಾರಿಗಳು ಬೇರೆ ದೇವಾಲಯ ಕಟ್ಟಿಸಿ ಪ್ರತಿಷ್ಠಾಪಿಸಿದರು ಎಂದು ತಿಳಿಸುತ್ತದೆ. ಹೀಗೆ ಹೊಸದಾಗಿ ನಿರ್ಮಾಣವಾದ ದೇವಾಲಯವೇ ಬೆಳ್ಳಿ ಬಸವ ದೇವಾಲಯ. ಇದು ಹೊಸ ವಿಚಾರ. ಇದರ ಪ್ರಕಾರ ಕೋಟೆ ವೆಂಕಟರಮಣ ದೇವಾಲಯವು ಮೂಲತಃ ಬಸವೇಶ್ವರ ಗುಡಿಯಾಗಿತ್ತು. ಕ್ರಿ.ಶ. ೧೭೦೫ರ ಕೊತ್ತನೂರು ಶಾಸನದ ಪ್ರಕಾರ ಚಿಕ್ಕದೇವರಾಜ ಒಡೆಯರು ಕೋಟೆ ವೆಂಕಟರಮಣ ಸ್ವಾಮಿಯ ಪ್ರತಿಷ್ಠಾಪನೆ ಮಾಡಿದರು. ಈ ಎರಡೂ ಹೇಳಿಕೆಗಳಲ್ಲಿ ಹೊಂದಾಣಿಕೆ ಇಲ್ಲದಿರುವುದರಿಂದ ಇದರ ಸತ್ಯಾಸತ್ಯತೆಗಳ ಬಗ್ಗೆ ಇನ್ನೂ ವಿಚಾರ ಮಾಡುವ ಅಗತ್ಯತೆ ಇದೆ. ಹೈದರ್ ಆಲಿಯ ಆಳ್ವಿಕೆಯ ಅವಧಿಯಲ್ಲಿ ಕಿಲ್ಲೇದಾರ ಇಬ್ರಾಹಿಂ ಸಾಹೇಬ್ ಗಟ್ಟಿಯಾದ ಕಲ್ಲು ಮತ್ತು ಗಾರೆಯನ್ನು ಬಳಸಿ ಪಾಯದಿಂದ ಆರಂಭಿಸಿ ಬೆಂಗಳೂರಿನ ಕೋಟೆಯನ್ನು ಕಟ್ಟಿಸಿದ ವಿಷಯವನ್ನು ಈ ಬಖೈರು ತಿಳಿಸುತ್ತದೆ. ಜೊತೆಗೆ ಅದೇ ಕಾಲಕ್ಕೆ ಬೆಂಗಳೂರಿನಲ್ಲಿ ಪ್ರತಿ ತಿಂಗಳು ಎರಡು ತೋಪನ್ನು ಎರಕ ಹೊಯ್ಯುವ ಮತ್ತು ಮೂವತ್ತೈದು ಬಂದೂಕುಗಳನ್ನು ತಯಾರಿಸುವ ಎರಡು ಕಾರ್ಖಾನೆಗಳಿದ್ದ ವಿಷಯವೂ ಬೆಳಕಿಗೆ ಬಂದಿದೆ. ಟಿಪ್ಪು ಸುಲ್ತಾನ್ ಆರ್ಕಾಟಿನ ರಾಯಜೀಯ ಅಳಿಯನಾದ ಜೋಗೀಪಂತ್ ಎಂಬುವವನನ್ನು ಬೆಂಗಳೂರು ಪ್ರದೇಶದ ಅಸಫ್ ಆಗಿ ನೇಮಿಸಿದ್ದ. ಇದೇ ಜೋಗೀಪಂತನು ಬ್ರಿಟಿಷ್ ಸೈನ್ಯದೊಡನೆ ಶಾಮೀಲಾಗಿ ರಾಜದ್ರೋಹ ಮಾಡಬಹುದೆಂಬ ಅನುಮಾನದಿಂದ ಅವನನ್ನು ಕೊಲೆ ಮಾಡಿಸಲಾದ ವಿಷಯವೂ ಈ ಬಖೈರಿನಲ್ಲಿದೆ. ಹೀಗೆ ಈವರೆಗೆ ತಿಳಿಯದ ಅನೇಕ ಹೊಸ ವಿಚಾರಗಳನ್ನು 'ಬೆಂಗಳೂರಿನ ಐತಿಹಾಸಿಕ ಬಖೈರು' ಬೆಳಕಿಗೆ ತಂದಿದೆ. 'ಬೆಂಗಳೂರಿನ ದೇವಾಲಯಗಳು', 'ಬೆಂಗಳೂರಿನ ಬಳಿಯ ಕೆಲವು ವಿಶೇಷ ಗವಿಗಳು ಮತ್ತು ಪೂಜಾ ಸ್ಥಾನಗಳು', 'ಕೃಷ್ಣಾಪುರ ಮತ್ತು ಬೆಂಗಳೂರು ನಡುವಿನ ದೇವಾಲಯಗಳು', 'ಹಲಸೂರು ಮತ್ತು ದೇವಸ್ಥಾನದ ಐತಿಹಾಸಿಕ ಬಖೈರು', 'ಬೆಂಗಳೂರಿನ ಮೇಲೆ ಮುಸ್ಲಿಮರ ದಂಡಯಾತ್ರೆಯ ಕಾರಣಗಳು', 'ಮಾಗಡಿಯ ಬಖೈರು' ಮತ್ತು 'ಮಾಗಡಿ ಜಿಲ್ಲೆಯ ಚಾರಿತ್ರಿಕ ಬಖೈರು'ಗಳು ಬಹುತೇಕ ಈಗಾಗಲೇ ತಿಳಿದಿರುವ ವಿಚಾರಗಳನ್ನು ಸ್ಪಷ್ಟಪಡಿಸಿವೆ.

ಈ ಬಖೈರುಗಳಲ್ಲಿ ಕೆಲವು ಮರಾಠಿಯಿಂದ ಇಂಗ್ಲಿಷ್‌ಗೆ ಅನುವಾದಗೊಂಡಿದ್ದ ವಿಚಾರವನ್ನೂ ಅನುವಾದಿತರ ಹೆಸರುಗಳನ್ನೂ ತಿಳಿಸಿರುವ ಡಾ|| ಎಂ. ಜಿ. ಮಂಜುನಾಥ್ ಎಲ್ಲಾ ಬಖೈರುಗಳನ್ನೂ ಕನ್ನಡಕ್ಕೆ ಅನುವಾದಿಸಿ ಸಾಕಷ್ಟು ದೀರ್ಘವಾದ ಮತ್ತು ಅಗತ್ಯವಾದ ಪ್ರಸ್ತಾವನೆಯ ಮೂಲಕ ದೊರೆತಿರುವ ಎಲ್ಲ ಬಖೈರುಗಳು ಮತ್ತು ಅವುಗಳೊಳಗಿನ ಮಹತ್ವದ ವಿಚಾರಗಳನ್ನು ಬೆಳಕಿಗೆ ತಂದು ಇತಿಹಾಸದ ಅಧ್ಯಯನದಲ್ಲಿ ಆಸಕ್ತರಾಗಿರುವ ವರೆಲ್ಲರ ಗೌರವಕ್ಕೆ ಪಾತ್ರರಾಗಿದ್ದಾರೆ. ಕೃತಿಯ ಪ್ರಧಾನ ಸಂಪಾದಕಿಯಾದ ಡಾ|| ಎಂ. ಜಮುನಾ ಅವರ ಪ್ರಧಾನ ಸಂಪಾದಕರ ಮಾತುಗಳಲ್ಲೂ ದೊರೆತಿರುವ ಬಖೈರುಗಳಲ್ಲಿನ ವಿಶೇಷತೆಗಳ ಸುದೀರ್ಘ ಪ್ರಸ್ತಾವನೆ ಇದೆ.

ಈ ಬಖೈರುಗಳ ಮೂಲ ಮರಾಠಿ ಪತ್ರಗಳು ದೊರೆತರೆ ವಿಷಯಗಳ ನಿಖರತೆ ಮತ್ತಷ್ಟು ಸ್ಪಷ್ಟವಾಗುತ್ತದೆ. ಈ ಲೇಖನದ ಮೊದಲಿಗೆ ನಾನು ಪ್ರಸ್ತಾಪಿಸಿದ ವಿಷಯಗಳನ್ನು ಪುನಃ ನೆನಪು ಮಾಡಿಕೊಳ್ಳುತ್ತಾ ಬೆಂಗಳೂರಿನ ಬಗ್ಗೆ ತಿಳಿಯಬೇಕಾದ ಇನ್ನೂ ಅನೇಕ ಸಂಗತಿಗಳಿವೆ. ಮಾಹಿತಿ ತಂತ್ರಜ್ಞಾನದಲ್ಲಿ ಇಡೀ ವಿಶ್ವದ ಗಮನ ಸೆಳೆದು, ಅಡ್ಡಾದಿಡ್ಡಿಯಾಗಿ ಬೆಳೆಯುತ್ತಲೇ ಇರುವ, ಸಮಸ್ಯೆಗಳ ಆಗರವೇ ಆದ ಬೆಂಗಳೂರಿನ ಹುಟ್ಟು ಮತ್ತು ಈವರೆಗಿನ ಬೆಳವಣಿಗೆಯ ಬಗ್ಗೆ ಪುನಃ ಸಮಗ್ರ ಅಧ್ಯಯನ ನಡೆಯಲು ಇರುವ ಅವಕಾಶಗಳನ್ನು ಗುರುತಿಸಲು ನಿರಂತರ ಪ್ರಯತ್ನ ಮುಂದುವರಿಯುವ ನಿರೀಕ್ಷೆ ಇದೆ. ಈ ಬಖೈರುಗಳನ್ನು ಈವರೆಗೆ ರಕ್ಷಿಸಿದ್ದ ಮತ್ತು ಅವುಗಳನ್ನು ಲೋಕಕ್ಕೆ ಅನಾವರಣಗೊಳಿಸಿದ ಸಂಪಾದಕರು ಮತ್ತು ಸಂಬಂಧಿಸಿದ ಎಲ್ಲರೂ ಅಭಿನಂದನೆಗಳಿಗೆ ಪಾತ್ರರಾಗಿದ್ದಾರೆ.


**ಡಾ|| ಎಚ್. ಎಸ್. ಗೋಪಾಲ ರಾವ್**
'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩



# ಆಚ್ಛಾದನೆ ಎಂದರೇನು ?

ಆಚ್ಛಾದನೆ ಎಂಬ ಪದ ಕೆಲವರಿಗೆ ಸೋಜಿಗವಾಗಿ ಕಂಡಿದೆ. ಪ್ರತಿ ತಿಂಗಳ ದಿನಚರಿಯಲ್ಲೂ ಹೀಗೊಂದು ಪದ ಇರುತ್ತದೆ. ಜೊತೆಯಲ್ಲಿ ಕಾಣುವುದಿಲ್ಲ ಎಂಬ ಟಿಪ್ಪಣಿ. ಇದರ ಔಚಿತ್ಯವನ್ನು ಕೆಲವರು (ದೂರವಾಣಿ ಮೂಲಕ) ಪ್ರಶ್ನಿಸಿದ್ದಾರೆ. ಚಂದ್ರ ತನ್ನ ಕಕ್ಷೆಯಲ್ಲಿ ಮುಂದುವರೆಯುವಾಗ ಸೂರ್ಯನಿಗೆ ಅಡ್ಡವಾಗಿ ಹಾದುಹೋದರೆ ಸೂರ್ಯಗ್ರಹಣ ಎನ್ನುತ್ತೇವಷ್ಟೇ. ಹಾಗೆಯೇ ಅದು ಇತರ ಯಾವುದೇ ಗ್ರಹ, ನಕ್ಷತ್ರದ ಮುಂದೆಯೂ ಹಾದುಹೋಗಬಹುದು. ಈ ಘಟನೆಗೆ ಆಚ್ಛಾದನೆ ಎಂದು ಹೆಸರು. ಆದ್ದರಿಂದ ಸೂರ್ಯಗ್ರಹಣವನ್ನು ಆಚ್ಛಾದನೆ ಎಂದು ಕರೆಯಬಹುದು. ಆದರೆ ಈ ಬಗೆಯ ಎಲ್ಲಾ ಘಟನೆಗಳನ್ನು ನೋಡುವುದು ಸಾಧ್ಯವಿಲ್ಲ. ಕೆಲವೊಂದು ನಿರ್ದಿಷ್ಟ ಸ್ಥಳಗಳಿಂದ ಮಾತ್ರ ನೋಡ ಬಹುದು. ಘಟನೆ ನಮ್ಮ ಹಗಲಿ ನಲ್ಲಿ ನಡೆದರೂ ಕಾಣುವುದಿಲ್ಲ. ಕೆಲವೊಮ್ಮೆ ಆರಂಭ ಮಾತ್ರ ಕಾಣುವುದು; ಕೆಲವೊಮ್ಮೆ ಅಂತ್ಯ ಕಾಣುವುದು. ಒಟ್ಟಿನಲ್ಲಿ ಚಂದ್ರ ಆಯಾ ಕಾಯದ ಪಕ್ಕವೇ ಕಾಣುವುದರಿಂದ ಛಾಯಾಗ್ರಹಣಕ್ಕೆ ಇದು ಒಳ್ಳೆಯ ಅವಕಾಶವಾಗುತ್ತದೆ. ಇದನ್ನು ಪರಿಶೀಲಿಸಲು ಈ ತಿಂಗಳಲ್ಲಿ ಒಂದು ಒಳ್ಳೆಯ ಅವಕಾಶವಿದೆ. ೧೪ರ ಬೆಳಗಿನ ಜಾವ ಬಾಲಚಂದ್ರನನ್ನು ಗುರುತಿಸಿ ಇದರ ಪಕ್ಕದಲ್ಲೇ ಥಳಗುಟ್ಟುವ ಮಂಗಳ ಕಾಣಲಿದೆ. ಸುಮಾರು ೪ ಗಂಟೆಗೆ ಎರಡೂ ಒಟ್ಟಿಗೆ ಉದಯಿಸುವುವು. ಆದರೆ ೫:೪೯ಕ್ಕೆ ಚಂದ್ರ ಮಂಗಳ ವನ್ನು ಮರೆಮಾಡುವುದು. ಅಷ್ಟು ಹೊತ್ತಿಗೆ ಸಂಧ್ಯಾಪ್ರಕಾಶ ಆ ಭಾಗವನ್ನು ಕೆಂಪಾಗಿಸಿಬಿಡುವುದರಿಂದ ನೋಡುವುದು ಕಷ್ಟ. ಸುಮಾರು ೭ಗಂಟೆ ೯ ನಿಮಿಷಕ್ಕೆ ಚಂದ್ರನ ಹಿಂದಿನಿಂದ ಮಂಗಳ ಹೊರಬರುವುದಾದರೂ ಅದು ನಮಗೆ ಕಾಣುವುದಿಲ್ಲ.

ಹೀಗೆ ಚಂದ್ರನ ಸಹಾಯದಿಂದ ಗ್ರಹ, ನಕ್ಷತ್ರಗಳನ್ನು ಆಕಾಶದಲ್ಲಿ ಗುರುತಿಸುವುದೂ ಸುಲಭವಾಗುವುದರಿಂದಲೇ ಅದನ್ನು ಮಾರ್ಗದರ್ಶಿ ಎನ್ನಬಹುದು. ೨ರ ಹುಣ್ಣಿಮೆಯಂದು ಚಂದ್ರನ ಆಚೀಚೆ ಕಾಣುವ ಎರಡು ಪ್ರಕಾಶಮಾನ ನಕ್ಷತ್ರಗಳೇ ಚಿತ್ರಾ ಮತ್ತು ಸ್ವಾತಿ. ಎರಡು ದಿನ ಕಳೆದು ಸಂಜೆ ೭ ಗಂಟೆಗೆ ಪೂರ್ವದಿಕ್ಕನ್ನು ವೀಕ್ಷಿಸಿದಿರಾದರೆ ಚಂದ್ರನಿಲ್ಲದ ಕಾರಣ ಈ ಎರಡೂ ನಕ್ಷತ್ರಗಳು ಸ್ಫುಟವಾಗಿ ಕಾಣುತ್ತವೆ. ಅಂಗೈ ಆಕಾರದ ಹಸ್ತಾ ಎಂಬ ನಕ್ಷತ್ರ ಪುಂಜವನ್ನು ಗುರುತಿಸಬಹುದು. ಉತ್ತರದಲ್ಲಿ ಸಪ್ತರ್ಷಿಮಂಡಲ, ದಕ್ಷಿಣದ ಮಹಾಶ್ವಾನ, ಪಶ್ಚಿಮಕ್ಕೆ ಸರಿಯುತ್ತಿರುವ ಮಹಾವ್ಯಾಧ ಇವುಗಳಿಗೆ ಚಂದ್ರನ ಮಾರ್ಗದರ್ಶಿತ್ವ ದೊರಕುವುದಿಲ್ಲ – ಅವಶ್ಯಕತೆಯೂ ಇಲ್ಲ. ತಿಂಗಳ ಕೊನೆಗೆ ಪುನಃ ಚಂದ್ರ ಸಂಜೆಯಲ್ಲಿ ರೋಹಿಣಿ, ಪುನರ್ವಸು, ಮಘ ಈ ನಕ್ಷತ್ರಗಳ ಸಮೀಪ ಹಾದುಹೋಗುವುದನ್ನು ಕಾಣಬಹುದು. ಈ ಬಾರಿ ಅಮಾವಾಸ್ಯೆ ಎಂಬ ಘಟನೆಗೂ ಚಂದ್ರ-ಭೂಮಿ ಅಂತರ ಕನಿಷ್ಠವಾಗುವ ಘಟನೆಗೂ ಸುಮಾರು ಐದೂವರೆ ಗಂಟೆಗಳಷ್ಟೇ ವ್ಯತ್ಯಾಸವಿರುವುದರಿಂದ ಕಡಲತೀರದ ಉಬ್ಬರ ಇಳಿತ ಪ್ರತಿ ಅಮಾವಾಸ್ಯೆಗಿಂತ ಜೋರು ಎನ್ನಬಹುದು.




ಶುಕ್ರಗ್ರಹದ ಓಟವನ್ನು ಗಮನಿಸಿ. ರೋಹಿಣಿ ಮತ್ತು ಕೃತ್ತಿಕಾಗಳ ಮಧ್ಯೆ ಧಾವಿಸುವ ಇದು ಸಧ್ಯದಲ್ಲೇ ಶನಿಗ್ರಹವನ್ನು ಸಮೀಪಿಸಲಿದೆ ಎಂದು ಊಹಿಸಬಹುದಲ್ಲವೇ ? ಕೇವಲ ಬರಿಗಣ್ಣಿನ ಇಂತಹ ವೀಕ್ಷಣೆ ಗಳಿಂದಲೇ ಶುಕ್ರ-ಶನಿ ಸಮಾಗಮದ ದಿನಾಂಕವನ್ನೂ ಲೆಕ್ಕಹಾಕಬಹುದು. ಪ್ರಯತ್ನಿಸಿ.

## ಖಗೋಳ ದಿನಚರಿ

೨ ಹುಣ್ಣಿಮೆ ೨೨:೪೫ಕ್ಕೆ
೩ ಚಂದ್ರ-ಭೂಮಿಯಿಂದ ಗರಿಷ್ಠ ದೂರದಲ್ಲಿ
೬ ಗುರುಗ್ರಹದ ಹಿನ್ನಡೆ ಆರಂಭ
೭ ಗುರು-ಜ್ಯೇಷ್ಠಾ-ಚಂದ್ರ ಇವುಗಳ ಪುಟ್ಟತ್ರಿಕೋಣ*
೮ ಗುರು-ಚಂದ್ರ ನಡುವೆ ಕನಿಷ್ಠ ಕೋನ*
೧೦ ಚಾಂದ್ರಮಾಸದ ಕೊನೆ ಪಾದ
೧೪ ಮಂಗಳ-ಚಂದ್ರ ನಡುವೆ ಕನಿಷ್ಠಕೋನ*
ಆಚ್ಛಾದನೆಯ ಆರಂಭ ಮಾತ್ರ ಕಾಣಲಿದೆ !*
ಯುರೇನಸ್ ಆಚ್ಛಾದನೆ ಕಾಣುವುದಿಲ್ಲ.
೧೬ ಚಂದ್ರ ಬುಧ ನಡುವೆ ಕನಿಷ್ಠಕೋನ*
೧೭ ಚಂದ್ರ-ಭೂಮಿ ದೂರ ಕನಿಷ್ಠ ೧೧:೨೮ಕ್ಕೆ
ಅಮಾವಾಸ್ಯೆ ೧೭:೦೬ಕ್ಕೆ
೨೦ ಶನಿಗ್ರಹದ ಹಿನ್ನಡೆ ಮುಕ್ತಾಯ
ಶುಕ್ರ-ಚಂದ್ರ ನಡುವೆ ಕನಿಷ್ಠಕೋನ*
೨೨ ಲಿರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೨೪ ಚಾಂದ್ರಮಾಸದ ಪ್ರಥಮಪಾದ
೨೫ ಶನಿ-ಚಂದ್ರ ನಡುವೆ ಕನಿಷ್ಠಕೋನ* (ಆಚ್ಛಾದನೆ ಕಾಣುವುದಿಲ್ಲ)
೨೬ ಚಂದ್ರ-ಮಘ ನಡುವೆ ಕನಿಷ್ಠಕೋನ* (ಆಚ್ಛಾದನೆ ಕಾಣುವುದಿಲ್ಲ)
೨೮ ಮಂಗಳ-ಯುರೇನಸ್ ನಡುವೆ ಕನಿಷ್ಠಕೋನ
೩೦ ಚಂದ್ರ-ಭೂಮಿ ಅಂತರ ಗರಿಷ್ಠ
ಮೇ ೨ ಹುಣ್ಣಿಮೆ ೧೫:೩೯ಕ್ಕೆ
೪ ಚಂದ್ರ-ಜ್ಯೇಷ್ಠಾ ನಡುವೆ ಕನಿಷ್ಠಕೋನ* (ಆಚ್ಛಾದನೆ ಕಾಣುವುದಿಲ್ಲ)
*ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ.



ಚಂದ್ರ, ಗುರು ಮತ್ತು ಜ್ಯೇಷ್ಠಾ ನಕ್ಷತ್ರಗಳು ೭ನೇ ತಾರೀಖು ಮಧ್ಯರಾತ್ರಿಯಲ್ಲಿ ಹೀಗೆ ಕಾಣುತ್ತವೆ.

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



# ವಿಸ್ಮಯ ಕಸೂತಿಯ

## ಸುಮಿತ್ರಾ ವೈ. ಪುಟ್ಟಿ



ಕುವೆಂಪು

ಖ್ಯಾತ ನಿಸರ್ಗ ಕಲಾವಿದ ದಿವಂಗತ ರಘೂತ್ತಮ ಪುಟ್ಟಿ ಅವರ ಸೊಸೆ ಶ್ರೀಮತಿ ಸುಮಿತ್ರಾ ವೈ. ಪುಟ್ಟಿ ಮಾವ ಹಾಗೂ ಪತಿ ಯತೀಂದ್ರ ಪುಟ್ಟಿ ಅವರ ಪ್ರೋತ್ಸಾಹದಿಂದ ಕಸೂತಿ ಕಲೆಯನ್ನು ರೂಢಿಸಿಕೊಂಡರು. 1985ರಿಂದ 2005ರವರೆಗೆ ಕುಂಚ ಕಲೆಯನ್ನು ಮೀರಿಸುವಷ್ಟು ಕಣ್ ತಣಿಸುವ ಚಿತ್ರಗಳನ್ನು ವರ್ಣರಂಜಿತ ದಾರಗಳಲ್ಲಿ ಸೂಕ್ಷ್ಮಾತಿ ಸೂಕ್ಷ್ಮವಾಗಿ ಮೂಡಿಸಿದ್ದಾರೆ. ಒಂದೊಂದಕ್ಕೂ ಹಲವು ತಿಂಗಳುಗಳ ಕಲಾಶ್ರಮ ಬೇಕಾಗುವಂತಹ ಕೃತಿಗಳಿವು.

ಎಂ. ಎಫ್. ಹುಸೇನ್, ಲಂಬಾಣಿ, ಆಸ್ಟ್ರೇಲಿಯ ಹಕ್ಕಿ, ಶೃಂಗೇರಿ ಬಳಿಯ ಗುಡಿ, ಕುವೆಂಪು ಹೀಗೆ ಮೂವತ್ತೊಂದು ಕೃತಿಗಳನ್ನು ರಚಿಸಿ ವಿಸ್ಮಯ ಗೊಳಿಸಿದ್ದಾರೆ. ಕಲಾಸಕ್ತರಿಗೆ ಖುದ್ದಾಗಿ ಹೇಳಿಕೊಡುವ ಕಲಾಗುಣವೊಂದು ಅವರ ಹೆಗ್ಗಳಿಕೆ.

– ಪಿ. ಎಂ. ರಾಜನ್, ಕಲಾವಿಮರ್ಶಕ
ಥಿಯೇಟರ್ ರಸ್ತೆ, ನಜರ್ ಬಾರ್
ಮೈಸೂರು - 570010



ಶೃಂಗೇರಿ ಬಳಿಯ ಒಂದು ದೇವಸ್ಥಾನ



ಆಂಧ್ರ ಲಂಬಾಣಿ ಮಹಿಳೆ



ಆಸ್ಟ್ರೇಲಿಯಾದ ಪಕ್ಷಿ



ಎಂ. ಎಫ್. ಹುಸೇನ್

# ವ್ಯಕ್ತಿ ವಿಕಸನಕ್ಕೆ ನವಕರ್ನಾಟ

ವ್ಯಕ್ತಿ ವಿ

ಲೋಕಾರ್ಪಣೆ

ಅಧ್ಯಕ್ಷತೆ
ಡಾ|| ಗುರುರಾಜ ಕರಜಗಿ
ಮುಖ್ಯ ಅತಿಥಿ
ಶ್ರೀ ಟಿ. ಎನ್. ಸೀತಾರಾಮ್
ಪ್ರಾಸ್ತಾವಿಕ ಭಾಷಣ
ಡಾ|| ಸಿ. ಆರ್. ಚಂದ್ರಶೇಖರ್
15-4-2007ರ ಭಾನುವಾರ ಬೆಳಗ್ಗೆ 10
ಯವನಿಕಾ ಸಭಾಂಗಣ, ನೃಪತುಂಗ ರಸ್ತೆ
ಬೆಂಗಳೂರು - 560 001

ತಮಗೆಲ್ಲರಿಗೂ ಆದರದ ಸ್ವಾಗತ

ಆಯಾಯ ಕ್ಷೇತ್ರಗಳಲ್ಲಿ ಅನುಭವಿಗಳಾದ ಸಮರ್ಥ
ಲೇಖಕರು ರಚಿಸಿರುವ 25 ಅತ್ಯುತ್ತಮ ಕೃತಿಗಳು
ಖ್ಯಾತ ಚಿತ್ರಕಾರರ ಸಂದರ್ಭೋಚಿತ ಚಿತ್ರಗಳ ಸಹಿತ

ಸಂಪಾದಕರು : ಡಾ


















ರಿಯಾಯಿತಿ ಬೆಲೆ ಜೊತೆಗೆ ಅಂಚೆ ವೆಚ್ಚ ರ

## ನವಕರ್ನಾಟಕ ಪ್ರಕಾ

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ,
ಬೆಂಗಳೂರು - 560 001 ✆ 222
e-mail : navakarnataka@vsnl.co

# ಪ್ರಕಾಶನದ ಹೆಮ್ಮೆಯ ಕೊಡುಗೆ

ಮಾಲೆ




ತಲಾ ರೂ. 40 ಬೆಲೆಯ, ಒಟ್ಟು ರೂ. 1000 ಮೌಲ್ಯದ ಪುಸ್ತಕಗಳು ಪ್ರಕಟಣಪೂರ್ವ ರಿಯಾಯಿತಿ ಬೆಲೆ ರೂ. 700ಕ್ಕೆ ಲಭ್ಯ. ಇಂದೇ ಬೇಡಿಕೆ ಸಲ್ಲಿಸಿ

. ಚಂದ್ರಶೇಖರ್
































ರಿಸಿ ನಮಗೆ ಎಂ.ಓ. ಅಥವಾ ಡಿ. ಡಿ. ಕಳಿಸಿ

ಪ್ರೈವೇಟ್ ಲಿಮಿಟೆಡ್

ಖ್ಯೆ 5159, ಕುಮಾರ ಪಾರ್ಕ್ ಪೂರ್ವ
30578022 ಫ್ಯಾಕ್ಸ್: 30578023
www.navakarnatakabooks.com



## ನೂರೆಂಟು ಕಟಕಿಗಳು (ಕವನ ಸಂಕಲನ)

ವಿಷ್ಣು ನಾಯ್ಕ

**ಪುಟ : ೧೨೪** **ಬೆಲೆ : ರೂ. ೭೦**

**ವಿಷ್ಣು ನಾಯ್ಕ,** 'ಪರಿಮಳ' ಅಂಬಾರಕೊಡ್ಲ, ಅಂಕೋಲಾ (ಉತ್ತರ ಕನ್ನಡ ಜಿಲ್ಲೆ)

ಒಟ್ಟು ೫೫ ಕವನಗಳು ಇಲ್ಲಿವೆ. ಇದು ಕವಿಯ ಹನ್ನೊಂದನೇ ಕವನ ಸಂಕಲನ. ಇಲ್ಲಿಯ ಕವಿತೆಗಳಲ್ಲಿ ಕರಾವಳಿ ಪರಿಸರದ ಸೊಗಡು ಹದವಾಗಿ ಮೇಳೈಸಿದೆ. ತಾವು ಅನುಭವಿಸಿದ ಸೋಲುಗಳನ್ನು 'ಒಂದು ಕುರ್ಚಿ ಒಂದು ಅನುಭವ', 'ಹೆಜ್ಜೆಗಳಿಗೆ', 'ಈಗಿದು ಅನುಭವ' ಕವನಗಳಲ್ಲಿ ಚಿತ್ರಿಸಿದ್ದಾರೆ. 'ಹೆಸರಿಲ್ಲದವಳು', 'ಎಲ್ಲಿ ಹೋದಳು', 'ಒಂದು ನೋವು ಒಂದು ಕರೆ'ಗಳಲ್ಲಿ ಪ್ರೀತಿ, ಸಂಬಂಧಗಳ ಸೆಳೆತ, ಅದು ತರುವ ಸಂಕಟ, ತಳಮಳದ ಚಿತ್ರಣವಿದೆ. 'ನಿರುದ್ಯೋಗಿ ಪೋರ' ಮುದ್ದು ಗಣಪನ ನೆನಪಾಗಿಸಿ ತುಟಿಯಂಚಿನಲ್ಲಿ ನಗೆ ಮೂಡಿಸುತ್ತೆ. ಕಲ್ಪನಾ ಚಾವ್ಲಾಗೆ ನುಡಿನಮನ ಸಲ್ಲಿಸುವ 'ಈಗಿವಳು ಮನೆಮಗಳು' ಕಣ್ಣುಗಳನ್ನು ತೇವಗೊಳಿಸಿ, ಮನಸ್ಸನ್ನು ಭಾರವಾಗಿಸುತ್ತೆ. ವೈಭವೀಕರಣವಿಲ್ಲದ, ಸಹಜ ಶೈಲಿಯಲ್ಲಿ ಮೂಡಿರುವ ಪದ್ಯಗಳು ಪ್ರಕೃತಿ, ಬದುಕಿನ ಬಗೆಗೆ ಗಾಢವಾದ ಪ್ರೀತಿ, ತನ್ನೂರು ಭಾಷೆಯ ಬಗೆಗೆ ಅಭಿಮಾನ, ಸಾಮಾಜಿಕ ಕಳಕಳಿಯನ್ನು ಬಿಂಬಿಸಿ ಓದುಗರನ್ನು ಭಾವುಕರನ್ನಾಗಿಸುತ್ತವೆ.



## ಇವ ನಮ್ಮವ (ನಾಟಕ)

ವ್ಯಾಸ ದೇಶಪಾಂಡೆ

**ಪುಟ : ೭೬** **ಬೆಲೆ : ರೂ. ೪೦**

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಕೋಲಾ, ಉತ್ತರ ಕನ್ನಡ ಜಿಲ್ಲೆ

ಬಸವಣ್ಣನವರ ಬದುಕಿನ ಸುತ್ತ ಹೆಣೆದ ಕಾಲ್ಪನಿಕ ನಾಟಕವಿದು. ಬಸವಣ್ಣನವರ ಮಹಾಮನೆಗೆ ಕಳ್ಳನೊಬ್ಬ ನುಗ್ಗಿ ಅವರ ಮಡದಿಯ ಓಲೆಗಳನ್ನು ಕದಿಯ ಹೋಗಿ ಸಿಕ್ಕಿಬೀಳುತ್ತಾನೆ. ಇನ್ನೊಂದು ಸಂದರ್ಭದಲ್ಲಿ ಕನ್ನಮಾರಿಯೆಂಬ ಕಳ್ಳನೊಬ್ಬ ಅರಮನೆಗೇ ಕನ್ನಹಾಕಿ, ಸಿಕ್ಕಿಬಿದ್ದು, ಶೂಲಕ್ಕೇರುವುದರಲ್ಲಿದ್ದಾಗ ಬಸವಣ್ಣನವರು ಮಧ್ಯಪ್ರವೇಶಿಸಿ ಅರಸು ಬಿಜ್ಜಳನಿಂದ ಈತನಿಗೆ ಜೀವದಾನ ಕೊಡಿಸುತ್ತಾರೆ. ಈ ಎರಡೂ ಕತೆಗಳನ್ನು ಒಂದುಗೂಡಿಸಿ ಕೆಲವು ಬದಲಾವಣೆಗಳೊಂದಿಗೆ ನಾಟಕವನ್ನು ರಚಿಸಲಾಗಿದೆ. ಆಸ್ತಿಯ ಒಡೆತನ ಹಾಗೂ ಸಂಪತ್ತಿನ ಕೇಂದ್ರೀಕರಣಗಳೆರಡರ ಕುರಿತು ಬಸವಣ್ಣನವರ ನಿಲುವುಗಳೇನಿತ್ತೆಂಬುದನ್ನು ಸ್ಪಷ್ಟಪಡಿಸುವುದು ನಾಟಕದ ಉದ್ದೇಶ. ಸಮಕಾಲೀನ ಸಾಮಾಜಿಕ ಸವಾಲುಗಳನ್ನು ಪ್ರಶ್ನಿಸಿ, ಐತಿಹಾಸಿಕ - ಪೌರಾಣಿಕ ಕಥಾವಸ್ತುವಿನೊಂದಿಗೆ ಸಮೀಕರಿಸಿ ಉತ್ತರವನ್ನು ಹುಡುಕಿರುವುದು ಇಲ್ಲಿಯ ವಿಶೇಷ.



## ಪ್ರಭುತ್ವ ಮತ್ತು ಸಾಹಿತ್ಯ (ವಿಮರ್ಶಾ ಸಂಕಲನ)

ಡಾ॥ ಆರ್. ವಿ. ಭಂಡಾರಿ

**ಪುಟ : ೨೧೬** **ಬೆಲೆ : ರೂ. ೧೦೦**

**ಹೇಮಂತ ಸಾಹಿತ್ಯ,** ನಂ. ೯೭೨-ಸಿ, ೪ನೇ 'ಇ' ಬ್ಲಾಕ್ ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಸಾಹಿತ್ಯವೊಂದರಿಂದಲೇ ಸಾಮಾಜಿಕ ಪರಿವರ್ತನೆ ಸಾಧ್ಯವಿಲ್ಲ. ಸಾಹಿತ್ಯದ ವೈಚಾರಿಕ ನೆಲೆಯನ್ನು ಗುರುತಿಸುವ, ವಿಮರ್ಶಿಸುವ ಕಾರ್ಯ ಕೂಡ ಹಿರಿದಾದದ್ದು ಎಂಬುದು ಲೇಖಕರ ನಂಬುಗೆ. ಇಲ್ಲಿಯ 'ದಲಿತ ಬಂಡಾಯ ಸಾಹಿತ್ಯ : ಮುಖಾಮುಖಿ' ಬರಹ ಕರ್ನಾಟಕ ಸಾಹಿತ್ಯ ಅಕಾಡೆಮಿ ಹೊರತಂದ 'ಕನ್ನಡ ಸಾಹಿತ್ಯ ಮೌಲ್ಯೀಕರಣ' ಮಾಲಿಕೆಯ 'ಪ್ರಭುತ್ವ ಮತ್ತು ಸಾಹಿತ್ಯ' ಪುಸ್ತಕಕ್ಕಾಗಿ ಬರೆದುದು. ಇದಲ್ಲದೆ ಹಂಪನಾ, ಕೇಶವ ಶರ್ಮ, ಕುರ್ತಕೋಟಿ ಮುಂತಾದವರ ಕೃತಿಗಳ, ಅಂಕಣಗಳ ವಿಮರ್ಶೆ ಮತ್ತು ಕನ್ನಡ ಸಣ್ಣ ಕತೆಗಳ ಸ್ವರೂಪ, ದಲಿತ ಬಂಡಾಯ ಸಾಹಿತ್ಯ, ಚೆನ್ನಣ್ಣ ವಾಲೀಕಾರರ ಸಮಗ್ರ ಕಾವ್ಯ ಮುಂತಾದ ಲೇಖನಗಳು ಇಲ್ಲಿವೆ.



## ಒಳದನಿ (ವಿಮರ್ಶಾ ಸಂಕಲನ)

ಆರ್. ವಿ. ಭಂಡಾರಿ

**ಪುಟ : vi+೧೪೨** **ಬೆಲೆ : ರೂ. ೧೨೦**

**ಸಿವಿಜಿ ಪಬ್ಲಿಕೇಷನ್ಸ್,** ನಂ. ೭೦, ೨ನೇ ಮುಖ್ಯರಸ್ತೆ ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೩

ಉತ್ತರ ಕನ್ನಡ ಜಿಲ್ಲೆಯ ಸಾಂಸ್ಕೃತಿಕ ಒಳದನಿಗಳ ಸತ್ತ್ವವನ್ನು ಗುರುತಿಸುವ ಲೇಖನಗಳ ಕಟ್ಟು ಇದು. ವಿಷ್ಣು ನಾಯ್ಕರ ಕಾವ್ಯ, ಜಿ. ಎಸ್. ಅವಧಾನಿ ಅವರ ಕಾವ್ಯ, ಎಲ್. ಆರ್. ಹೆಗಡೆಯವರ ಆರು ಕೃತಿಗಳು, ಗೌರೀಶ ಕಾಯ್ಕಿಣಿಯವರ ಸಮಗ್ರ ಸಾಹಿತ್ಯ ಸಂಪುಟ ಕುರಿತ ಮತ್ತು ಮಕ್ಕಳ ಕತೆ, ರಂಗಭೂಮಿ, ನಾಟಕ, ಉತ್ತರ ಕನ್ನಡ ಚುಟುಕು ಕಾವ್ಯ ಮುಂತಾದ ವಿಮರ್ಶಾ ಲೇಖನಗಳು ಇಲ್ಲಿವೆ. ಮರೆಯಾಗಿರುವ, ಮರೆಗೆ ಸರಿದಿರುವ, ಸದ್ದಿಲ್ಲದೆ ಬರೆಯುತ್ತಿರುವ ಲೇಖಕ-ಲೇಖಕಿಯರ ಕೃತಿಗಳ ಪ್ರಸ್ತಾಪ, ಪರಿಚಯ, ವಿಮರ್ಶೆಯಾಗಿರುವುದು ಒಂದು ವಿಶೇಷ.



## ಕರಾವಳಿಯ ಕತೆಗಳು (ಆಯ್ದ ಕತೆಗಳು)

ಪ್ರ.ಸಂ.: ಪ್ರೊ॥ ಕೆ. ಚಿನ್ನಪ್ಪ ಗೌಡ

ಸಂ. ಸಬಿಹಾ ಭೂಮೀಗೌಡ

**ಪುಟ : ೩೦೪** **ಬೆಲೆ : ರೂ. ೧೫೦**

**ಕನ್ನಡ ಅಧ್ಯಯನ ವಿಭಾಗ,** ಮಂಗಳೂರು ವಿಶ್ವವಿದ್ಯಾಲಯ ಮಂಗಳಗಂಗೋತ್ರಿ - ೫೭೪ ೧೯೯

ಅಂತರಂಗ, ವರ್ತಕ ಧುರೀಣ, ಕನ್ನಡ ಸಹಕಾರಿ, ಸ್ವದೇಶಾಭಿಮಾನಿ, ತ್ರಿವೇಣಿ ಮುಂತಾದ ಪತ್ರಿಕೆಗಳಲ್ಲಿ ೧೯೨೦-೧೯೪೭ರ ಅವಧಿಯಲ್ಲಿ ಪ್ರಕಟವಾಗಿದ್ದ ಕತೆಗಳನ್ನು ಪ್ರಾತಿನಿಧಿಕವಾಗಿ ಆಯ್ದು ಸಂಕಲಿಸಿದ ಪುಸ್ತಕವಿದು. ಜಿಲ್ಲೆಯ ಸುಪ್ರಸಿದ್ಧ ಕತೆಗಾರರ ಕತೆಗಳನ್ನು ಈ ಸಂಕಲನದಲ್ಲಿ ಸೇರಿಸಿಲ್ಲ. ಆದಷ್ಟು ತೆರೆಮರೆಯಲ್ಲಿ ಉಳಿದ, ತೆರೆಮರೆಗೆ ಸರಿದ ಲೇಖಕ ಲೇಖಕಿಯರನ್ನು ಬೆಳಕಿಗೆ ತರುವುದು ಈ ಸಂಪಾದನೆಯ ಉದ್ದೇಶ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯಪೂರ್ವ ಕಾಲಘಟ್ಟದ ಕತೆಗಳಿವು. ಅಂದಿನ ಬಡತನ, ಊಳಿಗ ಪದ್ಧತಿ, ಕೌಟುಂಬಿಕ ಬಿಕ್ಕಟ್ಟುಗಳು, ವಿದ್ಯಾಭ್ಯಾಸ ವಂಚಿತ ಜನಸಮುದಾಯ, ದಲಿತರ, ಮಹಿಳೆಯರ ಶೋಷಣೆ ಹಾಗೂ ಆ ಕಾಲದ ಜನರ ಒಟ್ಟು ಆಕಾಂಕ್ಷೆಗಳು, ಮುಗ್ಧತೆ, ಭಯ, ಸಂಕಟಗಳು ಇಲ್ಲಿಯ ಕತೆಗಳ ಜೀವಾಳ. ದಕ್ಷಿಣ ಕನ್ನಡದಲ್ಲಿ ಪತ್ರಿಕೋದ್ಯಮದ ಬೆಳವಣಿಗೆ, ಪತ್ರಿಕೆಗಳು ಪ್ರಕಟವಾಗುತ್ತಿದ್ದ ಕಾಲಾವಧಿ, ಅವುಗಳ ಧೋರಣೆ, ಲೇಖಕರ, ಓದುಗರ ಮತ್ತು ಪತ್ರಿಕೆಗಳ ಸಂಬಂಧವನ್ನು ವಿವರಿಸುವ ಡಾ॥ ಸಬಿಹಾರ ಪ್ರಸ್ತಾವನೆ ಈ ವಿಷಯದ ಓದಿಗೆ ಉಪಯುಕ್ತ ದಿಕ್ಸೂಚಿಯಾಗಿದೆ. ಸಂಪಾದಕರ ಶ್ರದ್ಧೆ ಮತ್ತು ಶ್ರಮ ಅಭಿನಂದನಾರ್ಹ.

## ನನ್ನ ಕವನಗಳು (ಕವನ ಸಂಕಲನ)

ಸಂಗ್ರಾಮ ಎಸ್. ಎಚ್.

**ಪುಟ : X+೫೪** **ಬೆಲೆ : ರೂ. ೩೫**

**ಸಮತಾ ಪ್ರಕಾಶನ,** ಕೊಟ್ಟೂರು, ಕೂಡ್ಲಿಗಿ ತಾಲೂಕು, ಬಳ್ಳಾರಿ ಜಿಲ್ಲೆ

ಕನ್ನಡ ಪುಸ್ತಕ ಪ್ರಾಧಿಕಾರವು ಯುವ ಬರಹಗಾರರ ಚೊಚ್ಚಲ ಕೃತಿಯ ಪ್ರಕಟಣೆಗೆ ನೀಡುವ ಸಹಾಯಧನದಿಂದ ಬೆಳಕು ಕಂಡಿರುವ ಕೃತಿ ಇದು. ಸಂಕಲನದಲ್ಲಿ ಒಟ್ಟು ೪೯ ಕವಿತೆಗಳಿವೆ. ತಮ್ಮ ಅಂತರಂಗದ ಚಿಂತನೆಗಳನ್ನಿಲ್ಲಿ ಕವಿ ಕವಿತೆಯಾಗಿಸಿದ್ದಾರೆ. 'ಸುನಾಮಿ', 'ಬುದ್ಧ', 'ತಾತ', 'ಜಾಗತಿಕ ಸಮರ', 'ಪ್ರೇಮ' ಹೀಗೆ ಕವಿತೆಗಳ ವಿಷಯ ವೈವಿಧ್ಯ. ಸರಳ ಭಾಷೆ, ಚಿಕ್ಕ, ಚೊಕ್ಕ ಸಾಲುಗಳ ಕವಿತೆಗಳಲ್ಲಿ ನಗರೀಕರಣ, ಖಾಸಗೀಕರಣ, ಕೈಗಾರಿಕೀಕರಣ, ಅಶಾಂತಿ, ಅತೃಪ್ತಿ, ಒಂಟಿತನ, ಅಸಹನೆ – ಇವುಗಳಿಗೆ ಒಡ್ಡಿದ ಮನಸ್ಸಿನ ಹೊಯ್ದಾಟಗಳನ್ನು ಕಾಣಬಹುದು. ಅಂತರ್ಮುಖಿತ್ವ ಇಲ್ಲಿ ಎದ್ದುಕಾಣುತ್ತದೆ. ನಿಷ್ಕರುಣೆ ಮನುಷ್ಯನ ಹಿಂಸೆ, ಲಾಭಕೋರತನ, ದುರಾಸೆ ಹಾಗೂ ಗಿಡಮರಗಳ, ಪ್ರಾಣಿಗಳ ಅಸಹಾಯಕತೆ ಮತ್ತು ಸಂಕಟ 'ಗೋವು', 'ವೃಕ್ಷ' ಮತ್ತು 'ಮುದಿಮರ' ಕವಿತೆಗಳಲ್ಲಿ ಮನಮುಟ್ಟುವಂತೆ ಮೂಡಿಬಂದಿವೆ. ಇನ್ನೂ ಹೆಚ್ಚಿನ ಭಾಷಾಭ್ಯಾಸದೊಂದಿಗೆ ಹೊರಜಗತ್ತಿನ ಅನುಭವಗಳಿಗೆ ತಮ್ಮನ್ನು ಒಡ್ಡಿಕೊಂಡು ಬೆಳೆದಲ್ಲಿ ಇವರ ಕಾವ್ಯವು ಸಮೃದ್ಧವಾಗುವುದರಲ್ಲಿ ಸಂದೇಹವಿಲ್ಲ.

– **ಸಹನ,** ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್ 'ದೇವರಕೆರೆ' ಎಕ್ಸ್‌ಟೆನ್ಷನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

*ನಿರಾಳವೆಂಬ ಕೂಸಿಂಗೆ ಬೆಣ್ಣೆಯನಿಕ್ಕಿ ಹೆಸರಿಟ್ಟು*
*ಕರೆದವರಾರೊ ?*
*ಅಕಟಕಟಾ ಶಬ್ದದ ಲಜ್ಜೆ (ಯ) ನೋಡಾ !*
*ಗುಹೇಶ್ವರನನರಿಯದ ಅನುಭಾವಿಗಳೆಲ್ಲರ*
*ತರಕಟ ಕಾಡಿತ್ತು*

– ಅಲ್ಲಮ

**ಭಕ್ತಿಯನ್ನು, ಪ್ರಾಣವನ್ನು, ಅನುಭಾವವನ್ನು ಸೃಜನಶೀಲ ವಿಧಾನಗಳಾದ ಚಿತ್ರ, ಸಂಗೀತ, ಬರಹ (ಸಾಹಿತ್ಯ) ಇತ್ಯಾದಿಗಳಲ್ಲಿ ಅಭಿವ್ಯಕ್ತಿಸಲು ಸಾಧ್ಯವಿಲ್ಲ. ಇದನ್ನೇ ಅಲ್ಲಮ 'ಶಬ್ದದ ಲಜ್ಜೆ' ಎಂದು ಕರೆಯುತ್ತಾನೆ. ಇಲ್ಲಿ ಭಾಷೆಯ ದೌರ್ಬಲ್ಯವನ್ನು ಕುರಿತು ಅಲ್ಲಮ ಮಾತಾಡಿದಂತಿದೆ. 'ಅನುಭಾವವೆಂಬುದು ರಚನೆಯ ಮಾತೆ' ಎಂಬ ಅಲ್ಲಮನ ನುಡಿ ಇದನ್ನೇ ಪುಷ್ಟೀಕರಿಸುತ್ತದೆ. ಶಬ್ದ, ಭಾಷೆ, ಸಂವಹನ, ಅಭಿವ್ಯಕ್ತಿ ಮುಂತಾದ ಪರಿಕಲ್ಪನೆಗಳ ಕುರಿತಾಗಿ ಅಲ್ಲಮ ಮಾತಾಡುತ್ತಾ ಅವುಗಳ ದೌರ್ಬಲ್ಯವನ್ನು, ಮಿತಿಯನ್ನು ಅನಾವರಣಗೊಳಿಸುವಲ್ಲಿ ಓರ್ವ ಬೌದ್ಧಿಕ ವಿಮರ್ಶಕನಾಗಿ, ಭಾಷಿಕಚಿಂತಕನಾಗಿ ನಮಗೆ ಕಾಣದೊರೆಯುತ್ತಾನೆ.**

ವೀರಶೈವ ಕವಿಗಳಲ್ಲಿ ಅಲ್ಲಮ, ವೈದಿಕ ಕವಿಗಳಲ್ಲಿ ಕುಮಾರವ್ಯಾಸ – ಈ ಇಬ್ಬರು ರೂಪಕ ಪ್ರತಿಭೆಗಳು. ಅಲ್ಲಮನಿಗೆ ರೂಪಕ ಸಾಹಿತ್ಯದಲ್ಲೇ ಅನನ್ಯ ಸ್ಥಾನವಿದೆ. ಅನುಭಾವ, ಅರಿವು, ಅನುಭೂತಿ ಈ ಮುಂತಾದ ಗಹನಾತಿಗಹನ ಆಧ್ಯಾತ್ಮಿಕ ಸತ್ಯಗಳನ್ನು ರೂಪಕಗಳ ಮೂಲಕ ಅಭಿವ್ಯಕ್ತಿಸಿದವರಲ್ಲಿ ಪ್ರಾಯಶಃ ಕರ್ನಾಟಕದ ಆಧ್ಯಾತ್ಮಿಕ ಚರಿತ್ರೆಯಲ್ಲಿ ಅಲ್ಲಮನೇ ಮೊದಲಿಗನಿರಬೇಕು.

ಅಲ್ಲಮ ತನ್ನ ವಚನಗಳ ಉದ್ದಕ್ಕೂ ಯಥೇಚ್ಛ ರೂಪಕ, ವೆಗ್ಗಳಪ್ರತೀಕ, ಅಪಾರಸಂಕೇತ, ಅಸಂಖ್ಯ ಪ್ರತಿಮೆ, ಅಗಣಿತಧ್ವನ್ಯಲಂಕಾರ, ಅನಿಯಮಿತ ಉಪಮೆ



ಇತ್ಯಾದಿಗಳನ್ನು ಪ್ರಯೋಗಿಸಿದ್ದಾನೆ. ಯಾಕೆ ಉಪಮೆ, ರೂಪಕ, ಧ್ವನಿ, ಪ್ರತಿಮೆ, ಪ್ರತೀಕ, ಸಂಕೇತ, ಶ್ಲೇಷೆ ಇತ್ಯಾದಿಗಳನ್ನು ಅಭಿವ್ಯಕ್ತಿ ತಂತ್ರಗಳನ್ನಾಗಿ ಬಳಸಿಕೊಳ್ಳುತ್ತಾನೆಂದರೆ ಅಂತರಾಳದ ಉತ್ಕಟ ವೇದನೆ-ಸಂವೇದನೆಗಳನ್ನು, ಅನುಭವ-ಅನುಭಾವಗಳನ್ನು ಅಭಿವ್ಯಕ್ತಿಸಲು ವಾಚ್ಯ ಮಾರ್ಗಕ್ಕಿಂತಲೂ ಧ್ವನಿಮಾರ್ಗವೇ ಔಚಿತ್ಯಪೂರ್ಣವಾದುದು. ಇವು ಅಭಿವ್ಯಕ್ತಿ ತಂತ್ರಗಳಲ್ಲೇ ಪರಿಣಾಮಕಾರಿಯಾದುವು ಮತ್ತು ವಾಚ್ಯವನ್ನು ಮೀರಿ ಧ್ವನ್ಯರ್ಥವನ್ನು ವ್ಯಂಜಿಸಬಲ್ಲವು.

ಬೆಟ್ಟಕ್ಕೆ ಚಳಿಯಾದೊಡೆ, ಬಯಲು ಬತ್ತಲೆಯಾದೊಡೆ, ನೀರಿಗೆ ನೀರಡಿಕೆಯಾಯಿತ್ತು, ಭಾವ ಬತ್ತಲೆಯಾಯಿತ್ತು, ಕೊಟ್ಟ ಕುದುರೆಯನೇರಲರಿಯದೆ ಇವೇ ಮುಂತಾದ ರೂಪಕಗಳ ಮೂಲಕ ಅಪಾರವಾದ ಅನುಭವಗಳನ್ನು, ಅನುಭಾವವನ್ನು ಅಭಿವ್ಯಕ್ತಿಸುತ್ತಾನೆ ಅಲ್ಲಮ. ಅದರಲ್ಲೂ ವಿಶೇಷವಾಗಿ 'ಅನುಭಾವ'ದ ಅಭಿವ್ಯಕ್ತಿಗೆ ರೂಪಕಗಳಲ್ಲದೆ ಬೇರೆ ಅಲಂಕಾರ ತಂತ್ರಗಳೇ ಒಗ್ಗುವುದಿಲ್ಲ. ಏಕೆಂದರೆ ರೂಪಕ ತನ್ನ ಒಡಲೊಳಗೆ ಸಮೃದ್ಧ ಅನುಭವಗಳನ್ನು ಅಡಗಿಸಿಟ್ಟುಕೊಳ್ಳುತ್ತದೆ. ಅಂಥದ್ದೇ ಆದ ಇನ್ನೊಂದು ಮಾರ್ಗವೆಂದರೆ ಸಂಕೇತ, ಪ್ರತಿಮೆ, ಪ್ರತೀಕ ಹಾಗೂ ಪ್ಯಾರಡಾಕ್ಸ್‌ಗಳು.

ಬಸವಣ್ಣ ಸಾಮಾಜಿಕ ವಿಮರ್ಶಕ ಮತ್ತು ಸಾಮಾಜಿಕ ದಾರ್ಶನಿಕ. ಹೀಗಾಗಿ ಸಮಾಜೋಧಾರ್ಮಿಕ ವಿಮರ್ಶೆಗಾಗಿ ಬಸವ ಉಪಮೆಗಳ ಮೊರೆಹೋಗುತ್ತಾನೆ. ಆದರೆ ಅಂತರಂಗದ ತಳಮಳ, ವೇದನೆ, ನೋವು, ಸಂಕಟ, ಹೊಯ್ದಾಟ ಇತ್ಯಾದಿಗಳನ್ನು ಚಿತ್ರಿಸುವಾಗ ರೂಪಕಗಳನ್ನು ನೆಚ್ಚುತ್ತಾನೆ. ಆ ಹಿನ್ನೆಲೆಯಲ್ಲಿ ಬಸವಣ್ಣ ತನ್ನ ವಚನಗಳ ಉದ್ದಕ್ಕೂ ಪ್ರಯೋಗಿಸಿದ ಪ್ರಾಣಿ ರೂಪಕಗಳ ಪ್ರಸ್ತಾಪವನ್ನು ಇಲ್ಲಿ ಉಲ್ಲೇಖಿಸುವುದು ಉಚಿತವಾಗಿದೆ. ಅಂತೆಯೇ ಹೇಳಲಾಗದ್ದನ್ನು, ಅಭಿವ್ಯಕ್ತಿಸಲಾಗದ್ದನ್ನು, ಕೇವಲ ಅನುಭವಿಸಬಹುದಾದ್ದನ್ನು ಅನಾವರಣಗೊಳಿಸುವಾಗ ರೂಪಕಗಳೇ ಊರುಗೋಲಾಗುತ್ತವೆ, ದಾರಿದಿಸೆಗಳಾಗುತ್ತವೆ. ಆದ್ದರಿಂದ ಅಲ್ಲಮ ರೂಪಕಗಳ ಮೊರೆಹೋದದ್ದರಲ್ಲಿ ಇಂತಹ ಅಭಿವ್ಯಕ್ತಿ ಸಮಸ್ಯೆಗಳಿವೆ.

ಹೀಗಿದ್ದೂ ಅಲ್ಲಮ, ರೂಪಕವನ್ನು ನೆಚ್ಚಿಯೂ ನೆಚ್ಚದಂತಿರುವವನು; ಸಂಕೇತ, ಪ್ರತಿಮೆ, ಪ್ರತೀಕಗಳನ್ನು ಒಪ್ಪಿಯೂ ಒಪ್ಪದಂತಿರುವವನು. ಅಲ್ಲಮನ ಮಾರ್ಗವೇ ಇಂತಹ ದ್ವಂದ್ವಗಳನ್ನು ಮೀರಿದ್ದು. ಅಂತೆಯೇ ಅಲ್ಲಮ ಮಾರ್ಗಿಯೂ ಹೌದು; ದೇಸಿಯೂ ಹೌದು. ಒಮ್ಮೆ ಮಾರ್ಗಿಯಾಗುತ್ತಾನೆ; ಮತ್ತೊಮ್ಮೆ ದೇಸಿಯಾಗುತ್ತಾನೆ. ಮಗದೊಮ್ಮೆ ಎರಡನ್ನೂ (ಮಾರ್ಗ-ದೇಸಿಗಳೆರಡನ್ನೂ) ವಿಸರ್ಜಿಸಿಬಿಡುತ್ತಾನೆ ಅಲ್ಲಮ. ಯಾಕೆ ಅಲ್ಲಮ ರೂಪಕ, ಸಂಕೇತ, ಪ್ರತೀಕ, ಪ್ರತಿಮೆಗಳನ್ನು ಒಪ್ಪಿಯೂ ಒಪ್ಪದಂತಿರುತ್ತಾನೆ? ಸ್ವೀಕರಿಸಿಯೂ ಸ್ವೀಕರಿಸದಂತಿರುತ್ತಾನೆ? ಬಳಸಿಯೂ ಬಳಸದಿರಲು ಬಯಸುತ್ತಾನೆ? ಕಾರಣ ಸ್ಪಷ್ಟವಿದೆ. ಯಾವುದೇ ಅಭಿವ್ಯಕ್ತಿ ಕ್ರಮ ಅದು ಎಷ್ಟೇ ಶಕ್ತವಾಗಿದ್ದರೂ, ಸತ್ವಪೂರ್ಣವಾಗಿದ್ದರೂ ಅದಕ್ಕೂ ಮಿತಿಗಳಿವೆ; ಕೊರತೆಗಳಿವೆ. ಅಂತೆಯೇ ರೂಪಕಕ್ಕೂ ಸಂಕೇತಕ್ಕೂ ಪ್ರತೀಕ ಪ್ರತಿಮೆಗಳಿಗೂ ಮಿತಿಗಳಿವೆ. ಆದ್ದರಿಂದಲೇ ಅಲ್ಲಮ ಈ ರೂಪಕ, ಈ ಸಂಕೇತ, ಈ ಪ್ರತಿಮೆ-ಪ್ರತೀಕಗಳನ್ನು ಒಳಗೊಂಡ 'ಶಬ್ದ'ದ ಮಿತಿಯ ಬಗ್ಗೆ ಮಾತಾಡುತ್ತಾನೆ. ಭಾರತೀಯ ಅಲಂಕಾರವೇತ್ತರು 'ಶಬ್ದ'ದ ಶ್ರೇಷ್ಠತೆಯ ಬಗ್ಗೆ ಮಾತಾಡುತ್ತಿರುವಾಗ ಅಲ್ಲಮ ಅದರ ಸಾಧ್ಯಾಸಾಧ್ಯತೆಗಳ ಬಗ್ಗೆ ಮಾತಾಡುತ್ತಾನೆ.

ಅಲ್ಲಮ ಅನುಭಾವದ ಅಭಿವ್ಯಕ್ತಿಗಾಗಿ, ಅನುಭೂತಿಯ ಅಭಿವ್ಯಂಜನೆಗಾಗಿ ರೂಪಕಗಳ ಮೊರೆ ಹೋಗುತ್ತಾನೆ; ಬೆಡಗಿನ ತಂತ್ರಗಳನ್ನು ಪ್ರಯೋಗಿಸುತ್ತಾನೆ; ಧ್ವನ್ಯರ್ಥ ಪ್ಯಾರಡಕ್ಸ್‌ಗಳ ಮೊರೆ ಹೋಗುತ್ತಾನೆ. ಹೀಗೆ ಅಲ್ಲಮ 'ಅನುಭಾವ'ದ ಅಭಿವ್ಯಕ್ತಿಗೋಸ್ಕರ ಏನೆಲ್ಲಾ ಅಭಿವ್ಯಕ್ತಿ ವಿಧಾನಗಳನ್ನು ಬಳಸುತ್ತಾನೆ. ಆದರೆ 'ಅನುಭಾವ' ಅದು ಇರುವ ಅರ್ಥದಲ್ಲಿ ಅಭಿವ್ಯಕ್ತವಾಗುವುದಿಲ್ಲ; ಪರಿಪೂರ್ಣಾರ್ಥದಲ್ಲಿ ಅನಾವರಣಗೊಳ್ಳುವುದಿಲ್ಲ. ಅಂತೆಯೇ 'ಅನುಭಾವ'ವನ್ನು ಅಕ್ಷರಶಃ ಅಕ್ಷರೀಕರಿಸಲು ಹೋದಾಗ 'ಶಬ್ದ' ಅನುಭಾವದ ಅರ್ಥವನ್ನು ಅಭಿವ್ಯಕ್ತಿಸದೆ ತನ್ನ ಮಿತಿಗೆ ತಾನೇ ನಾಚಿಬಿಡುತ್ತದೆ. ಇಲ್ಲಿ ಎಲ್ಲ ಅಭಿವ್ಯಕ್ತಿ ಕ್ರಮಗಳೂ ಸೋಲುತ್ತವೆ. ಶಬ್ದ, ಉಪಮೆ-ರೂಪಕಗಳನ್ನು ಒಳಗೊಂಡಿದೆ; ಸಂಕೇತಗಳನ್ನು ಗರ್ಭೀಕರಿಸಿಕೊಂಡಿದೆ; ಪ್ರತಿಮೆ-ಪ್ರತೀಕಗಳನ್ನು ತೆಕ್ಕೆಯಲ್ಲಿಟ್ಟುಕೊಂಡಿದೆ. ಹಾಗಿದ್ದೂ ಇಂಥ ಬಹುಮುಖಿ ಸಾಧ್ಯತೆಯ ಶಬ್ದ ಎಲ್ಲವನ್ನೂ ಅಭಿವ್ಯಕ್ತಿಸುವಷ್ಟು ಪರಿಪೂರ್ಣ ಮಾಧ್ಯಮವಲ್ಲ. ಇದನ್ನೇ, ಈ ಮಿತಿಯನ್ನೇ ಅಲ್ಲಮ 'ಶಬ್ದದ ಲಜ್ಜೆಯ ನೋಡಾ' ಎಂಬ ಉಕ್ತಿಯ ಮೂಲಕ ಅರುಹಿದ್ದು.

ಹಾಗಾದರೆ ಶಬ್ದ ರೂಪದಲ್ಲಿ ಹೇಗೆ 'ಲಜ್ಜೆ'ಗೆ

# ಶಬ್ದದ ಲಜ್ಜೆ ನೋಡಾ

ಡಾ|| ಬಿ. ಶರಣಪ್ಪ ಸತ್ಯಂಪೇಟೆ

ಈಡಾಗುತ್ತದೆ? ಹಾಗೆ ಲಜ್ಜೆಗೀಡಾದ ಸ್ವರೂಪ ಎಂತಹದು? ಶಬ್ದಲಜ್ಜೆಯ ಮೂಲಕ ರೂಹುತಳೆದ ಉಕ್ತಿಗಳ, ಉವಾಚಗಳ, ಉಲುಹುಗಳ ರೂಪವೇನು? ಇದಕ್ಕೆ ಅಲ್ಲಮನ ವಚನಗಳಲ್ಲೇ ಸಾಕ್ಷಿ-ಸುಳುವುಗಳು ಸಿಗುತ್ತವೆ. ಅವೋ ಈ ಕೆಳಗಿನಂತಿವೆ :

*ಘನತರ ಚಿತ್ರದ ರೂಹು ಬರೆಯಬಹುದಲ್ಲದೆ,*
*ಪ್ರಾಣವ ಬರೆಯಬಹುದೇ ಅಯ್ಯ ?*
*ದಿವ್ಯಾಗಮಂಗಳು ಹೇಳಿದ ಕ್ರಿಯೆಯಲ್ಲಿ ದೀಕ್ಷೆಯ*
*ಮಾಡಬಹುದಲ್ಲದೆ,*
*ಭಕ್ತಿಯ ಮಾಡಬಹುದೇ ಅಯ್ಯಾ ?*
*(ಅಲ್ಲಮ : ವ. ಸಂ. ೭೯)*

*ನಿರಾಳವೆಂಬ ಕೂಸಿಂಗೆ ಬೆಣ್ಣೆಯನ್ನಿಕ್ಕಿ ಹೆಸರಿಟ್ಟು*
*ಕರೆದವರಾರೊ ?*

*ಅಕಟಕಟಾ ಶಬ್ದದ ಲಜ್ಜೆಯ ನೋಡಾ !*
*ಗುಹೇಶ್ವರನನರಿಯದ ಅನುಭಾವಿಗಳೆಲ್ಲರ*
*ತರಕಟಕ ಕಾಡಿತ್ತು*
*(ಅಲ್ಲಮ : ವ. ಸಂ. ೨೬೪)*

*ಹೊರಗನೆ ಕೊಯ್ದು ಹೊರಗನೆ ಪೂಜಿಸಿದವರ ಕಂಡು*
*ನಾಚಿದೆ ನಾಚಿದೆನಯ್ಯಾ*
*(ಅಲ್ಲಮ : ವ. ಸಂ. ೪೭೧)*

*ರೂಪನೆ ಕಂಡರು, ನಿರೂಪನೆ ಕಾಣರು*
*(ಅಲ್ಲಮ : ವ. ಸಂ. ೪೯೫)*

*ಶಿಶು ಕಂಡ ಕನಸಿನಂತೆ ಗುಹೇಶ್ವರನೆಂಬುದು*
*ಹೆಸರಿಲ್ಲದ ಬಯಲು*
*(ಅಲ್ಲಮ : ವ. ಸಂ. ೬೬೧)*

'ಶಬ್ದಲಜ್ಜೆ' ಎಂಬುದು ಅಲ್ಲಮನ ಕಾವ್ಯ ಪರಿಕಲ್ಪನೆಯಾಗಿದ್ದು ಈ ಮೇಲಿನ ವಚನೋಕ್ತಿಗಳು ಅದರ ಪ್ರಯೋಗಗಳಾಗಿವೆ ಮತ್ತು 'ಶಬ್ದಲಜ್ಜೆ' ಪರಿಕಲ್ಪನೆಯನ್ನು ವಿವರಿಸಲೆಂದೇ ಬರೆದ ಉಕ್ತಿಗಳಂತಿವೆ. ಅಂತೆಯೇ ಪ್ರಸ್ತಾಪಿತ ಈ ಉಕ್ತಿಗಳು 'ಶಬ್ದಲಜ್ಜೆ' ಪರಿಕಲ್ಪನೆಯ ಸ್ವರೂಪವನ್ನು ಚೆನ್ನಾಗಿ ಮನದಟ್ಟುಮಾಡುವಲ್ಲಿ ಅಕ್ಷರಶಃ ಯಶಸ್ವಿಯಾಗಿವೆ.

ಅಲ್ಲಮ ಮಹಾ ಸಂದೇಹಿ ಮತ್ತು ತೀಕ್ಷ್ಣ ತಾರ್ಕಿಕ. ಅಂತೆಯೇ ಕೇಳುತ್ತಾನೆ: 'ಘನತರ ಚಿತ್ರದ ರೂಹು ಬರೆಯಬಹುದಲ್ಲದೆ, ಪ್ರಾಣವ ಬರೆಯಬಹುದೇ' ಎಂದು. ಮತ್ತೂ ಪ್ರಶ್ನಿಸುತ್ತಾನೆ – 'ದೀಕ್ಷೆಯ ಮಾಡಬಹುದಲ್ಲದೆ ಭಕ್ತಿಯ ಮಾಡಬಹುದೇ' ಎಂದು. ಅಲ್ಲಮ ಕೇಳಿರುವಂತೆ ಭಕ್ತಿಯನ್ನು ಬರಹದಲ್ಲಿ ಅಭಿವ್ಯಕ್ತಿಸುವುದು ಹೇಗೆ? ಘನತರ ಚಿತ್ರದಲ್ಲಿ ಪ್ರಾಣವ ಬರೆಯುವುದು ಹೇಗೆ? ಅನುಭಾವವನ್ನು ಅಭಿವ್ಯಕ್ತಿಸುವುದು ಹೇಗೆ? ನಿಜಕ್ಕೂ ಇವು ಪ್ರಶ್ನೆಗಳಾಗಿಯೇ ಉಳಿಯುತ್ತವೆ.

ಅಂದ ಹಾಗೆ ಭಕ್ತಿಯನ್ನು, ಪ್ರಾಣವನ್ನು, ಅನುಭಾವವನ್ನು ಸೃಜನಶೀಲ ವಿಧಾನಗಳಾದ ಚಿತ್ರ, ಸಂಗೀತ, ಬರಹ (ಸಾಹಿತ್ಯ) ಇತ್ಯಾದಿಗಳಲ್ಲಿ ಅಭಿವ್ಯಕ್ತಿಸಲು ಸಾಧ್ಯವಿಲ್ಲ. ಇದನ್ನೇ ಅಲ್ಲಮ 'ಶಬ್ದದ ಲಜ್ಜೆ' ಎಂದು ಕರೆಯುತ್ತಾನೆ. ಇಲ್ಲಿ ಭಾಷೆಯ ದೌರ್ಬಲ್ಯವನ್ನು ಕುರಿತು ಅಲ್ಲಮ ಮಾತಾಡಿದಂತಿದೆ. 'ಅನುಭಾವವೆಂಬುದು ರಚನೆಯ ಮಾತೆ' ಎಂಬ ಅಲ್ಲಮನ ನುಡಿ ಇದನ್ನೇ ಪುಷ್ಟೀಕರಿಸುತ್ತದೆ. ಶಬ್ದ, ಭಾಷೆ, ಸಂವಹನ, ಅಭಿವ್ಯಕ್ತಿ ಮುಂತಾದ ಪರಿಕಲ್ಪನೆಗಳ ಕುರಿತಾಗಿ ಅಲ್ಲಮ ಮಾತಾಡುತ್ತಾ ಅವುಗಳ ದೌರ್ಬಲ್ಯವನ್ನು, ಮಿತಿಯನ್ನು ಅನಾವರಣಗೊಳಿಸುವಲ್ಲಿ ಓರ್ವ ಬೌದ್ಧಿಕ ವಿಮರ್ಶಕನಾಗಿ, ಭಾಷಿಕಚಿಂತಕನಾಗಿ ನಮಗೆ ಕಾಣದೊರೆಯುತ್ತಾನೆ. ಮುಖ್ಯವಾಗಿ 'ಅನುಭಾವಿ' ಕಾವ್ಯದಲ್ಲಿನ ಅಭಿವ್ಯಕ್ತಿ ಸಮಸ್ಯೆ ಕುರಿತಾಗಿ ಅಲ್ಲಮ ಇಲ್ಲಿ ಚರ್ಚಿಸಿದಂತಿದೆ.

ಅನುಭಾವಿ ಕಾವ್ಯದಲ್ಲಿ ಅಭಿವ್ಯಕ್ತಿ ಸಮಸ್ಯೆ ಕುರಿತಾಗಿ ಮಾತಾಡುವ ಮೂಲಕ ಅಲ್ಲಮ ಆಧ್ಯಾತ್ಮಿಕ ಲೋಕದ ಅಂತಸ್ಸಮಸ್ಯೆಯೊಂದನ್ನು ಅನಾವರಣಗೊಳಿಸಿದ್ದಾನೆ. ಸ್ವತಃ ಅನುಭಾವಿಯಾದ ಅಲ್ಲಮನೇ ಈ ಪ್ರಶ್ನೆ ಎತ್ತಿದ್ದರಿಂದ ಅಥೆಂಟಿಸಿಟಿಯ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿದೆ.

ಕವಿಗಳಿಗೆ ಭಾಷೆ, ಸಾಹಿತ್ಯ ಚರಿತ್ರೆಯ ಉದ್ದಕ್ಕೂ ಅಭಿವ್ಯಕ್ತಿಯ ಒಂದು ಸಮಸ್ಯೆಯಾಗಿ ಕಾಡಲಿಲ್ಲ; ಅಷ್ಟೇಕೆ ವಚನಕವಿ ಬಸವಣ್ಣನನ್ನೂ ಈ ಸಮಸ್ಯೆ ತೀವ್ರವಾಗಿ ತಟ್ಟಲಿಲ್ಲ, ಬಾಧಿಸಲಿಲ್ಲ. ಇದು ತೀವ್ರವಾಗಿ ಕಾಡಿದ್ದು, ತಟ್ಟಿದ್ದು, ತೊಳಲಾಡಿಸಿದ್ದು, ಬಳಲಿಸಿದ್ದು ಅನುಭಾವಿ ಕವಿಗಳನ್ನು; ತರಕಟಿಸಿ ಕಾಡಿದ್ದು ಅಲ್ಲಮನಂಥವನನ್ನು. ಅಂತೆಯೇ "ಅನುಭಾವಿಗಳಿಗಂತೂ ಭಾಷೆಯ ಅಸಾಮರ್ಥ್ಯ ನಿರಂತರವಾಗಿ ಕಾಡುತ್ತದೆ. ಅವರ ಅಲೌಕಿಕವಾದ ಅನುಭವವನ್ನು ಲೌಕಿಕವಾದ ಭಾಷೆಯಲ್ಲಿ ಹೇಳಲಿಕ್ಕೆ ಆಗುವುದಿಲ್ಲ. ಆದರೆ ಅದನ್ನು ಹೇಳಲು ಭಾಷೆಯನ್ನು ಬಿಟ್ಟು ಬೇರೆ ಮಾರ್ಗವೂ ಇಲ್ಲ. ಎಲ್ಲ ಅನುಭವಿಗಳು, ವಿಶೇಷವಾಗಿ ಅನುಭಾವವನ್ನೇ ವಸ್ತುವಾಗುಳ್ಳ ಮತ್ತು ಅದನ್ನು ಅಭಿವ್ಯಕ್ತಿಸಲೇಬೇಕಾದ ಒತ್ತಡದಲ್ಲಿರುವ ಅನುಭಾವಿ ಕವಿಗಳು ಈ ವಿಷಯದಲ್ಲಿ ತೊಳಲಾಡಿದ್ದಾರೆ. ಭಾಷೆ ಅವರನ್ನು ತೊಳಲಾಡಿಸಿದ ರೀತಿಯನ್ನು 'ತರಕಟಗಾಡು' ಎಂಬ ಅಪರಿಚಿತ ಶಬ್ದ ತನ್ನ ವ್ಯಂಜನಗಳ ಕರ್ಕಶತೆಯಿಂದಲೇ ಸಮರ್ಥವಾಗಿ ಅಭಿನಯಿಸುತ್ತದೆ" (ಗಿರಡ್ಡಿ: ೧೯೯೩ : ವಚನ ವಿನ್ಯಾಸ) ಎಂಬ ಮಾತುಗಳು ಸತ್ಯಸ್ಯಸತ್ಯವಾಗಿವೆ.

**ಬಿ. ಶರಣಪ್ಪ ಸತ್ಯಂಪೇಟೆ**
ಸತ್ಯಂಪೇಟೆ - ಸುರಪುರ, ಕಲಬುರ್ಗಿ


# Latest Books from Navakarnataka



Page : 176 Rs. 90



Page : 152 Rs. 90



Page : 192 Rs. 90



Page : 72 Rs. 35

Please add postage Rs. 20/- and Send M.O./D.D. to:




*Navakarnataka Publications Private Limited*
Embassy Centre, Crescent Road, P. B. No. 5159, Bangalore - 560 001
Phone : 22203580/81/82, 30578022, 28 Fax : 30578023
e-mail : navakarnataka@vsnl.com web : www.navakarnatakabooks.com

*Branches*
Gandhinagar, Bangalore-9
© 22251382
K. S. Rao Road, Mangalore-1
© 2441016
Ramaswamy Circle, Mysore-24
© 2424094
Station Road, Gulbarga-1
© 224302

# ನಂಬಿಕೆ, ಅಂಧವಿಶ್ವಾಸ
## ಒಂದು ಕಿರು ಸಮೀಕ್ಷೆ

"ರೀ, ಇವತ್ತು ರವಿವಾರ. ಆರು ತಾಸಿಗೆ ರಾಹು ಕಾಲ ಮುಗ್ದನಂತ್ರನೇ ಹುಡ್ಗಿ ನೋಡೋಕೆ ಹೊರಡಿ."

"ನೀವು ಕಾಯ್ಲೆ ಬಿದ್ದಿದ್ದಾಗ ಧರ್ಮಸ್ಥಳಕ್ಕೆ ಹೇಳಿದ್ದ ಹರಕೆನ್ನ ಈ ತಿಂಗ್ಳು ತೀರಿಸಬೇಕಲ್ರೀ ?"

"ಕೆಲಸದ ಭೇಟಿಗೆ ಹೊರಡ್ತಿದ್ದಿ – ದೇವ್ರಿಗೆ ಪ್ರಾರ್ಥನೆ ಮಾಡಿ ಹೋಗಪ್ಪಾ."

"ಅವ್ನಿಂದ ಹುಟ್ಟೋ ಮರಿ ಮೊಮ್ಮಗನ್ನ ನೋಡಿಯೇ ಸಾಯ್ತೇನೆಂದಿದ್ದ ಅಜ್ಜಿಯ ಆಸೆ ತೀರ್ೃಸದಿದ್ದದ್ದಕ್ಕೆ ಶಾಪ ತಟ್ಟದಿರುತ್ತಾ ?"

"ರಾಯಚೂರು ಪಕ್ಕದ ಹಳ್ಳಿಯಲ್ಲಿ ಸಂಪತ್ತು ಸಿಗುವುದೆಂದ ಒಬ್ಬ ಸಾಧು ಮಾತನ್ನು ನಂಬಿ ಲಂಬಾಡಿ ಕುಟುಂಬ ಕನ್ನೆಯಾದ ತಮ್ಮ ಮಗಳನ್ನು ಕೊಂದು ದೇವಿಗೆ ರಕ್ತ ಅರ್ಪಿಸಿದರು." ಪತ್ರಿಕೆಯ ಸುದ್ದಿ.

– ಇಂತಹ ಮಾತುಗಳನ್ನು ನಮ್ಮ ದಿನಚರಿಯಲ್ಲಿ ಹತ್ತಾರು ಸಲ ಕೇಳುತ್ತಿರುತ್ತೇವೆ. ಯಾವುದನ್ನೆಲ್ಲ ಮೂಢನಂಬಿಕೆ ಎನ್ನೋಣ ಎಂಬ ಪ್ರಶ್ನೆಗೆ ಉತ್ತರವಾಗಿ ಸ್ವಲ್ಪ ಒಳಹೊಕ್ಕು ಈ ವಿಷಯವನ್ನು ವಿಚಾರಿಸೋಣ.

**ನಂಬಿಕೆ, ಮೂಢನಂಬಿಕೆ ಎಂದರೇನು, ಯಾವುದಲ್ಲ ?**

ನಿಜವಾದ ನಂಬಿಕೆ ಎಂದರೆ ಒಂದು ಶಕ್ತಿಯ, ವ್ಯಕ್ತಿಯ, ಮೇಲೆ ಇಡುವ ಹಿತಚಿಂತನೆಯ ಭರವಸೆ. ಇದು ವಿಚಾರಶಕ್ತಿಗೆ, ವೈಜ್ಞಾನಿಕ ಪರೀಕ್ಷೆಗೆ ನಿಲುಕದು. ವಿಶ್ವಾಸಿಗನ ಚಂಚಲ ಮನಸ್ಸಿಂದ ವಿಭಿನ್ನವಾಗಿ ಅತಿ ಗಹನವಾದುದು. ನಂಬಿಕೆ ಉಂಟಾಗಲು ಆ ಶಕ್ತಿಯೊಂದಿಗೆ ಐಕ್ಯತಾ ಮನೋಭಾವ ಅಗತ್ಯ; ಇದು ತನ್ನನ್ನೇ ಅರ್ಪಿಸಿಕೊಳ್ಳುವ ಪ್ರಶ್ನೆಯಾದುದರಿಂದ ಅದರ ಬಗ್ಗೆ ನಿಕಟ ಮಾಹಿತಿ ಅವಶ್ಯ. ಬುಡಕಾಣದ ಪಾಳುಬಾವಿಗೆ ಹಾರಲಾದೀತೆ ? ಆದರೆ ಅಜ್ಞಾತ, ಅವ್ಯಕ್ತ ಮತ್ತು ನಿಗೂಢತೆ – ಇವೆಲ್ಲ ದೈವಿಕ ಶಕ್ತಿಯ ಸ್ವಭಾವವಾದುದರಿಂದ ಈ ಮಟ್ಟದ ಅರಿವು ಸಾಧ್ಯವಿಲ್ಲವಾಗಿ ವಿಶ್ವಾಸವೆನ್ನುವುದು ಕಡೆಗೆ ಭಾವನೆ ಮತ್ತು ಡಂಭಾಚಾರದ ಬರಡು ಮಾತಾಗುತ್ತದೆ. ತನ್ನ ಇಚ್ಛಾಪೂರ್ೃಕೆ ಮತ್ತು ಭಯನಿವಾರಣೆಗಾಗಿ ವ್ಯಕ್ತಿ ಇದರ ಮೊರೆಹೋಗುತ್ತಾನೆ.

– ವಿಶ್ವಾಸಿತ ಶಕ್ತಿಗಳು ಅನೇಕವಿದ್ದಲ್ಲಿ ಅವು ಮಹಾಶಕ್ತಿಗಳಲ್ಲವೆಂದರ್ಥ. ಈ ಕಾರಣದಿಂದ ಹಿಂದೂಧರ್ಮದ ಬಹುದೇವ ತತ್ತ್ವದಲ್ಲಿ ನಂಬಿಕೆ ಬರೇ ಸಾಂಕೇತಿಕವಾಗಿಬಿಡುತ್ತದೆ. ಹಲವರನ್ನು ನಂಬುವೆನೆನ್ನುವವನಿಗೆ ವಾಸ್ತವವಾಗಿ ಯಾರಲ್ಲೂ ಅದಿಲ್ಲ. ಯಾಕೆಂದರೆ, ದೇವರಲ್ಲಿ ಅಥವಾ ತನ್ನಲ್ಲಿ ವಿಶ್ವಾಸವೆಂಬುದರಲ್ಲಿ ಆಂಶಿಕ, ಸಂಧಾನ ಎಂಬುದಿಲ್ಲ – ಪೂರ್ಣ ಅಥವಾ ಶೂನ್ಯ : ಗಾಳಿಯ ಬಲೂನಿನಂತೆ. ಹಾಗಾಗಿ 'ತನ್ನಲ್ಲಿ ವಿಶ್ವಾಸದೊಂದಿಗೆ ದೇವರನ್ನೂ ನಂಬು' ಎನ್ನುವ ಬೋಧನೆ ವಿರುದ್ಧದಿಕ್ಕಲ್ಲಿ ಚಲಿಸುವ ನೌಕೆಗಳಲ್ಲಿ ಕಾಲಿರಿಸಿದಂತಾಗುತ್ತದೆ. ಯಾಕೆಂದರೆ ಇವೆರಡೂ ಮೂಲತಃ ವಿರುದ್ಧಗುಣಗಳು. ಒಂದಕ್ಕೆ ವಿಚಾರಶಕ್ತಿ ಸಂಪೂರ್ಣವಾಗಿ ಬೇಕಾದರೆ ಇನ್ನೊಂದಕ್ಕೆ ಅದು ವರ್ಜ್ಯ – ಇರಬಾರದು. ಇದು ನಮ್ಮ ಇಂದಿನ ಸಮಾಜದ ಹೀನಾಯ ಪರಿಸ್ಥಿತಿಗೆ ಮುಖ್ಯ ಕಾರಣ.

– ಶಕ್ತಿ ಏಕವೆಂದಾದಲ್ಲಿ ಅದು ಪ್ರಕೃತಿ ರೂಪದಲ್ಲಿರುವ ಪರಮೇಶ್ವರನೇ ಸರಿ. ಇಂತಹ ಮಹಾನ್ ಶಕ್ತಿಯು ಸೃಷ್ಟಿಯ ಸಾವಿರಾರು ತಳಿಗಳಲ್ಲಿ ಒಂದಾದ, "ಯೋಚಿಸಬಲ್ಲ ಮಾನವ"ನ ತುಚ್ಛ ಆಸೆಯೊಂದಿಗೆ ಸ್ಪಂದಿಸುವುದೆಂದರೆ ಒಪ್ಪತಕ್ಕ ಮಾತಲ್ಲ. ಹಾಗಾಗಿ ಯಾವುದೇ ರೂಪದ (ಪಾರಮಾರ್ಥಿಕ ಕೂಡ) ಆಕಾಂಕ್ಷೆ ಇದ್ದಲ್ಲಿ ನಂಬಿಕೆ ಇಲ್ಲ. ಇವಕ್ಕೆ ಎಣ್ಣೆ ಸೀಗೆ ಸಂಬಂಧ. ಈ ಆಸೆಯೇ ಶೋಕ, ನಿರಾಸೆಗೆ ಮೂಲವಾಗುತ್ತದೆ.

– ಒಬ್ಬ ವ್ಯಕ್ತಿಗೆ ಜೀವನಾಧಾರವಾಗಿ ಒಬ್ಬ ಹಿರಿಯ, ಒಂದು ತಾಯಿತದಂತೆ, ಒಂದು ನಂಬಿಕೆಯೂ ಅವಶ್ಯ. ಎಲ್ಲರೂ ಅನ್ನುವುದು ತನ್ನದು ಮಾತ್ರ ವಿಶ್ವಾಸ, ಅದಕ್ಕೆ ಪ್ರತಿಕೂಲವಾದದ್ದೆಲ್ಲ ಅಂಧವಿಶ್ವಾಸ. ಈ ಅಭಿಪ್ರಾಯವನ್ನು ಹಿಂದಿನ ವಿಶ್ಲೇಷಣೆಯೊಂದಿಗೆ ಸೇರಿಸಿದರೆ ಎಲ್ಲರ ವಿಶ್ವಾಸವೂ ಮಿಥ್ಯೆ ಎಂದಾಗುವುದು. ಲೌಕಿಕದಲ್ಲಾದರೂ ಪತಿ, ಪತ್ನಿ, ಮಕ್ಕಳು, ಮಿತ್ರ, ಗುರು-ಶಿಷ್ಯರ ನಡುವೆ ಇದು ಸಾಧ್ಯ. ಆದರೆ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಯಾಂತ್ರಿಕವಾದ ಮಂತ್ರೋಚ್ಚಾರಣೆ, ಮೂರ್ತಿಪೂಜೆ, ನರ್ತನದೊಂದಿಗೆ ಭಜನೆ, ಮೋಕ್ಷಕ್ಕಾಗಿ ತಪಸ್ಸು – ಇವೆಲ್ಲ ಒಯ್ಯುವುದು ಒಂದು ಕಲ್ಪನಾಲೋಕಕ್ಕೆ. ಇದರಲ್ಲಿ ದೇವರು ಪ್ರತ್ಯಕ್ಷವಾಗುವುದರಲ್ಲಿ ಆಶ್ಚರ್ಯವಿಲ್ಲ. ಅವುಗಳಿಂದ ಸಿಗುವ ಶಾಂತಿ, ಸಮಾಧಾನವು ಮದ್ಯ, ಮಾದಕ ಪದಾರ್ಥ ಮತ್ತು ಉದ್ವೇಗ ನಿವಾರಕ ಔಷಧಿಗಳಿಂದ ಪಡೆಯುವ ಮನೋವಿಕಲ್ಪ ಸ್ಥಿತಿಗಿಂತ ಬೇರೆಯಲ್ಲ.

– ಹಳೆಯ ಮಿತ್ರ, ಜರೂರಾಗಿ ತುಸು ಸಾಲ ಕೇಳಿದಾಗ ಹತ್ತಾರು ಪ್ರಶ್ನೆ ಕೇಳುವ ವ್ಯಕ್ತಿ, ಜೋಯಿಸರು ದೋಷ ನಿವಾರಣೆಗಾಗಿ ಶಾಂತಿ ಮಾಡಿಸೆಂದಾಗ ಅದರ ಉಪಯುಕ್ತತೆ ಬಗ್ಗೆ ಏನೊಂದೂ ವಿಚಾರಿಸದೆ ಹತ್ತುಪಟ್ಟು ಖರ್ಚಿನ ಈ ಕಾರ್ಯಕ್ಕೆ ಧುಮುಕುವನು. ಕಷ್ಟ ನಿವಾರಣೆಗಾಗಿ ಭೂತಕ್ಕೆ ಪ್ರಾಣಿ ಬಲಿ; ಹಾವಿನ ಹುತ್ತಕ್ಕೆ ಕ್ಷೀರಾಭಿಷೇಕ; ಮಣಗಟ್ಟಲೆ ಧಾನ್ಯ, ಜೇನು, ತುಪ್ಪ ಸುರಿದು ಮಾಡುವ ಹೋಮ; ಪಾಪದ ಪರಿಹಾರಕ್ಕಾಗಿ ವ್ಯಾಪಾರಿಯಿಂದ ತಿರುಪತಿಯಲ್ಲಿ ನೋಟಿನ ಕಂತೆಯ ದಾನ; ಕೈಚಳಕದಿಂದ ವಿಭೂತಿ, ರಿಸ್ಟ್‌ವಾಚನ್ನು 'ಸೃಷ್ಟಿಸುತ್ತಾ' ದರ್ಶನ ಈಯುವ ಬಾಬಾನ ಶಕ್ತಿಗೆ ಮರುಳಾಗಿ ತಮ್ಮನ್ನರ್ಪಿಸಿಕೊಳ್ಳುವ ಜನ ಸಮೂಹ – ಇವೆಲ್ಲವೂ ಅಂಧವಿಶ್ವಾಸ, ಮೂಢನಂಬಿಕೆಯ




ಪಿ. ಎಲ್. ರಾವ್

ಸಮಾನ ದೃಷ್ಟಾಂತಗಳು. ಒಬ್ಬ ವ್ಯಕ್ತಿ, ಒಂದು ಶಕ್ತಿ ಅಥವಾ ಘಟನೆಯ ಹಿನ್ನೆಲೆ ತನಗೆ ಅರಿಯದ ಮಾತ್ರಕ್ಕೆ ಅವನ್ನು ದೈವಪಟ್ಟಕ್ಕೇರಿಸುವುದು ಮೂಢತನವಲ್ಲವೆ? ಹಾಗಾದರೆ ಗಣಕೀಕೃತಯಂತ್ರ, ಬಾಹ್ಯಾಕಾಶನೌಕೆ ಮತ್ತು ಆಧುನಿಕ ವೈದ್ಯ ವಿಜ್ಞಾನಕ್ಕೂ ಆರತಿ ಎತ್ತಬೇಕಲ್ಲ?

– ಹಿಂದೂ ಧರ್ಮಮೂಲವಾದ ಯಜ್ಞ ಹೋಮ ಕ್ರಮಗಳೆಲ್ಲ ವೇದೋಕ್ತವಾಗಿದ್ದು ಕ್ರಿ.ಶ. ೧೦೦೦ರ ಮೊದಲೇ ಸ್ಥಿರಗೊಂಡಿದ್ದು ಇಂದಿನ ವಿಜ್ಞಾನಯುಗಕ್ಕೆ ಸಕಾಲೀಯವಲ್ಲ. ಮಂತ್ರದ ಅರ್ಥವರಿಯದ ಇಂದಿನ ಪುರೋಹಿತವರ್ಗ ಉಚ್ಚರಿಸುತ್ತಿರುವುದು ದೈವಸ್ತುತಿಯೋ ವೇದಕಾಲದ ಯಾವುದೋ ಕ್ರಮನಿರೂಪಣೆಯೋ ಎಂಬುದನ್ನು ವಿವೇಚಿಸದೆ ಪುಣ್ಯಾಕಾಂಕ್ಷಿಯಾದ ಭಕ್ತರನ್ನು ತೃಪ್ತಿಪಡಿಸಲು ರಾಗವಾಗಿ ಹಾಡುತ್ತಾರೆ. ನವಗ್ರಹಗಳು, ಅವತಾರ ಪುರುಷರು, ಅಷ್ಟದಿಕ್ಪಾಲಕರು, ಸ್ವರ್ಗ ನರಕ – ಇವೆಲ್ಲದರ ವೈಜ್ಞಾನಿಕ, ಚಾರಿತ್ರಿಕ ಪರಿಜ್ಞಾನ ಜನತೆಗಿರುವಾಗ ಇವನ್ನು ಕೇಂದ್ರೀಕರಿಸಿರುವ ಧರ್ಮ ಕಾರ್ಯಗಳಿಗೆ ಅರ್ಥವಿದೆಯೆ? ಸಮಾಧಾನವೆಂದರೆ ಈ ಪರಿಸ್ಥಿತಿ ಹಿಂದೂ ಧರ್ಮಕ್ಕೆ ಮಾತ್ರ ಸೀಮಿತವಲ್ಲ.

**ವಿಶ್ವಾಸದ ಮೂಲ : ಜೀವನಕ್ಕೆ ಅದರ ಅವಶ್ಯಕತೆ**

ನಂಬಿಕೆಯು ಪೂರ್ತಿ ವ್ಯಕ್ತಿಗತ; ಪತ್ನೀ ಪುತ್ರ, ಶಿಷ್ಯರ ಮೇಲೂ ಹೇರಲಾಗದುದು. ರಕ್ಷಕರ ಬೋಧನೆ, ಗುರು ಕೃಪೆ, ಸಂಸ್ಕಾರ, ಪೂರ್ವಪುಣ್ಯಫಲ – ಇವೆಲ್ಲವೂ ಅರ್ಥ ವಿಹೀನ, ಗಿಳಿಪಾಠದ ಶಬ್ದಗಳು. 'ನಂಬುವೆ' ಎನ್ನುವವರಲ್ಲಿ ಎದ್ದುಕಾಣುವುದು ಸ್ವಾಭಿಮಾನ, ವಿಚಾರಕ್ಕೆ ಎಟುಕದ ಬಾಯಿಬಡಕತನ. ದೈವಸಮೂಹವನ್ನು ನಂಬುವ ಬಗೆ, ಪರಮಾತ್ಮನ ಸೃಷ್ಟಿಕರ್ತ ಯಾರು – ಇಂತಹ ಪ್ರಶ್ನೆ ಕೇಳಿದರೆ ಉತ್ತರಿಸಲಾಗದೆ ಸಿಟ್ಟಾಗುವರು. ಒಬ್ಬನ ಸ್ವಾನುಭವ, ಬೆಳೆದ ಪರಿಸರ, ಸಂಸ್ಕೃತಿ ಮತ್ತು ವಿವೇಚನಾ ಪ್ರವೃತ್ತಿಯನ್ನು ಅವಲಂಬಿಸಿ ಮೇಲಿಂದ ಮಾತುಗಳ ಪರಿಗ್ರಹಣೆ ಅವನಲ್ಲಿ ಆಗಲು ಸಾಧ್ಯ.

ಈಗೊಂದು ಪ್ರಶ್ನೆ: ನಂಬಿಕೆ ಇಲ್ಲದ ಜೀವನ ಸಾಧ್ಯವೇ? ಅಜ್ಞಾತ, ಅವ್ಯಕ್ತ ಶಕ್ತಿಯ ಅವಲಂಬನೆಯು ತಮ್ಮ ತನುಮನಧನದ ದುರ್ವ್ಯಯವೆಂದರಿತು, ನಮ್ಮೆದುರಿರುವ ಅಗಾಧವಾದ ಬ್ರಹ್ಮಾಂಡ, ಅದರಲ್ಲಿ ಅನಿಶ್ಚಿತ ಮತ್ತು ವೈವಿಧ್ಯಮಯ ಸೌಂದರ್ಯ ಮತ್ತು ವರ್ಣರಂಜಿತವಾದ ನಮ್ಮ ಜೀವನವೇ ಸತ್ಯ; ಸೃಷ್ಟಿಯ ರಕ್ಷಣೆ, ಪರರಲ್ಲಿ ಅನುಕಂಪ, ನಿರಹಂಕಾರ, ಜಗತ್ತಿನಲ್ಲಿನ ಮಾನವ ಕಲ್ಪಿತ ದುರಂತಗಳಿಗೆ ತಾನೇ ಮೂಲ ಉತ್ತರದಾಯಿ ಎಂದೆನ್ನುವ ಪ್ರಜ್ಞೆ ಮತ್ತು ತನ್ನಲ್ಲಿ ಧೈರ್ಯ, ವಿಶ್ವಾಸ – ಈ ಆಯುಧಗಳನ್ನು ತನ್ನದಾಗಿಸಿಕೊಂಡವನು ಸಂತೃಪ್ತಿಯಿಂದ ಬಾಳುವನು.

**ಮೂಢನಂಬಿಕೆಯ ದುಷ್ಪರಿಣಾಮಗಳು**

ತಾತ್ಪರ್ಯವಾಗಿ ನಂಬಿಕೆ, ಮೂಢನಂಬಿಕೆ – ಎರಡೂ ಒಂದೇ. ಆದರೆ ಒಂದು ಲಕ್ಷಣ ವ್ಯತ್ಯಾಸವೆಂದರೆ ಹಿಂದುಳಿದವರಲ್ಲಿನ 'ಅಂಧವಿಶ್ವಾಸ'. ಜಗತ್ತಲ್ಲಿ ಸ್ವಲ್ಪ ಹಾನಿ ಮಾಡಿದರೆ ನಾಗರಿಕರ 'ವಿಶ್ವಾಸ'ವೆಂಬುದು ಮಹಾ ಕೈಗಾರಿಕೆ ಯಂತಾಗಿ ವಿಶ್ವವನ್ನೇ ನಾಶದ ಅಂಚಿಗೆ ತಲುಪಿಸುತ್ತದೆ. ಆದ್ದರಿಂದ ಎರಡನೆಯದರ ಬಗ್ಗೆ ನಮ್ಮ ಲಕ್ಷ್ಯ ಅಗತ್ಯ.

ಜೀವನದಲ್ಲಿ ವ್ಯಕ್ತಿ ಎದುರಿಸುವ ಪ್ರತಿ ಸಮಸ್ಯೆ ಸಂಕಷ್ಟಗಳಿಗೂ ದೈಹಿಕ ಮತ್ತು ಮಾನಸಿಕ ಅಂಶಗಳಿವೆ. ನಂಬಿಕೆಯ




ಊರುಗೋಲು ಕೆಲವೊಮ್ಮೆ ಮಾನಸಿಕ ಅಂಶಕ್ಕೆ ತೋರಿಕೆಯ ಶಮನವೀಯಬಹುದು. ಯಾಕೆಂದರೆ ಎರಡೂ ಕಾಲ್ಪನಿಕ ಮನಃಸ್ಥಿತಿಗಳು. ಉದಾಹರಣೆಗೆ, ಕುರುಡ ಹೆಳವರು ಜೊತೆಯಾದರೆ ನಾಲ್ಕು ಹೆಜ್ಜೆ ಕ್ರಮಿಸಿಯಾರು; ಒಂದೊಮ್ಮೆಲೆ ವಿರುದ್ಧ ದಿಕ್ಕಲ್ಲಿ ವೇಗವಾಗಿ ಎರಡು ಗಾಡಿಗಳು ಬಂದಲ್ಲಿ ಕಂಗಾಲಾಗಿ ಕೈ ಎತ್ತಿಬಿಡುವರು. ಹಾಗಾದರೆ "ಈ ಊನವಾದ ಊರುಗೋಲಿನ ಆಸರೆಯನ್ನು ತೊರೆಯಲು ಜನರು ಸಿದ್ಧರಿಲ್ಲವಾದರೆ ಬಿಡಿ, ಅವರೇ ದಂಡ ತೆರಲಿ" ಎನ್ನುವಿರಾ? "ಹೌದು. ಆದರೆ ಸಮಾಜದಲ್ಲಿ ತಂದೆ, ಹಿರಿಯ ಅಥವಾ ಮುಖಂಡನಾರಿಸಿದ ರಸ್ತೆ ತಪ್ಪಾಗಿದ್ದರೂ ಆಶ್ರಿತರು ಅನುಸರಿಸಬೇಕಲ್ಲ?" ಹಿಮಾಲಯದಲ್ಲಾದರೆ ಒಬ್ಬ ಒಂಟಿಯಾಗಿರಬಹುದು. ಆದರೆ ಜನ ಸಮುದಾಯದಲ್ಲಿ ಒಬ್ಬನ ನಂಬಿಕೆಯಂತಹ ಚರ್ಚಾಸ್ಪದ ವರ್ತನೆಗಳು ಕೆಳಕಂಡ ವಿವಿಧರೂಪದಲ್ಲಿ ವರ್ಚಸ್ಸು ಬೀರದೆ ಬಿಡವು.

ಜಗತ್ತಿನ ಒಂದು ಆರನೇ ಅಂಶ ಜನಸಂಖ್ಯೆ ಪಡೆದಿರುವ ಭಾರತವು ಹಿಂದೂ ಧರ್ಮದ ಒತ್ತಡದಿಂದಾಗಿ ಹೀನಾಯ ಸ್ಥಿತಿಯಲ್ಲಿರುವ ಮಹಾದೃಷ್ಟಾಂತ. ಧರ್ಮಕ್ಕೆ ಪ್ರಾಧಾನ್ಯತೆ ಇತ್ತ ಎಲ್ಲ ರಾಷ್ಟ್ರಗಳಿಗೆ ಇದೇ ದುರ್ಗತಿ. ನಿರಂತರವಾಗಿ ಬೋಧನೆ, ಪ್ರವಚನವನ್ನಾಲಿಸುತ್ತಾ, ಇಹಕ್ಕಿಂತ ಪರಲೋಕದಲ್ಲಿ ಸುಖದ ಹಾರೈಕೆ ಜಾಸ್ತಿಯಾದಂತೆ, ವ್ಯಕ್ತಿ ಕಾಲ್ಪನಿಕದೆಡೆಗೆ ಎಳೆಯಲ್ಪಡುತ್ತಾ ತನ್ನೊಳಗೆ ವಿಶ್ವಾಸ, ವಿವೇಚನಾಶಕ್ತಿ, ಸಾಧನೆಯ ಛಲ, ಸೃಜನಶೀಲತೆಯನ್ನು ಕಳಕೊಳ್ಳುತ್ತಾ ಅರಕ್ಷಿತಭಾವ, ಮಂಕುತನ, ಮಂದಬುದ್ಧಿ, ಚಂಚಲ ಸ್ವಭಾವದಿಂದಾಗಿ ಸದಾ ಹೊಸ ಹೊಸ ಆಶ್ರಯ ವನ್ನರಸುತ್ತಾನೆ. ಹೊಸತನ್ನು ಕಲಿಯುವ ಅಭಿರುಚಿ ಇಲ್ಲದೆ ವಿಚಾರಶಕ್ತಿಯನ್ನು ಮೊಂಡಾಗಿಸಿದರೆ ಮೆದುಳು ಜಡವಾಗಿ ಶೀಘ್ರದಲ್ಲೇ ಮುದಿತನ ಆವರಿಸುವುದು.

ಪರಿಣಾಮಗಳಿಗೆ ಲೆಕ್ಕವಿಲ್ಲ. ಅಂತರರಾಷ್ಟ್ರೀಯ ಮಟ್ಟದ ಎಲ್ಲ ಕ್ಷೇತ್ರ (ಸ್ಪರ್ಧೆ, ಕ್ರೀಡೆ, ಸಾಹಿತ್ಯ, ಚಲಚ್ಚಿತ್ರ), ನೊಬೆಲ್ ಪುರಸ್ಕಾರ, ನವ್ಯ ಸಂಶೋಧನಾ ದಾಖಲಾತಿಗಳಲ್ಲಿ ನಮ್ಮ ಸಾಧನೆ ಶೂನ್ಯಕ್ಕೆ ಸರಿ. ಒಲಿಂಪಿಕ್ಸ್‌ನ ಅರ್ಧಾಂಶ ಆಟಗಳಲ್ಲಿ ಪ್ರಾಥಮಿಕ ಹಂತದ ನೈಪುಣ್ಯವೂ ಇಲ್ಲವಾದರೆ ಉಳಿದವಲ್ಲಿ ಆರಂಭದ ಆವೃತ್ತಿಗಳಲ್ಲೇ ಮುಗ್ಗರಿಸಿ ಹಿಂದಿರುಗುತ್ತೇವೆ. ವಿಶ್ವದಲ್ಲಿ ನಮ್ಮದೆಂದು ಹೆಸರು ಪಡೆದಿದ್ದ ಯೋಗ, ಆಯುರ್ವೇದ, ಹಾಕಿ ಕ್ರೀಡೆ, ಚದುರಂಗ ಮತ್ತು ಬಾಸ್ಮತಿ ಬತ್ತದ ತಳಿಗಳ ಮೇಲೆ ನಮ್ಮ ಏಕಸ್ವಾಮ್ಯ ಉಳಿದಿಲ್ಲ.

ಇಂಗ್ಲಿಷಿನ ಒಂದು ಗ್ರಂಥದ ಸರಾಸರಿ ಪುಟಸಂಖ್ಯೆ ೩೦೦ ಆದರೆ ದೇಶೀಯ ಭಾಷೆಗಳಲ್ಲಿ ೧೫೦. ಶೇ. ೯೦ ಗ್ರಂಥ ಮತ್ತು ಚಲಚ್ಚಿತ್ರಗಳ ಕಥಾವಿಷಯ ಗಂಡು ಹೆಣ್ಣಿನ ತ್ರಿಕೋಣ ಅಥವಾ ಚತುಷ್ಕೋಣ ಸಂಬಂಧ. ಧೈರ್ಯ, ಸಾಹಸ ಪ್ರವೃತ್ತಿ, ಗಹನವಾದ ಅಧ್ಯಯನ ಪ್ರವೃತ್ತಿ, ಪ್ರಯೋಗಶೀಲತೆಗಳಲ್ಲೆಲ್ಲಾ ಅತಿ ಹಿಂದಿದ್ದೇವೆ. ಹಿಂದೂ ಧರ್ಮದ ಮೂಲಬಿಂದುವಾದ ಕೈಲಾಸ – ಮಾನಸ ಸರೋವರ, ಪುಷ್ಪಗಳ ಕಣಿವೆ, ವೇದಗಳು, ಕನ್ನಡ ಶಬ್ದಕೋಶ, ಜಿಮ್ ಕಾರ್ಬೆಟ್ ರಾಷ್ಟ್ರೀಯ ಉದ್ಯಾನವನ, ಇವೆಲ್ಲದರ ಬಗ್ಗೆ ಪರದೇಶೀಯರ ಕೃತಿಗಳೇ ನಮಗಿನ್ನೂ ಕೈಪಿಡಿ. ಭಾರತದ ಚರಿತ್ರೆ ಬರೆಯುವ ಲೇಖಕನು ವಾಸ್ತವಿಕತೆಗಿಂತ ಮೊದಲು ತನ್ನ ದೃಷ್ಟಿಕೋಣವನ್ನು ಹೇರುವನು. ಮಧ್ಯ ಅಮೆರಿಕಾದ ಗ್ರ್ಯಾಂಡ್ ಕೆನಾನ್ ಭೂಕುಸಿತ ಪ್ರದೇಶದ ಕುರಿತು ಸಮೀಪದ ಗ್ರಂಥಾಲಯಗಳಲ್ಲಿ ದೊರಕುವ ವಿವರದ ನೂರರಲ್ಲಿ ಒಂದಂಶ ನಮ್ಮ ಅಪೂರ್ವ ಸಂಪತ್ತಾದ ಹಿಮಾಲಯದ ಬಗ್ಗೆ ನಮಗಿನ್ನೂ ತಿಳಿದಿಲ್ಲ.

ಸಂವಿಧಾನದಲ್ಲಿತ್ತ ಧರ್ಮಸ್ವಾತಂತ್ರ್ಯದ ಫಲವಾಗಿ ನಮ್ಮಲ್ಲಿ ಧರ್ಮಸಂಸ್ಥೆ, ದೇವಾಲಯ, ಮಠ, ಗುಡಿ, ಮಸೀದಿಗಳು ಏರುತ್ತಾ ಇವೆ. ಪ್ರತಿಯೊಂದೂ ತನ್ನ ಮತ, ಜಾತಿ, ಕೋಮುವಿನ ಏಳಿಗೆಗಾಗಿ ನಗರ ಪಟ್ಟಣಗಳ ಕೇಂದ್ರ ಸ್ಥಾನದಲ್ಲಿ ಶಿಕ್ಷಣ ಸಂಸ್ಥೆಗಳನ್ನು ನಿರ್ಮಿಸಿ, ಅಗಾಧವಾದ ಜಮೀನು, ಸಂಪತ್ತು (ಕಾಳಧನ ಕೂಡ) ಪಡೆದು, ಪರ್ಯಾಯ ಆಡಳಿತವಾಗಿ, ಈ ಕ್ಷೇತ್ರವು ಇಂದು ಸರಕಾರದ ನಂತರ ಅತಿ ಶ್ರೀಮಂತ ವಿಭಾಗವಾಗಿದೆ. ಅಲ್ಲದೆ ಇಂತಹ ಪ್ರತಿಸಂಸ್ಥೆಯ ಉದ್ದೇಶ ತಮ್ಮದೇ ಆದ ವಿಶ್ವಾಸವನ್ನು ವಿದ್ಯಾರ್ಥಿಗಳಲ್ಲಿ ಹೇರುವುದಾಗಿರುವಾಗ ಈ ಮಕ್ಕಳು ನಂತರ ಸ್ವತಂತ್ರ ವಿಚಾರಶಕ್ತರಾಗುವರೆಂದು ಆಶಿಸುವುದು ದೂರದ ಮಾತು. ಮೂಲ ಪ್ರಶ್ನೆ: ಸಮಾಜಕ್ಕೆ ಇಷ್ಟು ಸಂಖ್ಯೆಯಲ್ಲಿ ಧರ್ಮಸಂಸ್ಥೆ ದೇವಾಲಯ ದೇವರುಗಳ ಅವಶ್ಯವಿದೆಯೇ? ಬದಲಿಗೆ ಇದೇ ಸಂಪತ್ತು ಸರಕಾರದ ಒಂದು ವಿಭಾಗದ ಮೂಲಕ ಸದ್ವಿನಿಯೋಗವಾದರೆ ರಾಕ್ಷಸಸದೃಶವಾದ ಧರ್ಮದ ವರ್ಚಸ್ಸು ನಿಯಂತ್ರಿತವಾಗಿ ಮುಂದಿನ ಪೀಳಿಗೆಗೆ ಅರ್ಥಪೂರ್ಣವಾದ ವಿದ್ಯೆ, ವಿಚಾರಶಕ್ತಿ, ಕ್ರೀಡೆಗಳಿಗೆ ಅವಕಾಶ ದೊರೆತು ಅವರು ಜವಾಬ್ದಾರ ಪ್ರಜೆಗಳಾಗಲು ಸಾಧ್ಯ. ಜನಾಭಿಪ್ರಾಯ ಈ ದಿಕ್ಕಲ್ಲಿ ಕ್ರೋಢೀಕೃತವಾದರೆ ದೇಶಕ್ಕೆ ಕ್ಷೇಮ.

ಸಾರಾಂಶವಾಗಿ ಇಂದಿನ ನಾಗರಿಕನು ತಾನು ಅನುಸರಿಸುತ್ತಿರುವ ಸಾಂಪ್ರದಾಯಿಕತೆಯು ಹಿಂದುಳಿದವರ 'ಅಂಧ'ವಿಶ್ವಾಸಕ್ಕಿಂತ ಯಾವ ರೂಪದಲ್ಲೂ ಬೇರೆಯಲ್ಲವೆಂಬುದನ್ನೊಪ್ಪಿ, ಅದರ ಸಂಕಲೆಯಿಂದ ಹೊರಬಂದು ತನ್ನ ವಿಚಾರಶಕ್ತಿಯನ್ನು ಪರಿಪೂರ್ಣವಾಗಿ ಉಪಯೋಗಿಸುತ್ತಾ ಜವಾಬ್ದಾರಿಯಿಂದ ಬಾಳಿದಲ್ಲಿ ದೇಶದ, ತನ್ಮೂಲಕ ವಿಶ್ವದ ಏಳಿಗೆ ಸಾಧ್ಯ.

**ಪಿ. ಎಲ್. ರಾವ್**
'ದಿ ಗ್ರೀನ್ಸ್' ನಂ. ೫೭, ೨ನೇ ಮುಖ್ಯರಸ್ತೆ
ಪ್ರಶಾಂತನಗರ, ಬೆಂಗಳೂರು - ೫೬೦ ೦೭೯



# ಜನಪ್ರಿಯತೆಯ ಬೆನ್ನೇರಿ 'ಸಾವಿ'ರದ ಕನಸುಗಳ ದಾರಿ

ಬಿ. ಸುರೇಶ

ನಮ್ಮ ಉದ್ಯಮವೇ ಹಾಗೆ. ಇಲ್ಲಿ ತರ್ಕಕ್ಕೆ ಸಿಗದೆ ಇರುವುದು ಒಂದೇ. ಅದು ಜನಪ್ರಿಯತೆ. ಅದು ಯಾವ ಸಿನಿಮಾನೋ, ಧಾರಾವಾಹಿಯೋ, ಅದು ಯಾಕೆ ಜನಪ್ರಿಯವಾಯಿತು ಎನ್ನುವುದು ತಿಳಿಯುವುದಿಲ್ಲ. ಯಶಸ್ಸಿನ ಮೆಟ್ಟಿಲಿಗೆ ಹತ್ತು ಸೂತ್ರಗಳು ಎಂದು ಡೇಲ್ ಕಾರ್ನಗಿಯ ಹಾಗೆ ಪುಸ್ತಕ ಬರೆಯುವಂತೆ, ನಮ್ಮ ತಯಾರಿಕೆಗಳೆಲ್ಲಾ ಯಶಸ್ವಿಯಾಗುವುದಕ್ಕೆ ಕಾರ್ಯ ಕಾರಣ ಸಂಬಂಧ ದೊರೆಯುವುದಿಲ್ಲ. ಅದಕ್ಕೆಂದೇ ಹಲವರು ಈ ಉದ್ಯಮದೊಳಗಿನ ಬದುಕನ್ನು ದೊಡ್ಡ ಜೂಜು ಎನ್ನುತ್ತಾರೆ, ಮತ್ತೆ ಕೆಲವರು ದೊಡ್ಡ ಹಳವಂಡ ಅನ್ನುತ್ತಾರೆ. ಒಟ್ಟಾರೆ ಇದೊಂದು ಓಟ! ಓಡಿದವನಿಗೆ ಅನುಭವವೇ ಲಾಭ!

ಸಿನಿಮಾದ ಮಾತು ಬಿಡಿ. ಅದು ಕನಸು ಮಾರುವವರ ಸಂತೆ. ಆದರೆ ಕಿರುತೆರೆ ಇದೆಯಲ್ಲಾ, ಇದು ನಿಜಕ್ಕೂ ಸೋಲು-ಗೆಲುವುಗಳ ಉಭಯವನರಿಯದ ಸ್ಥಿತಿ. ಯಾಕೆಂದರೆ, ಇಲ್ಲಿರುವ ಜನಪ್ರಿಯತೆಯ ಮಾನದಂಡ ಟಿ.ಆರ್.ಪಿ. ಅಥವಾ ಟಿ.ವಿ. ರೇಟಿಂಗ್ಸ್ ಎಂದು ಕರೆಸಿಕೊಳ್ಳುವ ಒಂದು ಸಂಪೂರ್ಣ ಅವೈಜ್ಞಾನಿಕ ಪದ್ಧತಿ. ಈ ಪದ್ಧತಿಯನ್ನು ಸ್ಟಾಟಿಸ್ಟಿಕ್ಸ್ ಪಂಡಿತರು ಸ್ಯಾಂಪಲ್ ರೇಟಿಂಗ್ ಎಂದು ಗುರುತಿಸುತ್ತಾರೆ. ಆದರೆ ಆ ಸ್ಯಾಂಪಲ್ ತೆಗೆದುಕೊಳ್ಳುವುದಕ್ಕೆ ಶೇಕಡ ಇಂತಿಷ್ಟು ಎಂಬ ನಿಗದಿಯಿಲ್ಲ. ಅದೊಂದು ಬಗೆಯ ಚುನಾವಣಾ ಫಲಿತಾಂಶಕ್ಕೆ ಮುನ್ನ ಪತ್ರಿಕೆಗಳವರು ನಡೆಸುವ ಸರ್ವೇ ಹಾಗೆ. ನೂರು ಜನರ ಅಭಿಪ್ರಾಯ ಆಧರಿಸಿ ಕೋಟ್ಯಂತರ ಜನರ ಮನಃಸ್ಥಿತಿಯನ್ನು ಕುರಿತು ಮಾತಾಡುವಂತಹದು. ಇಂತಹ ಎಕ್ಸಿಟ್ ಪೋಲ್‌ನ ಫಲಿತಾಂಶಗಳು ನಿಯತ ಕಾಲಿಕೆಗಳ ಮುಖಪುಟದಲ್ಲಿ ರಾರಾಜಿಸುತ್ತವೆ. ಅದರ ಪರಿಣಾಮವಾಗಿ ರಾಜಕೀಯ ವಲಯದಲ್ಲಿ ಕುದುರೆ ವ್ಯಾಪಾರದ ಸಿದ್ಧತೆಗಳೂ ಆಗಿಬಿಡುತ್ತವೆ. ಆದರೆ ಫಲಿತಾಂಶ ಸಂಪೂರ್ಣ ಉಲ್ಟಾ ಆಗಿರಬಹುದು. ಅಲ್ಲಿ ಎಕ್ಸಿಟ್ ಪೋಲ್‌ನ ಪರಿಣಾಮ ವಾಸ್ತವದ ಮೇಲೆ ಆಗದು. ಆದರೆ ನಮ್ಮ ಟೆಲಿವಿಷನ್ ಉದ್ಯಮದಲ್ಲಿ ಹಾಗಲ್ಲ. ಎಕ್ಸಿಟ್ ಪೋಲ್ ರೀತಿಯ ಸ್ಯಾಂಪಲ್ ರೇಟಿಂಗೇ ಅಂತಿಮ. ಆ ರೇಟಿಂಗ್‌ನಲ್ಲಿ ನಾವು ನೇಯ್ದ ಕನಸು ಕಾಣಿಸಿಕೊಳ್ಳದಿದ್ದರೆ ನೇಯ್ಗೆಗೆ ಪೂರ್ಣವಿರಾಮ.

**ಗುರುವಾರ ಬಂತಮ್ಮ! ಗುಮ್ಮನ ತಂತಮ್ಮಾ!**

ಹೌದು, ಗುರುವಾರ ಎಂಬುದು ನಮ್ಮ ಉದ್ಯಮದವರಿಗೆ ಬಲು ದೊಡ್ಡ ಗುಮ್ಮಾ. ಯಾಕೆಂದರೆ, ಅದೇ ದಿನ ನಮ್ಮ ಚಾನೆಲ್ಲುಗಳಿಗೆ ಬಂದು ಬೀಳುತ್ತದೆ ಸ್ಯಾಂಪಲ್ ರೇಟಿಂಗಿನ ಸರಕು. ಅಲ್ಲಿ ನಿಮ್ಮ ಕಾರ್ಯಕ್ರಮ ಮೊದಲ ಅರವತ್ತರಲ್ಲಿ ಇತ್ತೋ, ಬಚಾವ್! ಇಲ್ಲವಾದಲ್ಲಿ ಸೂರ್ಯನ ತಾಪಮಾನ ಎಷ್ಟೇ ಇದ್ದರೂ ಬೆವರಿಳಿಯ ತೊಡಗುತ್ತದೆ. ನಿಮ್ಮಿಂದ ಕಾರ್ಯಕ್ರಮ ಮಾಡಿಸುತ್ತಿರುವ ಅಥವಾ ಕೊಳ್ಳುತ್ತಿರುವ ಚಾನೆಲ್ಲಿನ ಮಂದಿ ನಿಮಗೆ ಶುಭಾಶಯ ಹೇಳಬಹುದು. ಅದೃಷ್ಟ ಚೆನ್ನಾಗಿದ್ದರೆ ಇನ್ನೊಂದೋ ಎರಡೋ ವಾರ ಉಸಿರಾಡುವ ಅವಕಾಶ ಸಿಗಬಹುದು. ಅಥವಾ ಸಾಕು ಎಂದು ಚರಮಗೀತೆ ಬರೆಯಲು ದಿನಾಂಕ ನಿಗದಿಯಾಗಬಹುದು. ನಮ್ಮ ವರ್ಷದ ಕೆಲಸಕ್ಕೆ ಗುರುವಾರದ ಗುಮ್ಮ ಏನು ಮಾಡುತ್ತಾನೋ ಎಂಬ ಗಾಬರಿ ಬೆನ್ನಿಗಂಟಿಕೊಂಡೇ ಇರುತ್ತದೆ. ಆದ್ದರಿಂದಲೇ ನಮ್ಮಲ್ಲಿನ ಬರಹಗಾರರ ಬಾಯಲ್ಲಿ 'ಸಾರ್! ಇದು ಟ್ಯಾಮ್ ಸೀನು', 'ನಾನು ಟಿ.ಆರ್.ಪಿ. ಕಿಂಗು' ಎನ್ನುವ ಮಾತುಗಳು ಸುಳಿಯುತ್ತವೆ. ದುಡ್ಡು ಹಾಕುವವನಲ್ಲಿ ಧೈರ್ಯ ಮೂಡಿಸುವುದಕ್ಕೆ ಇವೆಲ್ಲಾ ಎನರ್ಜಿ ಬೂಸ್ಟರ್ಸ್ ಇದ್ದಂತೆ. ಸಿನಿಮಾ ತಯಾರಿಕೆಯ ಅನುಭವ ಇರುವವರಿಗೆ 'ಇದು ಮಾಸ್ ಸೀನು, ಸಾರ್!' ಎಂಬ ಮಾತಿನ ಪರಿಚಯವಿರಬಹುದು. ಕಿರುತೆರೆಯ ಉದ್ಯಮದಲ್ಲೂ ಅದೇ ಮಾತು ಕೊಂಚ ಬದಲಾಗಿ ಬರುತ್ತಿದೆ ಅಷ್ಟೇ. ಆದ್ದರಿಂದಲೇ ಅಣ್ಣಾವ್ರ ಧ್ವನಿಯಲ್ಲಿ ಮೂಡಿಬಂದ ಜನಪ್ರಿಯ ಗೀತೆ, ಇಲ್ಲಿ ಅಪಭ್ರಂಶವಾಗಿದೆ. ಹೀಗಾಗಿಯೇ ಇಲ್ಲಿ ಗೆದ್ದವನು ಆತ್ಮರತಿಯಲ್ಲೂ, ಸೋತವನು ಪರನಿಂದೆಯಲ್ಲೂ ಉಳಿದುಹೋಗುತ್ತಾನೆ.

ಇವೆಲ್ಲವುಗಳ ಪರಿಣಾಮ ನಮ್ಮಲ್ಲಿ ತಯಾರಾಗುವ ಕಾರ್ಯಕ್ರಮಗಳ ಮೇಲೆ ನೇರವಾಗಿ ಆಗುತ್ತಿದೆ. ನಮ್ಮ ಕಥನ ಕ್ರಮದಲ್ಲಿ ಅನಗತ್ಯವಾದರೂ, ಜನಪ್ರಿಯತೆಗೆ ಅನಿವಾರ್ಯ ಎಂಬಂತಹ ನಿರೂಪಣಾ ಕ್ರಮಗಳು ಬಳಕೆಗೆ ಬರುತ್ತಿವೆ. ಅತಿರಂಜಕತೆಯ ಹೆಸರಲ್ಲಿ ಪಾತ್ರಗಳಿಗೆ ಅಗತ್ಯಕ್ಕಿಂತ ಹೆಚ್ಚು ಬಣ್ಣ ಬಳಿದು, 'ಎಲ್ಲಾ ಹೆಣ್ಣು ಪಾತ್ರಗಳೂ ಹುಟ್ಟಿದ್ದೇ ಬ್ಯೂಟಿ ಪಾರ್ಲರಿನಲ್ಲಿಯೇ?' ಎನ್ನುವಷ್ಟು ಅಸಹಜತೆ ಮೂಡಿಬರುತ್ತಿದೆ. ಹೊಸ ಪ್ರಯೋಗ ಎನ್ನುವುದು ಕಿರುತೆರೆಯ ಮಟ್ಟಿಗಂತೂ ಅಪರೂಪವೇ ಆಗಿಬಿಟ್ಟಿದೆ. ಇನ್ನು ನಮ್ಮ ಚಾನೆಲ್ಲುಗಳಲ್ಲಿ ನಿರ್ಧಾರ ತೆಗೆದುಕೊಳ್ಳುವ ಜನ ಕೂಡ ಸಿದ್ಧ ಸೂತ್ರಕ್ಕೆ ಮಾರುಹೋಗುತ್ತಿದ್ದಾರೆ. ಇನ್ನಾವುದೋ ಭಾಷೆಯಲ್ಲಿ ಜನಪ್ರಿಯವಾದುದನ್ನು ಇಲ್ಲಿಗೂ ಉಣಬಡಿಸಿ, ದುಡ್ಡು ಜೋಪಾನ ಮಾಡೋಣ ಎಂಬ ಗುಣ ಕಾಣಿಸಿಕೊಳ್ಳುತ್ತಿದೆ. ಇದು ಅತ್ಯಂತ ಅಪಾಯಕಾರಿ ಬೆಳವಣಿಗೆ. ನಮ್ಮಲ್ಲಿರುವ ಸೃಜನಶೀಲ ಶಕ್ತಿಯನ್ನು ಸಂಪೂರ್ಣ ನಾಶಪಡಿಸುವಂತಹದು. ಸಿನಿಮಾದವರು ರೀಮೇಕಿನ ಅಭ್ಯಾಸಕ್ಕೆ ಇಳಿದ ನಂತರ ನಮ್ಮಲ್ಲಿ ಕಥೆಗಾರರಿಲ್ಲ ಎಂದು ಗೋಳಾಡುತ್ತಿರುವಂತೆಯೇ ಕಿರುತೆರೆಯಲ್ಲಿಯೂ ಯಶಸ್ಸು ಪಡೆಯುವಂತಹ ಕತೆಗಳಿಲ್ಲ ಎಂದು ಇತರ ಭಾಷೆಗಳಲ್ಲಿ ಜನಪ್ರಿಯವಾದುದನ್ನೇ ಇಲ್ಲಿಗೂ ಉಣಬಡಿಸುವ ಜಾಯಮಾನ ಬರುವ ದಿನಗಳು ದೂರವಿಲ್ಲ ಎಂದು ಈ ಬರಹಗಾರನಿಗಂತೂ ಅನಿಸುತ್ತಿದೆ.

**ಅದಾವ ಮಾಯಾಕಿನ್ನರಿ ಇವಳು?**

ಇಷ್ಟೆಲ್ಲಾ ಅವಘಡಗಳನ್ನು ಸೃಷ್ಟಿಸುತ್ತಿರುವ ಈ ಸ್ಯಾಂಪಲ್ ರೇಟಿಂಗ್ ಅಥವಾ ಟಿ.ಆರ್.ಪಿ. ಅಂದರೇನು ಎಂಬುದನ್ನು ಕುರಿತು ಕುತೂಹಲ ಮೂಡುವುದು ಸಹಜ. ಸ್ಥೂಲವಾಗಿ ಅದನ್ನು ವಿವರಿಸುವ ಪ್ರಯತ್ನ ಮಾಡುತ್ತೇನೆ. ಕರುನಾಡಿನಂತಹ ರಾಜ್ಯದಲ್ಲಿರುವ ಸರಿ ಸುಮಾರು ಆರು ಕೋಟಿ ಜನಸಂಖ್ಯೆಯಲ್ಲಿ ಟಿ.ವಿ. ನೋಡುವವರ ಸಂಖ್ಯೆ ಎಷ್ಟು ಎಂದು ಯಾವುದೋ ತಾತರಾಯನ ಕಾಲದ ಜನಗಣತಿಯನ್ನಾಧರಿಸಿ ನಿರ್ಧರಿಸಲಾಗುತ್ತದೆ. (ಸದ್ಯಕ್ಕೆ ಬಳಕೆಯಲ್ಲಿರುವುದು ೨೦೦೧ರ ಜನಗಣತಿ; ಎಂದರೆ ಆದಾಗಿ ಐದು ವರ್ಷಗಳಲ್ಲಿ ಏನೆಲ್ಲಾ ಬದಲಾವಣೆ ಆಗಿರಬಹುದು ಎಂದು ತಾವು ಊಹಿಸಬಹುದು.) ನಂತರ ಪ್ರತಿ ಊರಲ್ಲೂ ಸ್ಯಾಂಪಲ್ ರೇಟಿಂಗ್

ಪಡೆಯಲು ಖಾಸಗಿ ಸಂಸ್ಥೆಯೊಂದು ಟಿ.ವಿ. ಸೆಟ್ಟುಗಳಿಗೆ ಒಂದು ಮೀಟರನ್ನು ಲಗತ್ತಿಸುತ್ತದೆ. (ಒಂದು ಲಕ್ಷ ಜನಸಂಖ್ಯೆಯಿರುವ ಊರಿಗೆ ಹತ್ತು ಮೀಟರ್ ಎಂಬ ಅಂದಾಜು ಇಲ್ಲಿ ಕೆಲಸ ಮಾಡುತ್ತಿದೆ ಎಂದು ಹೇಳುತ್ತಾರೆ. ಸ್ಪಷ್ಟ ವಿವರಗಳಿಲ್ಲ) ಆ ಮೀಟರುಗಳು ಆ ಮನೆಯವರು ನೋಡಿದ ಎಲ್ಲಾ ಕಾರ್ಯಕ್ರಮಗಳ ವಿವರಗಳನ್ನೂ ದಾಖಲಿಸುತ್ತವೆ. ಹಾಗೆ ದಾಖಲಿಸುವಾಗ ಆ ಮನೆಯಲ್ಲಿ ನೋಡಿದವರ ವಯೋಮಾನವೇನು, ಅವರಲ್ಲಿ ಕೊಳ್ಳುವ ಶಕ್ತಿ ಇರುವವರು ಯಾರು, ಎಂಬ ವಿವರಗಳು ಸಹ ದಾಖಲಾಗುತ್ತವೆ. ಹೀಗೆ ಸಂಗ್ರಹಿತವಾದ ಅಂಕಿ-ಅಂಶಗಳೇ ಜನಪ್ರಿಯತೆಯ ಮಾನದಂಡ ವಾಗಿರುವುದು. ಅಂದರೆ ೨೦೦೧ರ ಜನಗಣತಿಯ ಪ್ರಕಾರ ಕರುನಾಡಿನಲ್ಲಿ ಟಿ.ವಿ. ನೋಡುವವರ ಸಂಖ್ಯೆ ೬೫ ಲಕ್ಷ ಜನ ಎಂದಿದ್ದರೆ ೬೫೦ ಮೀಟರ್‌ಗಳ ಸ್ಯಾಂಪಲ್ ರೇಟಿಂಗ್ ಎಂದಾಯಿತು. ಇಷ್ಟು ಜನ ಟಿ.ವಿ. ನೋಡುವವರು ಇಂದು ನಮ್ಮ ರಾಜಧಾನಿಯಲ್ಲಿಯೇ ಇದ್ದಾರೆ ಎಂದು ಸರಳವಾಗಿಯೇ ಊಹಿಸಬಹುದು. ಈ ಬೆಂಗಳೂರು ಎಂಬ ಮಹಾನಗರಿಯಲ್ಲಿ ಟಿವಿ ಇಲ್ಲದ ಮನೆಯುಂಟೇ, ನೀವೇ ಹೇಳಿ! ಹೀಗಿರುವಾಗ ಆ ಖಾಸಗಿ ಸಂಸ್ಥೆಯವರು ಅಂಕಿ-ಅಂಶ ಸಂಗ್ರಹಿಸಲು ಯಾವುದೋ ಪರಭಾಷಿಗನ ಮನೆಯಲ್ಲಿ ಮೀಟರ್ ಇಟ್ಟಿದ್ದರೆ ?... ಅಲ್ಲಿಗೆ ಕನ್ನಡ ಕಾರ್ಯಕ್ರಮ ತಯಾರಿಸುತ್ತಿರುವವನ ಕಥೆ ಗೋವಿಂದ! ಅದೆಂಥಾ ಅಪ್ಪನಂತಹ ಕಾರ್ಯಕ್ರಮವಾದರೂ ಗರ್ಭಪಾತವೇ ಕಾಯ್ದಿಟ್ಟ ಬುತ್ತಿ.

ಇದು ಹೀಗೇಕೆ ಎಂಬ ಪ್ರಶ್ನೆ ಏಳುತ್ತದೆ. ಈ ಸ್ಯಾಂಪಲ್ ರೇಟಿಂಗ್ ಎನ್ನುವುದು ಜನಪ್ರಿಯತೆಯ ಮಾನದಂಡವಾಗಿದ್ದೇ ಶುದ್ಧಾಂಗ ತಪ್ಪು. ಅದು ಮೂಲತಃ ಜಾಹೀರಾತು ನೀಡುವವನಿಗೆ ಯಾವ ವರ್ಗದ ಜನ ಯಾವ ಕಾರ್ಯಕ್ರಮ ನೋಡುತ್ತಿದ್ದಾರೆ ಎಂದು ತಿಳಿಸುವ ಅಂಕಿ-ಅಂಶ ಮಾತ್ರ. ಅದನ್ನು ಆಧರಿಸಿ ಆತ ಜಾಹೀರಾತು ನೀಡುತ್ತಾನೆ. ಆದರೆ ನಮ್ಮ ಚಾನೆಲ್ಲುಗಳ ಮುಖ್ಯಸ್ಥರಿಗೆ ಅದೇ ಅಂಕಿ-ಅಂಶವೇ ಅವರೆಲ್ಲಾ ನಿರ್ಧಾರಗಳಿಗೂ ವೇದೋಕ್ತಿ ಯಾಗಿಬಿಟ್ಟಿದೆ. ಅವರಿಗೀಗ ಜಾಹೀರಾತಿನಿಂದ ಬರುವ ಆದಾಯವಷ್ಟೇ ಮುಖ್ಯ. ಉಳಿದೆಲ್ಲಾ ವಿವರಗಳೂ ಗೌಣ. ಹೀಗಾಗಿಯೇ ನಮ್ಮ ನಾಡಿನ ಸಂಸ್ಕೃತಿಯನ್ನು ಬಿಂಬಿಸುವ ಧಾರಾವಾಹಿಗಳಿಗಿಂತ ಜಾಹೀರಾತುದಾರರನ್ನು ಮೆಚ್ಚಿಸುವ ಧಾರಾವಾಹಿಗಳ ತಯಾರಿಕೆಯೇ ಹೆಚ್ಚಾಗುತ್ತಿದೆ. ಅಂತೆಯೇ ಒಂದು ಧಾರಾವಾಹಿ ಜನಪ್ರಿಯವಾಯಿತು ಎಂದರೆ, ಆ ಧಾರಾವಾಹಿಯ ಕಥಾಶಕ್ತಿಯನ್ನು ಮೀರಿ, ಜಾಹೀರಾತು ಬರುತ್ತಿರುವವರೆಗೆ ಧಾರಾವಾಹಿ ಬರುತ್ತಿರಲಿ ಎಂಬಂತಹ ವಾದ ಹುಟ್ಟಿಕೊಂಡಿದೆ. ಇದರಿಂದ ಅದಾಗಲೇ ಪುರಾಣ ಕಥೆಗಳನ್ನು ರಾತ್ರಿಯಿಡೀ, ವಾರವಿಡೀ ಹೇಳಿ ಅಭ್ಯಾಸ ಇರುವವರಿಗೆ ಉಪಕಥೆಗಳನ್ನು ಹಿಡಿದುಕೊಂಡೆ ಸೀಮೋಲ್ಲಂಘನ ಸಾಧ್ಯವಾಗಿದೆಯಾದರೂ, ಇನ್ನು ಕೆಲವು ಕಥೆಗಳು ಬಿಕ್ಕುತ್ತ, ತೆವಳುತ್ತಾ ಸಾಗುವುದನ್ನು ನಾವು ನೋಡುತ್ತಿದ್ದೇವೆ. ಜಾಹೀರಾತು ಉದ್ಯಮದಿಂದ ನಿರ್ದೇಶಿತವಾದ ಕಥನಕ್ರಮದ ಫಲ ಇದು ಎನ್ನಬಹುದು. ಒಂದರ್ಥಕ್ಕೆ ಇದು ಜಾಗತೀಕರಣ ತಂದಿಟ್ಟ ಅವಘಡಗಳಲ್ಲಿ ಒಂದು ಎಂತಲೂ ಹೇಳಬಹುದು. ಜನರನ್ನು ನಾಡು-ಭಾಷೆ ಕುರಿತು ಎಚ್ಚರದಲ್ಲಿ ಇಡುವುದಕ್ಕಿಂತ ಕೊಳ್ಳುವುದಕ್ಕೆ ಪ್ರೇರೇಪಿಸುತ್ತಾ, ಒಂದು ರೀತಿಯ ಅಸಹನೆಯನ್ನು, ಕಾತುರವನ್ನು ಸಾಮಾನ್ಯ ಜನರಲ್ಲಿ ಸದಾ ಇರಿಸುವ ಗುಣವನ್ನು ಇದು ನಮ್ಮ ಉದ್ಯಮದ ಕಥನಕ್ರಮದ ಮೇಲೂ ಆರೋಪಿಸಿಬಿಟ್ಟಿದೆ. ಇದರಿಂದ ಮುಂದೆ ಒದಗಲಿರುವ ಅಪಾಯಗಳು ಅನೇಕ.



ಕವನ

ನನ್ನ
ಕವನಗಳು
ಸರಾಗವಾಗಿ ಹಾಡುತ್ತವೆ
ಸದ್ದಿಲ್ಲದ ಸಂಗೀತದಂತೆ
ಪತ್ರಿಕೆಗಳ
ಕಾಲಂಗಳಲ್ಲಿ.

ಕಮಲಂಬರಸು

**ಅಪಾಯಗಳು**

ಈ ಸ್ಥಿತಿಯಿಂದಾಗಿ ನಮ್ಮಲ್ಲಿ ಧಾರಾವಾಹಿ ತಯಾರಿಕೆ ಎಂಬುದು ಸಣ್ಣ ನಿರ್ಮಾಪಕರುಗಳ ಹಿಡಿತದಿಂದ ತಪ್ಪಿಸಿಕೊಂಡು ಸಂಪೂರ್ಣ ಕಾರ್ಪೊರೇಟ್ ಕಂಪನಿಗಳ ಪಾಲಾಗಬಹುದು. ಅಲ್ಲಿ ಎಲ್ಲಾ ಎಂ.ಎನ್.ಸಿ.ಗಳು ನಡೆಸುವ ಕಂಪನಿ ಗಳಲ್ಲಿ ಈಗ ನಾವು ನೋಡುತ್ತಿರುವಂತೆ ಹೃದಯ ಹೀನ ಕೃತ್ರಿಮತೆ ಬರಬಹುದು. ಆಗ ಅಲ್ಲಿ ತಯಾರಾಗುವ ಕಾರ್ಯಕ್ರಮಗಳು ಎಲ್ಲೋ ಕೂತ, ಕಣ್ಣಿಗೆ ಕಾಣದ ಯಜಮಾನನ ಆಣತಿಯಂತೆ ಆಗಬಹುದು. ಆಗ ಎಲ್ಲಾ ತಯಾರಕರೂ ತಿಂಗಳ ಸಂಬಳದ ಬೊಂಬೆಗಳಷ್ಟೇ ಆಗಿಬಿಡಬಹುದು. (ಈ ಬದಲಾವಣೆ ಅದಾಗಲೇ ನಮ್ಮಲ್ಲಿರುವ ಅನೇಕ ಧಾರಾವಾಹಿ ತಯಾರಿಕಾ ಘಟಕಗಳಲ್ಲಿ ಬಂದಿರುವುದನ್ನು ಸಹ ನಾವು ಕಂಡಿದ್ದೇವೆ.)

ಇನ್ನು ಕಥೆ ಬರೆಯುವ ಕೆಲಸವಂತೂ ಒಬ್ಬ ಬರಹಗಾರನ ಕೈತಪ್ಪಿ, ಹತ್ತಾರು ಜನರ ಗುಂಪು ನಿರಂತರವಾಗಿ ಬರೆದ ಕೊಂಡಿಗಳೇ ಇಲ್ಲದ ಕ್ರಿಯೆ ಆಗಿಬಿಡಬಹುದು. ಹಾಗಾದಾಗಲೂ ನಮ್ಮ ಕಾರ್ಯಕ್ರಮಗಳಲ್ಲಿ ಹೃದ್ಯವಾದದ್ದು ನಾಪತ್ತೆಯಾಗುತ್ತದೆ. ಅಲ್ಲಿ ಕಥೆಗಿಂತ ತಿರುವುಗಳು ಮತ್ತು ಅತಿರಂಜಕತೆ ಪ್ರಧಾನವಾಗಿಬಿಡುತ್ತದೆ. (ಈ ಪರಿಸ್ಥಿತಿಯೂ ಸಹ ನಮ್ಮ ಅನೇಕ ಕಾರ್ಯಕ್ರಮ ಗಳಲ್ಲಿ ಅದಾಗಲೇ ನುಸುಳಿದೆ.) ಇದರಿಂದಾಗಿ ಒಂದೊಮ್ಮೆ ಏಕಾಂತದಲ್ಲಿ ಒಬ್ಬ ಕನಸಿದ್ದನ್ನು ಓದಿ, 'ಆಹಾ ಭಾಷೆ! ಆಹಾ ಕಥನ ಕೌಶಲ!' ಎಂದು ಸಂತಸಪಡುತ್ತಿದ್ದ ದಿನಗಳು ಸಂಪೂರ್ಣ ನಾಪತ್ತೆಯಾಗಬಹುದು.

ಇಲ್ಲಿಂದಾಚೆಗೆ ನಮ್ಮ ನಟವರ್ಗವಂತೂ ಮಾನಸಿಕ ಬೆಳವಣಿಗೆಯನ್ನು ಸಂಪೂರ್ಣವಾಗಿ ಕಳೆದುಕೊಂಡು ದಿನಕ್ಕೆ ಹನ್ನೆರಡು ಗಂಟೆ ದುಡಿಯುವ ಯಂತ್ರಗಳಾಗಬಹುದು. ಹಾಗಾದಾಗ ಭಾಷೆಯನ್ನು ಕುರಿತ ಕಾಳಜಿಯಾಗಲಿ, ಒಂದು ಪಾತ್ರವನ್ನು ಅನುಭವಿಸಿ ಅಭಿನಯಿಸುವ ಸೊಗಸಾಗಲಿ ಉಳಿಯು ವುದಿಲ್ಲ. ಅಂತಿಮವಾಗಿ ಆ ದಿನ ದುಡಿದದ್ದಕ್ಕೆ ನನಗೆ ಸಿಕ್ಕಿದ್ದೆಷ್ಟು, ನಾನು ಮನೆಗೆ ಯಾವ ಹೊಸ ಸಾಮಗ್ರಿ ಕೊಂಡೊಯ್ಯುತ್ತೇನೆ, ಎಂಬುದಷ್ಟೇ ಮುಖ್ಯವಾಗಿ ಬಿಡುತ್ತದೆ. ಅಲ್ಲಿಗೆ ನಮ್ಮಲ್ಲಿರುವ ಕಲಾವಿದ ನಿಧಾನವಾಗಿ ಕೊನೆಯುಸಿರೆಳೆ ಯುತ್ತಾನೆ. ಅಂತಿಮವಾಗಿ ಫಾರ್ಮುಲಾ ಪ್ರೇರಿತ ಭಾವ-ಭಂಗಿಗಳು, ಮತ್ತು ಅತಿ ನೀರಸವೆನಿಸುವ ಭಾಷಾಬಳಕೆ ಮಾತ್ರ ಉಳಿದುಕೊಳ್ಳುತ್ತದೆ. ಅಲ್ಲಿಗೆ... 'ಉದಯವಾಯಿತು ನಮ್ಮSSS' ಎಂದು ಕಾಳಿಂಗರಾಯರಂತೆ ದನಿ ಎತ್ತಿ ಹಾಡುವುದಷ್ಟೇ ಉಳಿಯುತ್ತದೆ.




ಬಿ. ಸುರೇಶ

ಮೀಡಿಯಾ ಹೌಸ್ ಮಾರ್ಕೆಟಿಂಗ್, ನಂ. ೧೧೬೨, ೨೫ನೇ ಮೇನ್, ೨೨ನೇ ಕ್ರಾಸ್, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦೦೭೦

# ಅಮೆರಿಕಾದ ಏಕಕೇಂದ್ರೀಯ ವ್ಯವಸ್ಥೆಗೆ ರಷ್ಯಾದ ಸವಾಲು




ಎಪ್ಪತ್ತು ವರ್ಷಗಳು ಏಕಾಂಗಿಯಾಗಿ ಅಮೆರಿಕಾದ ಸಾಮ್ರಾಜ್ಯದಾಹವನ್ನು ಎದುರಿಸಿ, ಸ್ವತಂತ್ರವಾಗಿ ವ್ಯವಹರಿಸಿದ, ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ ದೇಶ ರಷ್ಯಾ. ಒತ್ತಡಗಳಿಗೆ ತಲೆಬಾಗುವುದಕ್ಕೂ ಒಂದು ಮಿತಿ ಇರುತ್ತದೆ. ಅದನ್ನು ಮೀರಿದಾಗ ಪ್ರತಿಭಟನೆ ಆಸ್ಫೋಟಗೊಳ್ಳುತ್ತದೆ. ರಷ್ಯಾದಲ್ಲಿ ಆಡಳಿತವನ್ನು ದೃಢಗೊಳಿಸಿದ ಪುಟಿನ್ ವಾಷಿಂಗ್ಟನ್ನಿನ ಒತ್ತಡದ ನೀತಿಗಳಿಗೆ ತಮ್ಮದೇ ಆದ ರೀತಿಯಲ್ಲಿ ಪ್ರತಿಭಟನೆ ತೋರುತ್ತ ಬಂದಿದ್ದಾರೆ. ಇತರ ದೇಶಗಳ ವ್ಯವಹಾರದಲ್ಲಿ ಕೈಹಾಕಿ, ಅಮೆರಿಕಾ ಮಾದರಿಯ ಪ್ರಜಾಪ್ರಭುತ್ವವನ್ನು ಹೊರಿಸುವ ಅಧ್ಯಕ್ಷ ಬುಷ್‌ರ ನೀತಿಯನ್ನು ಕಳೆದ ವರ್ಷ ಜರುಗಿದ ಶ್ರೀಮಂತರಾಷ್ಟ್ರಗಳ ಎಂಟರ ಗುಂಪಿನ ಶೃಂಗಸಭೆಯಲ್ಲಿ ಪುಟಿನ್ ಅವರು ಕಟುವಾಗಿ ಟೀಕಿಸಿದ್ದರು – ಬುಷ್ ಎದುರಿನಲ್ಲೇ.

ಸೀಯಾರ್ಕೆ

'ಸಮಾಜವಾದಿ' ದೇಶಗಳ ಸಮುದಾಯದ ನಾಯಕ ಎನಿಸಿಕೊಂಡಿದ್ದ ಸೋವಿಯತ್ ಒಕ್ಕೂಟ ಹದಿನೈದು ವರ್ಷಗಳ ಹಿಂದೆ ವಿಭಜನೆಗೊಂಡಿತು. ನಾಲ್ಕೂವರೆ ದಶಕಗಳ ಕಾಲದ 'ಶೀತಯುದ್ಧ' ಮುಗಿಯಿತು. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಈ ಘಟನೆಯು ಹಲವು ಬಗೆಯ ಪರಿಣಾಮಗಳನ್ನು ಉಂಟುಮಾಡಿತು. ಮುಖ್ಯವಾಗಿ ಅಮೆರಿಕಾ ಮೇಲುಗೈ ಸಾಧಿಸಿ, ಏಕಕೇಂದ್ರೀಯ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು. ಇನ್ನು ಪ್ರಪಂಚದಲ್ಲಿ ಸಮಾಜವಾದದ ಸೊಲ್ಲು ಅಡಗಿತು, ಬಂಡವಾಳವಾದದ ವಿಜಯ, ಸಮಾಜವಾದದ ಸೋಲು, ಮನುಕುಲದ ಪ್ರಗತಿಗೆ ಬಂಡವಾಳಶಾಹಿ ವ್ಯವಸ್ಥೆಯೊಂದೇ ಇರುವ ಆಯ್ಕೆ ಎಂದೆಲ್ಲ ವ್ಯಾಖ್ಯಾನಗಳ ಸುರಿಮಳೆಯಾಯಿತು. ಆದರೆ ಅಂಥದ್ದೇನೂ ಆಗಲಿಲ್ಲ. ಸಮಾಜವಾದಿ ವಿಚಾರಗಳು ಸಾಯಲಿಲ್ಲ. ಬದಲಾಗಿ ಬದಲಿ ವ್ಯವಸ್ಥೆಯ ಸಾಧ್ಯತೆಗಳು ಇಂದು ಹೆಚ್ಚಾಗಿವೆ. ಇದೊಂದು ಕಡೆಯಾದರೆ ಹಳೆಯ ಒಕ್ಕೂಟದ ರಾಜ್ಯಗಳನ್ನು ಕಳೆದುಕೊಂಡ ರಷ್ಯಾ ರಾಶಿ ರಾಶಿ ನ್ಯೂಕ್ಲಿಯರ್ ಅಸ್ತ್ರಗಳನ್ನು, ಭಾರೀ ಸೇನಾಬಲವನ್ನು ಹೊಂದಿದ್ದರೂ ಆಡಳಿತ ವ್ಯವಸ್ಥೆ ಕುಸಿದುಬಿದ್ದು ದುರ್ಬಲರಾಷ್ಟ್ರವೆನಿಸಿತು. ಆರ್ಥಿಕ ಹಾಗೂ ರಾಜಕೀಯ ಪರಿಸ್ಥಿತಿ ಸಂಪೂರ್ಣವಾಗಿ ಶಿಥಿಲಗೊಂಡಿತು. ಅಮೆರಿಕಾವು ಒಡ್ಡಿದ ಆಮಿಷಗಳಿಗೆ ಬಲಿಯಾದ ನಾಯಕತ್ವದ ನೀತಿಯಿಂದಾಗಿ ಒಂದು ಕಾಲದಲ್ಲಿ ಅಮೆರಿಕನ್ ಸಾಮ್ರಾಜ್ಯಶಾಹಿಗೆ ಸಿಂಹಸ್ವಪ್ನದಂತಿದ್ದ ರಷ್ಯಾ ತನ್ನ ಸ್ವತಂತ್ರ ಅಸ್ತಿತ್ವವನ್ನೇ ಕಳೆದುಕೊಂಡು ಅಧೀನ ರಾಷ್ಟ್ರದಂತೆ ನಡೆದುಕೊಳ್ಳತೊಡಗಿತು. ರಷ್ಯಾ ಇನ್ನು ಚೇತರಿಸಿಕೊಂಡು, ತನ್ನ ಸ್ವಾತಂತ್ರ್ಯ, ಸಾರ್ವಭೌಮತ್ವವನ್ನು ಎತ್ತಿಹಿಡಿಯಲು ನೂರಾರು ವರ್ಷಗಳೇ ಹಿಡಿದೀತೆಂಬ ಭಾವನೆ ಮೂಡಿತು.

ಸೋವಿಯತ್ ವ್ಯವಸ್ಥೆಯನ್ನು ನಾಶಗೊಳಿಸಿದ ಗೊರ್ಬಚೆವ್ ಮತ್ತು ಅನಂತರ ಅಧಿಕಾರ ವಹಿಸಿಕೊಂಡ ಬೋರಿಸ್ ಎಲ್‌ತ್ಸಿನ್ ಇವರು ಅಮೆರಿಕಾದ ಏಜೆಂಟರಾಗಿ ವರ್ತಿಸಿದ್ದರಿಂದ ಅವರಿಗೂ ಲಾಭವಾಗಲಿಲ್ಲ, ದೇಶಕ್ಕೂ ಏನೂ ಲಾಭವಾಗಲಿಲ್ಲ. ರಷ್ಯಾಗೆ ಅಮೆರಿಕಾದಿಂದ ನೆರವಿನ ಹೊಳೆ ಹರಿಯಲಿಲ್ಲ, ಬದಲಾಗಿ ಅದರ ಲಾಭದಾಯಕ ಉದ್ಯಮಗಳು ಅಮೆರಿಕಾದ ಬಂಡವಾಳಗಾರರ, ಬಹುರಾಷ್ಟ್ರೀಯ ಕಂಪನಿಗಳ ವಶವಾದವು. ರಷ್ಯಾವನ್ನು ತಲೆಎತ್ತದಂತೆ ಮಾಡಲು ಏನೇನು ಕ್ರಮಗಳನ್ನು ಕೈಗೊಳ್ಳಬೇಕೋ ಅದೆಲ್ಲವನ್ನೂ ಅಮೆರಿಕಾ ಮಾಡತೊಡಗಿತು. ಭಯೋತ್ಪಾದನೆಯ ವಿರುದ್ಧ ಸಮರದ ನೆಪದಲ್ಲಿ ರಷ್ಯಾದ ನೆರೆರಾಜ್ಯಗಳಲ್ಲಿ ಸೇನೆಯನ್ನು ತಂದಿರಿಸಿದ ಅಮೆರಿಕಾ, ಆ ರಾಜ್ಯಗಳಲ್ಲಿ ಆರೆಂಜ್, ಪಿಂಕ್ ಕ್ರಾಂತಿಗಳನ್ನು ಪ್ರಚೋದಿಸಿ, ತನಗೆ ಅನುಕೂಲವಾಗಿರುವ ಕೈಗೊಂಬೆ ಸರಕಾರಗಳ ಸ್ಥಾಪನೆಗೆ ಪ್ರೋತ್ಸಾಹ ನೀಡಿತು. 'ನ್ಯಾಟೋ' ಕೂಟದ ವಿಸರ್ಜನೆಯ ಆಶ್ವಾಸನೆ ನೀಡಿದ್ದ ಅಮೆರಿಕಾ ಅದನ್ನು ಇನ್ನಷ್ಟು ಬಲಪಡಿಸಲು ಪೂರ್ವ ಯೂರೋಪಿನ ರಾಷ್ಟ್ರಗಳಿಗೆ ವಿಸ್ತರಿಸಿತು. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಎದುರಾಳಿಯೇ ಇಲ್ಲದ ಸ್ಥಿತಿಯಲ್ಲಿ ಅಮೆರಿಕಾ ತನ್ನ ಮಿಲಿಟರಿ ಶಕ್ತಿ ಮತ್ತು ಹಣದ ಬಲದಿಂದ ಪ್ರಪಂಚದ ಮೇಲೆ ತನ್ನ ಅಧಿನಾಯಕತ್ವ ಸ್ಥಾಪಿಸಲು ಹೊರಟಿತು. ಶೀತಯುದ್ಧದ ಕಾಲದಲ್ಲಿದ್ದುದಕ್ಕಿಂತ ಹೆಚ್ಚು ದುರಾಕ್ರಮಣಕಾರಿ ಚರ್ಯೆಗಳಲ್ಲಿ ಅಮೆರಿಕಾ ನಿರತವಾಯಿತು. ಇವೆಲ್ಲ ಅಟಾಟೋಪಗಳಿಗೂ ರಷ್ಯಾದ ಪ್ರತಿಕ್ರಿಯೆ ಮೌನ ಸಮ್ಮತಿಯಾಗಿತ್ತು.

ಕಳೆದ ಕೆಲವರ್ಷಗಳಿಂದ ರಷ್ಯಾ ನಿಧಾನವಾಗಿ ಚೇತರಿಸಿಕೊಳ್ಳತೊಡಗಿದೆ. ಯೆಲ್‌ತ್ಸಿನ್‌ನ ನಂತರ ಅಧಿಕಾರಕ್ಕೆ ಬಂದ ವ್ಲಡೀಮಿರ್ ಪುಟಿನ್ ನೇತೃತ್ವದಲ್ಲಿ ಸಂಪೂರ್ಣವಾಗಿ ಮುರಿದುಬಿದ್ದಿದ್ದ ಆಡಳಿತ ವ್ಯವಸ್ಥೆ ಚೇತನಗೊಳ್ಳುತ್ತಿದೆ. ಆರ್ಥಿಕ ಕ್ಷೇತ್ರದಲ್ಲಿ ನೈಸರ್ಗಿಕ ಸಂಪನ್ಮೂಲಗಳ ಮೇಲೆ, ಮುಖ್ಯವಾಗಿ ತೈಲ ಹಾಗೂ ಇಂಧನಾನಿಲ ನಿಕ್ಷೇಪದ ಮೇಲೆ, ನಿಯಂತ್ರಣ ಸಾಧಿಸುವುದರಲ್ಲಿ ಪುಟಿನ್ ಸಫಲಗೊಂಡಿದ್ದು ದೊಡ್ಡ ಸಾಧನೆ. ಅಮೆರಿಕಾದ ಬಹುರಾಷ್ಟ್ರೀಯ ಕಂಪನಿಗಳ ಪಾಲಾಗಲಿದ್ದ ಈ ಉದ್ಯಮವನ್ನು ಉಳಿಸಿಕೊಂಡಿದ್ದು ಅಮೆರಿಕಾದ ಆಡಳಿತಗಾರರ ಕಣ್ಣು ಕೆಂಪಗಾಗಿಸಿತು. ಬುಷ್ ಆಡಳಿತೆಯಲ್ಲಿನ ಪ್ರಮುಖ ಭಂಟ ಡಿಕ್ ಚೆನಿ ಎರಡು ಮೂರು ವರ್ಷಗಳ ಹಿಂದೆಯೇ ಇದನ್ನು ಗಮನಿಸಿದ್ದು ರಷ್ಯಾದ ಆಡಳಿತಕ್ಕೆ ಎಚ್ಚರಿಕೆ ನೀಡಿದ್ದ. ರಷ್ಯಾ ಪ್ರಜಾಪ್ರಭುತ್ವ ಸುಧಾರಣೆಗಳಿಂದ ದೂರ ಸರಿಯುತ್ತಿದೆ ಎಂದು ಆಪಾದಿಸಿದ್ದ. ಆಗ ರಕ್ಷಣಾ ಕಾರ್ಯದರ್ಶಿಯಾಗಿದ್ದ ರಮ್ಸ್‌ಫೆಲ್ಡ್ ಬಹಿರಂಗವಾಗಿಯೇ ರಷ್ಯಾದ ನೀತಿಗಳನ್ನು ಖಂಡಿಸಿದ್ದ. ಅಮೆರಿಕಾದ ಇರಾಕ್ ನೀತಿಯ ಕುರಿತು ರಷ್ಯಾದ ಮೃದುಟೀಕೆಗೂ ಬುಷ್ ಆಡಳಿತ ಅಸಹನೆ ವ್ಯಕ್ತಗೊಳಿಸಿತು. ಬುಷ್ ನಿರೀಕ್ಷಿಸಿದ್ದುದು ಪೂರ್ಣ ಬೆಂಬಲ. ತನ್ನ ಹಿತಾಸಕ್ತಿಗಳಿಗೆ, ಅಧಿನಾಯಕತ್ವ ಸ್ಥಾಪಿಸುವ ಗುರಿಗೆ ಅಡ್ಡಿಯೆನಿಸುವ ದೇಶಗಳನ್ನು ಅದರ ನಾಯಕರನ್ನು ಸಂಶಯದಿಂದ ನೋಡುವುದು, ಶತ್ರುವೆಂದು ಪರಿಗಣಿಸುವುದು, ಅಮೆರಿಕಾದ ವಿದೇಶಾಂಗ ನೀತಿಯ ಅಡಿಗಲ್ಲು. ಹಿಂದೆ ಅಲಿಪ್ತ ನೀತಿಯನ್ನು ಅನುಸರಿಸುತ್ತಿದ್ದ ರಾಷ್ಟ್ರಗಳನ್ನು, ಅಲಿಪ್ತ ಚಳವಳಿಯನ್ನು, ಅಮೆರಿಕಾ ಅಸಹನೆಯಿಂದ ನೋಡುತ್ತಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಇದರ ಮೇಲೆ ಬೆಳೆಯುತ್ತಿರುವ ರಷ್ಯಾ-ಚೀಣಾ ಮೈತ್ರಿ, ಷಾಂಘಾಯ್‌ನಲ್ಲಿ ಜರುಗಿದ ರಷ್ಯಾ-ಚೀಣಾ-ಭಾರತ ನಾಯಕರ ಸಭೆ, ಅಮೆರಿಕಾದ ನಾಯಕರಲ್ಲಿ ಕಸಿವಿಸಿ ಉಂಟುಮಾಡಿತು. ಅದಕ್ಕಾಗಿಯೇ ಅದು ರಷ್ಯಾದ ಮೇಲೆ ನಾನಾ ರೀತಿಯ ಒತ್ತಡಗಳನ್ನು ತರಲು ತೊಡಗಿತು.

ಎಪ್ಪತ್ತು ವರ್ಷಗಳು ಏಕಾಂಗಿಯಾಗಿ ಅಮೆರಿಕಾದ ಸಾಮ್ರಾಜ್ಯದಾಹವನ್ನು ಎದುರಿಸಿ, ಸ್ವತಂತ್ರವಾಗಿ ವ್ಯವಹರಿಸಿದ, ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ ದೇಶ ರಷ್ಯಾ. ಒತ್ತಡಗಳಿಗೆ ತಲೆಬಾಗುವುದಕ್ಕೂ ಒಂದು ಮಿತಿ ಇರುತ್ತದೆ. ಅದನ್ನು ಮೀರಿದಾಗ ಪ್ರತಿಭಟನೆ ಆಸ್ಫೋಟಗೊಳ್ಳುತ್ತದೆ. ರಷ್ಯಾದಲ್ಲಿ ಆಡಳಿತವನ್ನು ದೃಢಗೊಳಿಸಿದ ಪುಟಿನ್ ವಾಷಿಂಗ್ಟನ್ನಿನ ಒತ್ತಡದ ನೀತಿಗಳಿಗೆ ತಮ್ಮದೇ ಆದ ರೀತಿಯಲ್ಲಿ ಪ್ರತಿಭಟನೆ ತೋರುತ್ತ ಬಂದಿದ್ದಾರೆ. ಇತರ ದೇಶಗಳ ವ್ಯವಹಾರದಲ್ಲಿ ಕೈಹಾಕಿ, ಅಮೆರಿಕಾ ಮಾದರಿಯ ಪ್ರಜಾಪ್ರಭುತ್ವವನ್ನು ಹೊರಿಸುವ ಅಧ್ಯಕ್ಷ ಬುಷ್‌ರ ನೀತಿಯನ್ನು ಕಳೆದ ವರ್ಷ ಜರುಗಿದ

ಶ್ರೀಮಂತ ರಾಷ್ಟ್ರಗಳ ಎಂಟರ ಗುಂಪಿನ ಶೃಂಗಸಭೆಯಲ್ಲಿ ಪುಟಿನ್ ಅವರು ಕಟುವಾಗಿ ಟೀಕಿಸಿದ್ದರು – ಬುಷ್ ಎದುರಿನಲ್ಲೇ. ಅಮೇರಿಕಾದಲ್ಲಿ ಜಾರ್ಜ್ ಬುಷ್‌ರನ್ನು ಭೇಟಿಯಾಗಿದ್ದಾಗಲೂ ಅವರು ಪ್ರಜಾಪ್ರಭುತ್ವದ ಬಗ್ಗೆ ಉಪದೇಶ ಮಾಡುವುದನ್ನು ಅಮೆರಿಕಾ ನಿಲ್ಲಿಸಬೇಕು ಎಂದು ತಾಕೀತು ಮಾಡಿದ್ದರು. ಇತ್ತೀಚೆಗೆ, ಎಂದರೆ ಫೆಬ್ರವರಿ ತಿಂಗಳಲ್ಲಿ ಜರ್ಮನಿಯ ಮ್ಯೂನಿಕ್ ನಗರದಲ್ಲಿ ಜರುಗಿದ ಪಶ್ಚಿಮ ರಾಷ್ಟ್ರಗಳ ಭದ್ರತಾ ಸಮ್ಮೇಳನದಲ್ಲಿ ರಷ್ಯಾದ ಅಧ್ಯಕ್ಷರು ಮಾಡಿದ ಭಾಷಣ ಪ್ರಪಂಚದಲ್ಲಿ ಎಲ್ಲರ ಗಮನವನ್ನು ಸೆಳೆದಿದೆ. ಮಾಧ್ಯಮಗಳಲ್ಲಿ ಈ ಭಾಷಣ ತೀವ್ರವಾದ ಚರ್ಚೆಗೆ ಗ್ರಾಸವಾಗಿದೆ. ಅಮೆರಿಕಾದ ರಾಜಕಾರಣಿಗಳು ಮತ್ತೆ ರಷ್ಯಾ ತಲೆ ಎತ್ತೀತು ಎಂದು ಗಾಬರಿಯಾಗಿದ್ದಾರೆ. ಪುಟಿನ್‌ರ ಬಿರುನುಡಿಗಳು ಅಮೆರಿಕಾ ಹಾಗೂ ಪಶ್ಚಿಮ ರಾಷ್ಟ್ರಗಳ ನಾಯಕರನ್ನು ದಿಗ್ಭ್ರಮೆಗೊಳಿಸಿವೆ. ಸೋವಿಯತ್ ಒಕ್ಕೂಟದ ಪತನಾನಂತರ ಅಮೆರಿಕಾದ ಅಧಿನಾಯಕತ್ವದ ಧೋರಣೆಗಳನ್ನು ನೇರವಾಗಿ ತರಾಟೆಗೆ ತೆಗೆದುಕೊಂಡವರು ರಷ್ಯಾದ ಅಧ್ಯಕ್ಷ ವ್ಲಡೀಮಿರ್ ಪುಟಿನ್. "ಅಮೆರಿಕಾ ಪ್ರಪಂಚದಲ್ಲಿ ತನ್ನ ಅಧಿನಾಯಕತ್ವವನ್ನು ಸ್ಥಾಪಿಸುವ ನಿಟ್ಟಿನಲ್ಲಿ ಎಲ್ಲೆಮೀರಿ ವರ್ತಿಸತೊಡಗಿದೆ. ಆರ್ಥಿಕ, ರಾಜಕೀಯ ಹಾಗೂ ಮಾನವೀಯ ಕ್ಷೇತ್ರಗಳೆಲ್ಲದರಲ್ಲೂ ಹದ್ದುಮೀರಿ ವರ್ತಿಸಿ, ಇತರ ದೇಶಗಳ ಮೇಲೆ ತನ್ನ ಇಚ್ಛೆಯನ್ನು ಹೊರಿಸುತ್ತಿದೆ" ಎಂದು ಪುಟಿನ್ ಅವರು ಹೇಳಿದರು. ಶೀತಯುದ್ಧ ಅಂತ್ಯಗೊಂಡ ಮೇಲೆ ಅಮೆರಿಕಾ ಒಂದಾದಮೇಲೆ ಒಂದರಂತೆ ಯುದ್ಧಗಳನ್ನು ನಡೆಸುತ್ತಿದೆಯೇ ಹೊರತು, ಯಾವ ಪ್ರಶ್ನೆಯನ್ನೂ ಬಗೆಹರಿಸುವುದರಲ್ಲಿ ಸಫಲವಾಗಿಲ್ಲ ಎಂದು ಕಟುವಾಗಿ ಅಮೆರಿಕಾದ ನೀತಿಯನ್ನು ಅವರು ಖಂಡಿಸಿದರು. ಪಶ್ಚಿಮ ರಾಷ್ಟ್ರಗಳ ಪ್ರಜಾಪ್ರಭುತ್ವದ ರೀತಿನೀತಿಗಳನ್ನು ಕುರಿತು ರಷ್ಯಾಗೆ ಉಪದೇಶಮಾಡುವ ಉದ್ಧಟತನ ತೋರುತ್ತವೆಯೇ ಹೊರತು, ಅವುಗಳೇನೂ ಪಾಠ ಕಲಿಯಬಯಸುವುದಿಲ್ಲ ಎಂದೂ ಅವರು ಮೂದಲಿಸಿದರು. ಅವರ ಈ ಭಾಷಣವು ಆರ್ಥಿಕವಾಗಿ, ರಾಜಕೀಯವಾಗಿ ಚೇತರಿಸಿಕೊಂಡಿರುವ ರಾಷ್ಟ್ರದ ನಾಯಕನ ಅಭಿವ್ಯಕ್ತಿಯಾಗಿತ್ತು. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ರಷ್ಯಾ ಇದೇ ಧಾಟಿಯಲ್ಲಿ ಸ್ವತಂತ್ರ ನಿಲುವನ್ನು ತೆಗೆದುಕೊಂಡರೆ ಸ್ವಾಗತಾರ್ಹ ಬೆಳವಣಿಗೆಯಾಗಿರುತ್ತದೆ. ಅಮೆರಿಕಾದ ಅಧಿನಾಯಕತ್ವದ ಧೋರಣೆಯನ್ನು ಹಿಮ್ಮೆಟ್ಟಿಸಲು ದುರ್ಬಲವಾಗಿರುವ ಲ್ಯಾಟಿನ್ ಅಮೆರಿಕಾ, ಏಷ್ಯಾ, ಆಫ್ರಿಕಾ ದೇಶಗಳಿಗೆ ಹೊಸ ಚೈತನ್ಯತರಬಲ್ಲದ್ದಾಗಿರುತ್ತದೆ. ರಷ್ಯಾ ತನ್ನ ನಿಜವಾದ ಅಂತರರಾಷ್ಟ್ರೀಯ ಪಾತ್ರವನ್ನು ನಿರ್ವಹಿಸಿದರೆ ಅದಕ್ಕೆ ಬೆಂಬಲಕ್ಕೇನೂ ಕೊರತೆಯಾಗದು. ಏಕಕೇಂದ್ರೀಯ ವ್ಯವಸ್ಥೆಯನ್ನು ಮುರಿದು ಬಹುಕೇಂದ್ರೀಯ ವ್ಯವಸ್ಥೆಯನ್ನು ರೂಪಿಸುವುದು ಅಪೇಕ್ಷಣೀಯ ಹಾಗೂ ಸಾಧ್ಯ. ರಷ್ಯಾ ಇದಕ್ಕೆ ಸಹಾಯಕವಾಗಬಲ್ಲದು.

ಆದರೆ ಈ ನಿರೀಕ್ಷೆ ತಲೆಕೆಳಗಾಗಲೂಬಹುದು. ಈಗಾಗಲೇ ಎಚ್ಚೆತ್ತುಗೊಂಡಿರುವ ಅಮೆರಿಕಾದ ವರಿಷ್ಠರು ರಷ್ಯಾದ ನಾಯಕತ್ವವನ್ನು ಒಲಿಸಿಕೊಳ್ಳಲು ಮುಂದಾಗಿದ್ದಾರೆ. ಅಮೆರಿಕಾ ಸರಕಾರದ ಉನ್ನತಾಧಿಕಾರಿಗಳು ರಷ್ಯಾದ ನಾಯಕರನ್ನು ಸಮಾಧಾನಗೊಳಿಸಲು ನೋಡುತ್ತಿದ್ದಾರೆ. ವಿದೇಶಾಂಗ ಕಾರ್ಯದರ್ಶಿ ಕಾಂಡಲೀಸಾ ರೈಸ್ ರಷ್ಯಾದ ವಿದೇಶಾಂಗ ಸಚಿವ ಲಾವ್ರೋವ್‌ರನ್ನು ಭೇಟಿಯಾಗಿ ಮಾತುಕತೆ ನಡೆಸಿದ್ದಾರೆ. ಪುಟಿನ್‌ರ ಆಕ್ರೋಶ ತಾತ್ಕಾಲಿಕವಾದ್ದೆ ಅಥವಾ ಅಮೆರಿಕಾದಿಂದ ರಿಯಾಯಿತಿಗಳನ್ನು ಪಡೆದುಕೊಳ್ಳಲು ನಡೆಸಿರುವ ತಂತ್ರವೇ ಎನ್ನುವುದನ್ನು ಮುಂದಿನ ದಿನಗಳ ಬೆಳವಣಿಗೆಗಳಲ್ಲಿ ಕಾಣಬಹುದು. ಅದೇನೇ ಇದ್ದರೂ ಅಮೆರಿಕಾ ಹಿಂದಿನಂತೆ ರಷ್ಯಾವನ್ನು ಕಡೆಗಣಿಸುವುದು ದುಸ್ತರ. ರಷ್ಯಾ ಕೂಡ ಅಮೆರಿಕಾದ ಭಂಟನಾಗಿ ಸ್ವಾಭಿಮಾನ ಬಿಟ್ಟು ನಡೆದುಕೊಳ್ಳುವ ಕಾಲ ಮುಗಿದಿದೆ. ಹೊಸಹಾದಿ ನಿರ್ಮಿಸಲು ರಷ್ಯಾ ಸಜ್ಜಾಗಬೇಕಾಗಿದೆ. ಇತರ ಸ್ವಾತಂತ್ರ್ಯಾಪೇಕ್ಷ ದೇಶಗಳಿಗೆ ಅದು ಮಾದರಿಯಾಗಬೇಕಾಗಿದೆ. ಅದು ಮುಂದೆ ನಿಂತರೆ ಅಮೆರಿಕಾದ ಅಟಾಟೋಪವನ್ನು ತಡೆಯಲು ಸಾಧ್ಯವಾಗುತ್ತದೆ.

ಅಮೆರಿಕಾದ ಅಧಿನಾಯಕತ್ವದ ಧೋರಣೆಗೆ ಕಡಿವಾಣ ಹಾಕಲು, ಪ್ರಪಂಚದಲ್ಲಿ ಪರ್ಯಾಯ ರಾಜಕೀಯ, ಆರ್ಥಿಕ ವ್ಯವಸ್ಥೆಯನ್ನು ರೂಪಿಸಲು, ರಾಷ್ಟ್ರಗಳ ನಡುವೆ ಸಮಾನ ಸಂಬಂಧಗಳನ್ನು ರೂಪಿಸಲು ಒಂದುಗೂಡಿದ ಪ್ರಯತ್ನ ಇಂದಿನ ಪರಿಸ್ಥಿತಿಯಲ್ಲಿ ಅಗತ್ಯ. ರಷ್ಯಾ-ಚೀಣಾ-ಭಾರತ ಸಂಯುಕ್ತವಾಗಿ ಪ್ರಯತ್ನಿಸಿದಲ್ಲಿ ಅಂತರ ರಾಷ್ಟ್ರೀಯ ಕ್ಷೇತ್ರದಲ್ಲಿ ಅಂಥ ಪರಿವರ್ತನೆ ತರಲು ಸಾಧ್ಯ. ಈ ದಿಶೆಯಲ್ಲಿ ಇರಿಸಿರುವ ಹೆಜ್ಜೆ ಇನ್ನೂ ಪ್ರಾಥಮಿಕ ಹಂತದಲ್ಲಿಯೇ ಇದೆ. ಈ ಮೂರೂ ರಾಷ್ಟ್ರಗಳು ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಸ್ವತಂತ್ರವಾದ ಧೋರಣೆ ಅನುಸರಿಸತೊಡಗಿದರೆ ಅದು ಸಾಧ್ಯವಾದೀತು.

**ಸೀಯಾರ್ಕೆ**
'ಚೌಬೀನ', ೮೪೯, ೬ನೇ ಕ್ರಾಸ್, ೧ನೇ ಮೇನ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು - ೫೬೦ ೦೮೫

# ಸಾದರ ಸ್ವೀಕಾರ

**ಹುಲಿಯ ಬದುಕು** — *ಕೆ. ಉಲ್ಲಾಸ ಕಾರಂತ*
*ಅನು : ಎಚ್. ಆರ್. ಕೃಷ್ಣಮೂರ್ತಿ*
*ಪುಟ : ೧೪೪* — **ಬೆಲೆ : ರೂ. ೧೧೦**

**ಹುಲಿರಾಯನ ಆಕಾಶವಾಣಿ** — *ಕೆ. ಉಲ್ಲಾಸ ಕಾರಂತ*
*ನಿರೂಪಣೆ : ಟಿ. ಎಸ್. ಗೋಪಾಲ್*
*ಪುಟ : ೨೭೨* — **ಬೆಲೆ : ರೂ. ೨೦೦**

**ವನ್ಯಜೀವಿಗಳ ರಮ್ಯಲೋಕ**
*ಸಂಪಾದಕರು : ಟಿ. ಎಸ್. ಗೋಪಾಲ್, ಸಂಜಯ ಗುಬ್ಬಿ, ಸುಮಂಗಲಾ ಎಸ್. ಮುಮ್ಮಿಗಟ್ಟಿ*
*ಪುಟ : ೧೦೪* — **ಬೆಲೆ : ರೂ. ೮೦**

**ನಮ್ಮ ಭೂಮಿ - ನಮ್ಮ ಪರಿಸರ**
*ಸುಮಂಗಲ ಎಸ್. ಮುಮ್ಮಿಗಟ್ಟಿ*
*ಪುಟ : ೪೦* — **ಬೆಲೆ : ರೂ. ೧೮**

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಈಕೆ ಮಾದರ ಹುಡುಗಿ** (ಕಥಾ ಸಂಕಲನ)
*ಡಿ. ಬಿ. ಶಂಕರಪ್ಪ*
*ಪುಟ : ೭೭* — **ಬೆಲೆ : ರೂ. ೬೦**
**ಮಾಯಮ್ಮ ಪ್ರಕಾಶನ,** ದೊಡ್ಡಬೊಮ್ಮಪ್ಪಳರ ಮನೆ, ಕೆಂಚಿಕೊಪ್ಪ, ಹೊನ್ನಾಳಿ ತಾಲೂಕು, ದಾವಣಗೆರೆ ಜಿಲ್ಲೆ

**ಬಯಲು ಮತ್ತು ಏಕಾಂತ** (ಕವನ ಸಂಕಲನ)
*ಬಿ. ಸಿ. ಶೈಲಾ ನಾಗರಾಜ್*
*ಪುಟ : ೬೪* — **ಬೆಲೆ : ರೂ. ೫೦**
**ಶುಭದ ಪ್ರಕಾಶನ,** ಜರಗನಹಳ್ಳಿ, ಜೆ.ಪಿ.ನಗರ ಅಂಚೆ, ಬೆಂಗಳೂರು - ೫೬೦ ೦೭೮

**ವೇದ ಕುರಾನ್ ಆಚೆಗೆ** (ವೈಚಾರಿಕ ಲೇಖನಗಳು)
*ಜ. ಹೊ. ನಾ.*
*ಪುಟ : ೧೧೪* — **ಬೆಲೆ : ರೂ. ೭೦**

**ಡಿವೈನ್ ಪಾರ್ಕ್‌ನಲ್ಲಿ ಡೆವಿಲ್‌ಗಳು ಮತ್ತು ಮೂಢನಂಬಿಕೆ** (ವೈಚಾರಿಕ ಲೇಖನಗಳು) — *ಜ. ಹೊ. ನಾ.*
*ಪುಟ : ೯೬* — **ಬೆಲೆ : ರೂ. ೬೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಮಾನವ ಪ್ರಕಾಶನ,** ೨೦೬೪/ಎ, 'ಮಾನವ' ಉತ್ತರ ಬಡಾವಣೆ, ಹಾಸನ - ೫೭೩ ೨೦೧

**ಪಿರಮಿಡ್** (ಹಿಂದಿ ಕತೆಗಳು)
*ಅನು : ಡಾ॥ ಎಚ್. ಎಂ. ಕುಮಾರಸ್ವಾಮಿ*
*ಪುಟ : ೧೬೦* — **ಬೆಲೆ : ರೂ. ೧೦೦**
**ಸ್ವಾತಿಕಾ ಸಾಹಿತ್ಯ ಬಳಗ,** ಸುಳ್ಯ, ದಕ್ಷಿಣ ಕನ್ನಡ - ೫೭೪ ೨೩೯

**ಕಿಂಕಿಣಿ** (ಕವನ ಸಂಕಲನ) — *ಶ್ವೇತಾ ನರಗುಂದ*
*ಪುಟ : ೧೦೪* — **ಬೆಲೆ : ರೂ. ೬೦**
**ಜಡಭರತ ಪ್ರಕಾಶನ,** ಲಕ್ಷ್ಮಿಭವನ, ಸುಭಾಸ ರೋಡ, ಧಾರವಾಡ - ೫೮೦ ೦೦೧

**ಗಣಪ ಮತ್ತು ಗಾಂಪ** (ಕಥಾ ಸಂಕಲನ) — *ಪಿ. ಬಿ. ಪ್ರಸನ್ನ*
*ಪುಟ : ೯೬* — **ಬೆಲೆ : ರೂ. ೮೦**
**ಸುಮಂತ ಪ್ರಕಾಶನ,** ಉಪ್ಪಿನಕೋಟೆ, ಬ್ರಹ್ಮಾವರ, ಉಡುಪಿ.

**ಮಹಿಳೆ ಮತ್ತು ಕೋಮುವಾದ**
*ಡಾ॥ ಮಾಧವಿ ಎಸ್. ಭಂಡಾರಿ*
*ಪುಟ : ೮೦* — **ಬೆಲೆ : ರೂ. ೪೦**

**ನುಡಿಗವಳ** (ಮಹಿಳೆಯರ ಸೃಜನೇತರ ಸಾಹಿತ್ಯದ ಅವಲೋಕನ) — *ಡಾ॥ ಸಬಿಹಾ ಭೂಮಿಗೌಡ*
*ಪುಟ : ೧೪೪* — **ಬೆಲೆ : ರೂ. ೪೫**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಕನ್ನಡ ಸಾಹಿತ್ಯ ಪರಿಷತ್ತು,** ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ಬಿದಿಗೆಯ ಚಂದ್ರ** (ಕವನಗಳು)
*ರವೀಂದ್ರನಾಥ್ ಠಾಕೂರ್*
*ಅನು : ಜಿ. ರಾಮನಾಥ ಭಟ್*
*ಪುಟ : ೭೯* — **ಬೆಲೆ : ರೂ. ೪೦**
**ಶುಭೋದಯ ಪ್ರಕಾಶನ,** ನಂ. ೫೦೭, ಚಿತ್ಪಾವನ ಸಮಾಜ, ೬೫ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಉಳಿದ ಪ್ರತಿಮೆಗಳು** (ಕವನ ಸಂಕಲನ)
*ಡಿ. ಎಸ್. ರಾಮಸ್ವಾಮಿ*
*ಪುಟ : ೬೪* — **ಬೆಲೆ : ರೂ. ೩೦**
**ಸುಮುಖ ಪ್ರಕಾಶನ,** ೧೭೪ ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೨೩

# ಕಾರ್ಪೋರೇಟ್ ಆಸ್ಪತ್ರೆ ಹಾಗೂ ಶ್ರೀಸಾಮಾನ್ಯನ ಆರೋಗ್ಯ

■ ಡಾ|| ಸುರೇಶ್ ಹೆಗ್ಡೆ

ಅನಿವಾಸಿ ಭಾರತೀಯ ವೈದ್ಯರನೇಕರು ಸೇರಿ ಬೆಂಗಳೂರಿನಲ್ಲಿ ಅಮೆರಿಕಾ ಮಾದರಿಯ ಆಸ್ಪತ್ರೆಯೊಂದನ್ನು ತೆರೆಯಲಿದ್ದಾರಂತೆ. ಅವರು ತಮ್ಮ ತಾಯ್ನಾಡಿಗೆ ಎಂತಹ ದೊಡ್ಡ ಕೊಡುಗೆ ನೀಡಲಿದ್ದಾರೆ ಎಂದು ಪತ್ರಿಕೆಯೊಂದು ವರ್ಣಿಸಿದ್ದನ್ನು ಕೆಲ ದಿನಗಳ ಹಿಂದೆ ಓದಿದೆ. ಆದರೆ ಇದೂ ಕೂಡ ನಮ್ಮ ನಗರದ ಮೂಲೆ ಮೂಲೆಗಳಲ್ಲಿ ಈಗಾಗಲೇ ತಲೆಯೆತ್ತುತ್ತಿರುವ ಅನೇಕ 'ಕಾರ್ಪೊರೇಟ್' ಆಸ್ಪತ್ರೆಗಳ ಸಾಲಿಗೆ ಸೇರ್ಪಡೆಯಾಗಲಿದೆ ಎಂಬುದು ನನ್ನ ಅನಿಸಿಕೆ. ಎಲ್ಲ ಖಾಸಗಿ ಆಸ್ಪತ್ರೆಗಳನ್ನೂ ಕಾರ್ಪೊರೇಟ್ ಆಸ್ಪತ್ರೆಗಳೆಂದು ಕರೆಯಲಾಗುವುದಿಲ್ಲ. ದೊಡ್ಡ ಉದ್ದಿಮೆದಾರರು ಬೃಹತ್ ಮೊತ್ತದ ಬಂಡವಾಳ ಹೂಡಿ ದೊಡ್ಡ ಕಂಪನಿಯಂತೆ ನಡೆಸುವ ಆಸ್ಪತ್ರೆಗಳನ್ನು ಕಾರ್ಪೊರೇಟ್ ಆಸ್ಪತ್ರೆಗಳೆಂದು ಕರೆಯಬಹುದು. ಈ ಹೊಸ ತಳಿಯ, ಅತ್ಯಂತ ಸುಸಜ್ಜಿತವಾದ, ಥಳಿಥಳಿಸುವ ಗಾಜು ಗ್ರಾನೈಟ್‌ಗಳಿಂದ ತುಂಬಿದ, ಜಾಗತಿಕ ಮಟ್ಟದ ಚಿಕಿತ್ಸೆ ದೊರೆಯುವ ಆಸ್ಪತ್ರೆಗಳಲ್ಲಿ ಕೆಲವು ಹೃದಯ, ಮೆದುಳು ಮುಂತಾದ ಅಂಗಗಳಿಗೆ ಮಾತ್ರ ಚಿಕಿತ್ಸೆ ಒದಗಿಸಿದರೆ, ಇನ್ನೂ ಕೆಲವು ಮಲ್ಟಿ ಸೂಪರ್ ಸ್ಪೆಷಾಲಿಟಿ ಆರೋಗ್ಯ ಕೇಂದ್ರಗಳಾಗಿವೆ !

ಇಂತಹ ಕಾರ್ಪೊರೇಟ್ ಆಸ್ಪತ್ರೆಗಳು ಜನರ ಆರೋಗ್ಯ ರಕ್ಷಣೆಯಲ್ಲಿ ಎಂತಹ ಪಾತ್ರ ವಹಿಸುತ್ತಿವೆ ಎಂಬುದರ ಬಗ್ಗೆ ಹಲವು ಪ್ರಶ್ನೆಗಳು ಅಲ್ಲಲ್ಲಿ ಕೇಳಿಬರುತ್ತಿವೆ. ಇಲ್ಲಿ ಚಿಕಿತ್ಸೆಯನ್ನು ಒಂದು ಸೇವೆ ಎಂದು ಪರಿಗಣಿಸಲಾಗುತ್ತದೆಯೇ? ಈ ಆಸ್ಪತ್ರೆಗಳು ರೋಗಿಯನ್ನು ಕೇವಲ ಒಬ್ಬ ಗಿರಾಕಿಯಂತೆ ಪರಿಗಣಿಸುತ್ತಿಲ್ಲವೇ ? ಇವುಗಳಲ್ಲಿ ಚಿಕಿತ್ಸೆಗೊಳಗಾಗುವ ರೋಗಿಗಳು ಹಲವು ಬಗೆಯ ಹಾಗೂ ಅನಗತ್ಯವೆನಿಸುವ ಪರೀಕ್ಷೆ ಹಾಗೂ ಚಿಕಿತ್ಸೆಗಳಿಗೆ ಒಳಪಡುತ್ತಿಲ್ಲವೇ? ಇಂತಹ ಪ್ರಶ್ನೆಗಳಿಗೆ ಉತ್ತರ ಹುಡುಕಹೊರಟಾಗ ಹಲವು ಗಂಭೀರ ವಿಷಯಗಳು ಬೆಳಕಿಗೆ ಬರುತ್ತವೆ. ಅವುಗಳನ್ನು ಚರ್ಚಿಸುವ ಮೊದಲು ಈ ಹೊಸ ರೀತಿಯ ಆಸ್ಪತೆಗಳು ಹೇಗೆ ಅಸ್ತಿತ್ವಕ್ಕೆ ಬಂದವು, ಇದರ ಹಿನ್ನೆಲೆ ಏನು ಎಂಬುದರ ಕುರಿತು ಒಂದೆರಡು ಮಾತು.

**ಖಾಸಗೀಕರಣದ ಹಾದಿ**

ನಮ್ಮ ದೇಶದಲ್ಲಿ ಇಂದು ಎಲ್ಲ ಕ್ಷೇತ್ರಗಳಲ್ಲಿ ಖಾಸಗೀಕರಣದ ಗಾಳಿ ಭರದಿಂದ ಬೀಸುತ್ತಿದೆ. ಗ್ಯಾಟ್ ಒಪ್ಪಂದದ ಮೂಲಕ ಅಸ್ತಿತ್ವಕ್ಕೆ ಬಂದ ವಿಶ್ವವ್ಯಾಪಾರ ಸಂಸ್ಥೆಯು ಹಾಕಿಕೊಟ್ಟ ಹಾದಿಯಲ್ಲಿ ನಡೆಯುತ್ತಿರುವ ನಮ್ಮ ಸರ್ಕಾರ ಆರೋಗ್ಯ ಕ್ಷೇತ್ರದಲ್ಲೂ ಕೂಡ ಖಾಸಗೀಕರಣಕ್ಕೆ ಹೆಚ್ಚು ಒತ್ತು ನೀಡಲು ಆರಂಭಿಸಿದೆ. ಜನರ ಆರ್ರೋಗ್ಯ ರಕ್ಷಣೆಯ ಜವಾಬ್ದಾರಿಯನ್ನು ತನ್ನ ಹೆಗಲಿನಿಂದ ಕೊಡವಿಕೊಂಡು ಸರ್ಕಾರವು ಇಡೀ ಆರೋಗ್ಯಕ್ಷೇತ್ರವನ್ನು ಖಾಸಗಿಯವರು ತಮಗೆ ಬೇಕಾದಂತೆ ಬಳಸಿಕೊಳ್ಳಲು ಅನುವುಮಾಡಿಕೊಟ್ಟಿದೆ. ಸರ್ಕಾರಿ ಆಸ್ಪತ್ರೆಗಳನ್ನು ಕೂಡ ಖಾಸಗಿಯವರ ಕೈಗೆ ಹಸ್ತಾಂತರಿಸುವ ಪ್ರಯತ್ನವಾಗಿ ಪಬ್ಲಿಕ್-ಪ್ರೈವೆಟ್ ಪಾರ್ಟ್‌ನರ್‌ಶಿಪ್ ಎಂಬ ಹೊಸ ಮಂತ್ರವನ್ನು ಈಗ ಜಪಿಸುತ್ತಿದೆ. ಅನೇಕ ಸರ್ಕಾರಿ ಮೆಡಿಕಲ್ ಕಾಲೇಜುಗಳನ್ನು ಈಗಾಗಲೇ ಸ್ವಾಯತ್ತ ಸಂಸ್ಥೆಗಳೆಂದು ಘೋಷಿಸಿ ಅವುಗಳ ಆಡಳಿತ ಮಂಡಳಿಯಲ್ಲಿ ಖಾಸಗಿ ವ್ಯಕ್ತಿಗಳನ್ನು ನೇಮಿಸಲಾಗಿದೆ. ಮುಂದೆ ಇವುಗಳನ್ನು ಸಂಪೂರ್ಣವಾಗಿ ಖಾಸಗಿ ಒಡೆತನಕ್ಕೆ ಒಪ್ಪಿಸಿದರೂ ಆಶ್ಚರ್ಯವೇನಿಲ್ಲ!

ಈ ರೀತಿಯ ಖಾಸಗೀಕರಣದ ಫಲಶ್ರುತಿಯಾಗಿಯೇ ತಲೆಯೆತ್ತಿವೆ, ಈ ಕಾರ್ಪೊರೇಟ್ ಆಸ್ಪತ್ರೆಗಳು! ಕೇವಲ ಮಹಾನಗರಗಳಿಗೆ ಸೀಮಿತವಾಗಿದ್ದ ಇವು ಇಂದು ಅನೇಕ ಜಿಲ್ಲಾ

ಕಾರ್ಪೊರೇಟ್ ಆಸ್ಪತ್ರೆಗಳು ಜನರ ಆರೋಗ್ಯ ರಕ್ಷಣೆಯಲ್ಲಿ ಎಂತಹ ಪಾತ್ರ ವಹಿಸುತ್ತಿವೆ ಎಂಬುದರ ಬಗ್ಗೆ ಹಲವು ಪ್ರಶ್ನೆಗಳು ಅಲ್ಲಲ್ಲಿ ಕೇಳಿಬರುತ್ತಿವೆ. ಇಲ್ಲಿ ಚಿಕಿತ್ಸೆಯನ್ನು ಒಂದು ಸೇವೆ ಎಂದು ಪರಿಗಣಿಸಲಾಗುತ್ತದೆಯೇ ? ಈ ಆಸ್ಪತ್ರೆಗಳು ರೋಗಿಯನ್ನು ಕೇವಲ ಒಬ್ಬ ಗಿರಾಕಿಯಂತೆ ಪರಿಗಣಿಸುತ್ತಿಲ್ಲವೇ ? ಇವುಗಳಲ್ಲಿ ಚಿಕಿತ್ಸೆಗೊಳಗಾಗುವ ರೋಗಿಗಳು ಹಲವು ಬಗೆಯ ಹಾಗೂ ಅನಗತ್ಯವೆನಿಸುವ ಪರೀಕ್ಷೆ ಹಾಗೂ ಚಿಕಿತ್ಸೆಗಳಿಗೆ ಒಳಪಡುತ್ತಿಲ್ಲವೇ ? ಇಂತಹ ಪ್ರಶ್ನೆಗಳಿಗೆ ಉತ್ತರ ಹುಡುಕಹೊರಟಾಗ ಹಲವು ಗಂಭೀರ ವಿಷಯಗಳು ಬೆಳಕಿಗೆ ಬರುತ್ತವೆ.



ಕೇಂದ್ರಗಳಲ್ಲೂ ತೆರೆಯಲ್ಪಟ್ಟಿವೆ. ದೊಡ್ಡ ಬಂಡವಾಳಗಾರರು ಮತ್ತು ಔಷಧಿ ಕಂಪನಿಗಳು ಈ ಸಂಸ್ಥೆಗಳನ್ನು ನಡೆಸುತ್ತಿರುವುದು. ವೈದ್ಯಕೀಯ ಕ್ಷೇತ್ರದ ಗಂಧವೇ ಇಲ್ಲದ ವ್ಯಾಪಾರಿಗಳೂ ಕೂಡ ಈಗ ಈ ಕ್ಷೇತ್ರಕ್ಕೆ ಇಳಿಯತೊಡಗಿದ್ದಾರೆ. ಅನೇಕ ವಿದೇಶಿ ಕಂಪನಿಗಳು ಮತ್ತು ಸಂಸ್ಥೆಗಳು ಇವುಗಳಲ್ಲಿ ಬಂಡವಾಳ ಹೂಡುತ್ತಿವೆ. ಅಂದ ಮೇಲೆ ಇಲ್ಲಿ ಸೇವೆ ಎಂಬ ಮಾತಿಗೆ ಬೆಲೆಯುಂಟೇ ?



**ಕಾರ್ಪೊರೇಟ್ ಚಿಕಿತ್ಸೆ**

ಈ ಆಸ್ಪತ್ರೆಗಳು ಅತ್ಯಂತ ಸುಸಜ್ಜಿತವಾಗಿವೆ ಎಂಬುದು ನಿರ್ವಿವಾದ. ಇಲ್ಲಿರುವ ನವೀನ ಮಾದರಿಯ ಯಂತ್ರಗಳು, ಚಿಕಿತ್ಸಾ ವಿಧಾನಗಳು ಮುಂದುವರಿದ ದೇಶಗಳಲ್ಲಿನ ಆಸ್ಪತ್ರೆಗಳಿಗೆ ಸಮನಾಗಿರಬಹುದು. ಆದರೆ ಅಲ್ಲಿ ಚಿಕಿತ್ಸೆ ಪಡೆದವರಲ್ಲಿ ಅನೇಕರ ಅನುಭವಗಳು ತೃಪ್ತಿಕರವಾಗಿಲ್ಲ. ಅಷ್ಟೇ ಅಲ್ಲ, ಅವುಗಳಲ್ಲಿ ಕೆಲವು ಜನಸಾಮಾನ್ಯರಲ್ಲಿ ದಿಗಿಲು ಹುಟ್ಟಿಸಿದರೂ ಆಶ್ಚರ್ಯವಿಲ್ಲ. ಅಂತಹವುಗಳಲ್ಲಿ ಕೆಲವು ಉದಾಹರಣೆಗಳು ಇಲ್ಲಿವೆ.

ಆಪರೇಶನ್ ಹಾಗೂ ಇನ್ನಿತರ ಚಿಕಿತ್ಸೆಯ ಸಮಯದಲ್ಲಿ ಅಗತ್ಯಕ್ಕಿಂತ ಹೆಚ್ಚಾಗಿ ಔಷಧಗಳು ಮತ್ತು ಇನ್ನಿತರ ಸಾಮಗ್ರಿಗಳನ್ನು ತರಿಸಿ ಅವುಗಳನ್ನು ಉಪಯೋಗಿಸದಿದ್ದರೂ ಬಿಲ್ ಹಾಕಲಾಗುತ್ತದೆ ಎಂಬುದು ಬಹಳಷ್ಟು ಜನರ ಅಭಿಪ್ರಾಯವಾಗಿದೆ. ಉದಾಹರಣೆಗೆ, ಎರಡು ಜೊತೆ ಕೈಗವಸು (gloves) ಬೇಕಾದಲ್ಲಿ ಒಂದು ಬಾಕ್ಸ್ ತರಿಸುವುದು. ಹಾಗೆಯೇ ಡ್ರಿಪ್ ಬಾಟಲುಗಳು, ಇಂಜೆಕ್ಷನ್‌ಗಳು, ಅರಿವಳಿಕೆಗೆ ಬೇಕಾಗುವ ಹ್ಯಾಲೋಥೇನ್ ಮುಂತಾದ ಔಷಧಗಳನ್ನು ಅಗತ್ಯಕ್ಕಿಂತ ಹೆಚ್ಚಾಗಿ ಬರೆಯಲಾಗುತ್ತದೆ ಎಂಬುದು ಅನೇಕರ ಅನುಭವ. ಚಿಕಿತ್ಸೆ ನಿಷ್ಫಲಗೊಂಡು ರೋಗಿ ಮರಣಹೊಂದಿದರೆ, ಯಾವುದೇ ಮುಲಾಜಿಲ್ಲದೆ ಪೂರ್ಣ ಬಿಲ್ ಪಾವತಿ ಆಗುವವರೆಗೆ ಶವವನ್ನು ಬಿಟ್ಟುಕೊಡದೆ ಸತಾಯಿಸಿದ ಅನೇಕ ಘಟನೆಗಳು ನಡೆದಿವೆ. ಇನ್ನೂ ಕೆಲವು ಸಂದರ್ಭಗಳಲ್ಲಿ ರೋಗಿ ಮರಣಹೊಂದಿದ ಮೇಲೆ ಕೂಡ 'ಜೀವ ಉಳಿಸಲು' ವೆಂಟಿಲೇಟರ್‌ನಲ್ಲಿ ಇಟ್ಟು ಇನ್ನೂ ಪ್ರಯತ್ನ ಮಾಡಲಾಗುತ್ತಿದೆ ಎಂದು ರೋಗಿಯ ಸಂಬಂಧಿಕರನ್ನು ನಂಬಿಸಿ ಬಿಲ್ ಮೊತ್ತವನ್ನು ಹೆಚ್ಚಿಸುವ ಪ್ರಯತ್ನಗಳು ಕೂಡ ನಡೆದಿರುವುದುಂಟು ಎಂದು ಅಂತಹ ಕೆಲವು ಆಸ್ಪತ್ರೆಗಳ ವೈದ್ಯರೇ ಹೇಳುತ್ತಿದ್ದಾರೆ. ಹೀಗಾದರೆ ವೈದ್ಯವೃತ್ತಿಯ ಮೇಲೆ ಜನರಿಗಿರುವ ನಂಬಿಕೆಗೆ ತೀವ್ರ ಹೊಡೆತ ತಗಲುವುದಿಲ್ಲವೇ ?

ಹಲವಾರು ಕಾರ್ಪೊರೇಟ್ ಆಸ್ಪತ್ರೆಗಳಲ್ಲಿ ಗುಣವಾಗದ ರೋಗಿಗಳಿಗೆ ಇನ್ನೂ ಮಾರುಕಟ್ಟೆಯಲ್ಲಿ ಬಿಡುಗಡೆಯಾಗದ ಹೊಸ ಔಷಧಿಗಳನ್ನು ಪ್ರಯೋಗಾರ್ಥವಾಗಿ ನೀಡಿ ಕ್ಲಿನಿಕಲ್ ಟ್ರಯಲ್ ನಡೆಸಲಾಗುತ್ತದೆ. ಪೂರ್ಣ ಉಚಿತವಾಗಿ ಚಿಕಿತ್ಸೆ ನಡೆಸುತ್ತೇವೆಂದು ಹೇಳಿ ಆನಂತರ ಅನೇಕ ವಿಧದ ವಿಶೇಷ ಪರೀಕ್ಷೆಗಳನ್ನು ನಡೆಸಿ ಅವುಗಳ ಖರ್ಚನ್ನು ರೋಗಿಗಳ ತಲೆಯ ಮೇಲೆ ಹಾಕಿದ ಎಷ್ಟೋ ಘಟನೆಗಳನ್ನು ರೋಗಿಗಳು ಹೇಳುವುದನ್ನು ಕೇಳಿದ್ದೇವೆ. ಇಷ್ಟೇ ಅಲ್ಲದೆ ಇತ್ತೀಚಿಗೆ ಮೆಡಿಕಲ್ ಟೂರಿಸಂ ಎಂಬ ಹೊಸ ಫ್ಯಾಷನ್ ಕೂಡ ಇಲ್ಲಿ ಆರಂಭವಾಗಿದೆ. ದೇಶ-ವಿದೇಶಗಳಲ್ಲಿ ತಮ್ಮ ಆಸ್ಪತ್ರೆಯ ಬಗ್ಗೆ ಪ್ರಚಾರ ನಡೆಸಿ, ಅಲ್ಲಿಂದ ರೋಗಿಗಳನ್ನು ಪ್ಯಾಕೇಜ್ ಟೂರ್‌ನಂತೆ ಇಲ್ಲಿಗೆ ಕರೆಸಿಕೊಂಡು, ರೋಗಿ ಮತ್ತು ಸಂಬಂಧಿಕರನ್ನು ಐಷಾರಾಮದಲ್ಲಿ ಇರಿಸಿ, ಚಿಕಿತ್ಸೆ ನಡೆಸಿ ಹಿಂದೆ ಕಳಿಸಿಕೊಡುವ ವ್ಯವಸ್ಥೆಯನ್ನು ದೇಶದಾದ್ಯಂತ ಅನೇಕ ಆಸ್ಪತ್ರೆಗಳು ಹೊಂದಿವೆ. ಈ ಎಲ್ಲ ಸಂಗತಿಗಳನ್ನು ಗಮನಿಸಿದರೆ ಇದು ನಿಜವಾದ ವೈದ್ಯಕೀಯ ಸೇವೆಯೇ ಎಂಬ ಅನುಮಾನ ಮೂಡುವುದು ಸಹಜ.



ಇಂತಹ ಸುಸಜ್ಜಿತವಾದ, ನುರಿತ ವೈದ್ಯರಿರುವ ಆಸ್ಪತ್ರೆಗಳಲ್ಲಿ ಹಣ ತೆತ್ತು ಚಿಕಿತ್ಸೆ ಪಡೆಯುವಾಗಲೂ ಸಹ ಎಲ್ಲ ಸುಸೂತ್ರವಾಗಿ ನಡೆಯುತ್ತದೆ ಎಂಬ ಯಾವ ಗ್ಯಾರಂಟಿಯೂ ಇಲ್ಲ ಎಂಬುದಕ್ಕೆ ನನಗೆ ಪರಿಚಯವಿರುವ ಹಿರಿಯ ಮಹಿಳಾ ವೈದ್ಯೆಯೊಬ್ಬರ ಅನುಭವವೇ ಸಾಕ್ಷಿ. ನರ್ಸಿಂಗ್ ಹೋಂ ಒಂದರಲ್ಲಿ ಗರ್ಭಾಶಯದ ಆಪರೇಷನ್ ಮಾಡಿಸಿಕೊಂಡು ಒಂದು ವಾರ ಕಳೆಯುವಷ್ಟರಲ್ಲಿ ಅವರ ಹೊಟ್ಟೆಯಲ್ಲಿ ನೋವು ಅಧಿಕಗೊಂಡು ಪರಿಸ್ಥಿತಿ ಗಂಭೀರವಾದಾಗ ಅವರನ್ನು ಬೆಂಗಳೂರಿನ ಕಾರ್ಪೊರೇಟ್ ಆಸ್ಪತ್ರೆಯೊಂದಕ್ಕೆ ದಾಖಲಿಸಲಾಯಿತು. ಅಲ್ಲಿ ಪುನಃ ಅವರ ಹೊಟ್ಟೆಯ ಆಪರೇಷನ್ ಮಾಡಿದ ಹಿರಿಯ ವೈದ್ಯರುಗಳ ತಂಡ ಹಿಂದಿನ ಆಪರೇಷನ್ ಸಂದರ್ಭದಲ್ಲಿ ಕರುಳಿಗೆ ಪೆಟ್ಟಾಗಿ, ಅದರಿಂದಾದ ಸೋರಿಕೆಯಿಂದ ಹೊಟ್ಟೆಯೊಳಗೆ ತೀವ್ರ ಸೋಂಕು ಉಂಟಾಗಿದ್ದನ್ನು ಕಂಡುಹಿಡಿದು ಅದರ ಚಿಕಿತ್ಸೆ ಮಾಡಿತು. ರೋಗಿಗೆ ಸೆಪ್ಟೀಸೀಮಿಯಾ (Septicemia) ಆಗಿದ್ದನ್ನು ಗುರುತಿಸಿದ ವೈದ್ಯರು ಅವರನ್ನು ತೀವ್ರ ನಿಗಾ ಘಟಕದಲ್ಲಿ ಇರಿಸಿದರು. ಆದರೆ ರೋಗಿಯ ಉಸಿರಾಟದ ತೊಂದರೆ ದಿನೇ ದಿನೇ ಉಲ್ಬಣಿಸಿದಾಗ ವಿವಿಧ ವಿಭಾಗಗಳ ತಜ್ಞವೈದ್ಯರನ್ನು ಕರೆಸಲಾಯಿತು. ಆಪರೇಷನ್ ನಡೆಸಿದ ಸರ್ಜನ್ ರೋಗಿಯ ಹೊಟ್ಟೆಯೊಳಗೆ ಈಗ ಯಾವುದೇ ತೊಂದರೆ ಇಲ್ಲ ಎಂದರೆ, ಹೃದಯರೋಗ ತಜ್ಞರು ಹೃದಯ ಚೆನ್ನಾಗಿದೆ ಎಂದರು. ಶ್ವಾಸಕೋಶ ತಜ್ಞರಿಗೆ ಅಲ್ಲೇನೂ ವಿಶೇಷವಾದದ್ದು ಕಾಣಿಸಲಿಲ್ಲ. ಆದರೆ ರೋಗಿಯ ಸ್ಥಿತಿ ಹದಗೆಡುತ್ತಲೇ ಹೋಯಿತು. ರೋಗಿ ಸಾವಿನ ಅಂಚಿಗೆ ಮುಟ್ಟಿದಾಗ ಅವರ ಕುಟುಂಬದವರು, ಹಿತೈಷಿಗಳು, ವೈದ್ಯಮಿತ್ರರು ಸೇರಿ ಆಸ್ಪತ್ರೆಯವರ ಮೇಲೆ ಒತ್ತಡ ಹೇರಿದಾಗ ಎಲ್ಲ ತಜ್ಞವೈದ್ಯರೂ ಒಟ್ಟಿಗೆ ಸೇರಿ ಈ ಬಗ್ಗೆ ಚರ್ಚಿಸಿ ಇನ್ನೂ ಕೆಲವು ಪರೀಕ್ಷೆಗಳನ್ನು ನಡೆಸಿದ ಮೇಲೆ, ರೋಗಿಯ ಶ್ವಾಸಕೋಶದಲ್ಲಿ ಹೆಪ್ಪುಗಟ್ಟಿದ ರಕ್ತ ಸೇರಿಕೊಂಡಿದೆ (pulmonary embolism) ಎಂದು ಕಂಡುಹಿಡಿದರು. ಅದಕ್ಕೆ ಚಿಕಿತ್ಸೆ ನಡೆಸಿದ ಮೇಲೆ ರೋಗಿ ಗುಣಮುಖರಾದಾಗ ನಾವೆಲ್ಲ ನೆಮ್ಮದಿಯ ನಿಟ್ಟುಸಿರುಬಿಟ್ಟೆವು. ಇಂತಹ ಸುಸಜ್ಜಿತವಾದ ಆಸ್ಪತ್ರೆಯಲ್ಲೂ ಕೂಡ ವಿವಿಧ ತಜ್ಞವೈದ್ಯರ ನಡುವೆ ಸಾಮರಸ್ಯದ ಕೊರತೆಯಿಂದ ಎಂತಹ ಅನಾಹುತಗಳಾಗಬಹುದು ಎಂಬುದನ್ನು ನೀವೇ ನೋಡಿದಿರಲ್ಲ! ಸ್ವತಃ ವೈದ್ಯರಾದವರಿಗೇ ಹೀಗಾದರೆ ಇನ್ನು ಸಾಮಾನ್ಯ ಜನರ ಪಾಡನ್ನು ನೀವೇ ಊಹಿಸಬಹುದು.

**ಆರೋಗ್ಯ ವಿಮೆ**

ಗಂಭೀರ ಕಾಯಿಲೆಗಳಾದ ಹೃದಯರೋಗ, ಕ್ಯಾನ್ಸರ್, ಮೂತ್ರಜನಕಾಂಗದ ವೈಫಲ್ಯ ಇತ್ಯಾದಿಗಳ ಬಗ್ಗೆ ಯಾರಿಗೆ ತಾನೇ ಭಯವಿಲ್ಲ? ಇದನ್ನೇ ಬಂಡವಾಳವಾಗಿಸಿಕೊಂಡು ರೋಗ ಬರುವ ಮೊದಲೇ ವಿಮೆ ಮಾಡುವ ಪದ್ಧತಿ ಈಗ ಭಾರತದಲ್ಲಿ ಕಾಲಿಟ್ಟಿದೆ. ಈ ವಿಮೆ ಪಾಲಿಸಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಅದರಲ್ಲಿ ಸಾಮಾನ್ಯವಾಗಿ ಬರಬಹುದಾದ ಎಷ್ಟೋ ಕಾಯಿಲೆಗಳಿಗೆ ವಿಮೆ ಅನ್ವಯಿಸುವುದಿಲ್ಲ. ರೋಗದ ಚಿಕಿತ್ಸೆ ನಡೆಯುವಾಗ ಆಸ್ಪತ್ರೆಯವರು ವಿಮೆ ಇದೆಯಲ್ಲ ಎಂದು ಹೆಚ್ಚು ಬಿಲ್ ಹಾಕುವುದು, ಅನಗತ್ಯ ಪರೀಕ್ಷೆಗಳನ್ನು ಮಾಡಿಸುವುದು ಸರ್ವೇಸಾಮಾನ್ಯ ಸಂಗತಿ. ಚಿಕಿತ್ಸೆಯ ನಂತರ ಹಣ ಕ್ಲೇಮ್ ಮಾಡುವಾಗ ವಿಮಾ ಕಂಪನಿಗಳು ಯಾವುದಾದರೂ ಕುಂಟುನೆಪ ತೆಗೆದು ಹಣ ಪಾವತಿ ಮಾಡದೆ ಇರುವ ಘಟನೆಗಳು ಹಲವು

ಸಂದರ್ಭಗಳಲ್ಲಿ ನಡೆದಿವೆ. ಆಗ ರೋಗಿಯ ಸಂಬಂಧಿಕರು ಸಾಲ ಮಾಡಿಯೋ ಅಥವಾ ಇದ್ದಬದ್ದ ಆಸ್ತಿಯನ್ನು ಮಾರಿಯೋ ಆಸ್ಪತ್ರೆಗಳ ಬಿಲ್ ಭರಿಸಿದ ಪ್ರಸಂಗಗಳೂ ಇವೆ. ಆರೋಗ್ಯ ವಿಮೆಯ ಕ್ಷೇತ್ರದಲ್ಲಿ ಬಹುದೊಡ್ಡ ಲಾಭವಿರುವ ಅವಕಾಶವನ್ನು ನೋಡಿದ ಹಲವು ವಿದೇಶೀ ವಿಮಾ ಕಂಪನಿಗಳು ಈಗಾಗಲೇ ಭಾರತದಲ್ಲಿ ತಳವೂರಿವೆ. ಈ ಉದ್ದಿಮೆದಾರರೆಲ್ಲ ಜನರ ಸೇವೆ ಮಾಡಲು ಬಂದಿರುವರೇ ?

**ಸರ್ಕಾರದ ನಿರ್ಲಕ್ಷ್ಯ**

ಆರೋಗ್ಯಕ್ಷೇತ್ರದ ಜವಾಬ್ದಾರಿ ತನ್ನದಲ್ಲ ಎಂಬಂತೆ ವರ್ತಿಸುತ್ತಿರುವ ಸರ್ಕಾರ ಆರೋಗ್ಯ ಬಜೆಟ್ಟನ್ನು ಪ್ರತಿವರ್ಷವೂ ಇಳಿಸುತ್ತಾ ಬಂದು ಈಗ ಅದು ಬಾಂಗ್ಲಾದೇಶದ ಆರೋಗ್ಯ ಬಜೆಟ್ಟಿಗಿಂತಲೂ ಕೆಳಮಟ್ಟಕ್ಕೆ ಇಳಿದಿದೆ. ಅದೇ ಸಮಯದಲ್ಲಿ ಖಾಸಗಿ ಕಾರ್ಪೊರೇಟ್ ಆಸ್ಪತ್ರೆಗಳಿಗೆ ಸರ್ಕಾರಿ ಜಮೀನನ್ನು ಅತಿ ಕಡಿಮೆ ದರದಲ್ಲಿ ಒದಗಿಸುವುದರ ಜೊತೆಗೆ ಅವರಿಗೆ ಅನೇಕ ರೀತಿಯ ತೆರಿಗೆ ವಿನಾಯಿತಿಗಳನ್ನೂ ನೀಡಲಾಗುತ್ತಿದೆ. ಸಂಶೋಧನಾ ಕೇಂದ್ರಗಳೆಂಬ ಹಣೆಪಟ್ಟಿ ಹಾಕಿಕೊಂಡ ಅನೇಕ ಖಾಸಗಿ ಆಸ್ಪತ್ರೆಗಳಲ್ಲಿ ಯಾವುದೇ ಸಂಶೋಧನೆ ನಡೆಯದೆ ಅದೊಂದು ತೆರಿಗೆ ತಪ್ಪಿಸಿಕೊಳ್ಳುವ ತಂತ್ರವಾಗಿ ಬಳಕೆಯಾಗುತ್ತಿದೆ. ಸರ್ಕಾರಿ ಆಸ್ಪತ್ರೆಗಳ ದುಃಸ್ಥಿತಿಗೆ ವೈದ್ಯರುಗಳು ಹೊಣೆಯೆಂಬಂತೆ ಪ್ರಚಾರ ನಡೆಸಲಾಗುತ್ತಿದೆ. ಅಲ್ಲಿ ಲಂಚಗುಳಿತನ, ನಿರ್ಲಕ್ಷ್ಯ ಇಲ್ಲವೆಂದಲ್ಲ. ಆದರೆ ನಿಷ್ಠಾವಂತರಾದ ವೈದ್ಯರೂ ಅಲ್ಲಿದ್ದಾರೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ವೈದ್ಯರು ಕೆಲಸ ಮಾಡಲು ಸರಿಯಾದ ಪರಿಸ್ಥಿತಿಯನ್ನೇ ನಿರ್ಮಿಸದ ಸರ್ಕಾರ ಜನರನ್ನು ಖಾಸಗಿ ಆಸ್ಪತ್ರೆಗಳೆಡೆಗೆ ತಾನಾಗಿಯೇ ತಳ್ಳುತ್ತಿದೆ. ಸರಿಯಾಗಿ ಕಾರ್ಯ ನಿರ್ವಹಿಸದ ಮತ್ತು ಅವ್ಯವಹಾರದಲ್ಲಿ ನಿರತರಾಗಿರುವವರ ವಿರುದ್ಧ ಕ್ರಮ ಜರುಗಿಸುವ ಅಧಿಕಾರ ಸರ್ಕಾರಕ್ಕಿದೆ. ಆದರೆ ಸರ್ಕಾರಿ ಆಸ್ಪತ್ರೆ ಹಾಗೂ ಕಾಲೇಜುಗಳನ್ನು ಖಾಸಗಿಯವರ ಕೈಗೊಪ್ಪಿಸಿದರೆ ಎಲ್ಲ ಸರಿಹೋಗುತ್ತದೆ ಎಂಬ ಭ್ರಮೆ ಹುಟ್ಟಿಸುವುದು ಎಂತಹ ಹೊಣೆಗೇಡಿತನ !

ಹಲವಾರು ದೇಶಗಳಲ್ಲಿ ಸಾರ್ವಜನಿಕ ಕ್ಷೇತ್ರದ ಆಸ್ಪತ್ರೆಗಳು ಅತ್ಯುತ್ತಮ ಸೇವೆ ಸಲ್ಲಿಸುತ್ತಿರುವ ಉದಾಹರಣೆಗಳು ಸಾಕಷ್ಟಿವೆ. ಹಿಂದಿನ ಸೋವಿಯೆತ್ ಯೂನಿಯನ್‌ನಲ್ಲಿ ಇಡೀ ಆರೋಗ್ಯಕ್ಷೇತ್ರವು ಸಾರ್ವಜನಿಕ ಕ್ಷೇತ್ರದಲ್ಲಿ ಇದ್ದುದಷ್ಟೇ ಅಲ್ಲ, ಅಲ್ಲಿಯ ವಿಜ್ಞಾನಿಗಳು ಅನೇಕ ಹೊಸ ರೀತಿಯ ಚಿಕಿತ್ಸಾ ಕ್ರಮಗಳನ್ನು ವಿಶ್ವಕ್ಕೆ ಕೊಡುಗೆಯಾಗಿ ನೀಡಿದ್ದರು. ಇಂಗ್ಲೆಂಡ್ ದೇಶದಲ್ಲಿ ಕೂಡ ಆರೋಗ್ಯಸೇವೆ ಸರ್ಕಾರದ ವಶದಲ್ಲಿದ್ದರೂ ಅದು ಉತ್ತಮ ಸೇವೆ ಸಲ್ಲಿಸುತ್ತಿದೆ ಎಂದು ಹೆಸರು ಪಡೆದಿದೆ. ಕ್ಯೂಬಾದಂತಹ ಅತಿ ಪುಟ್ಟ ದೇಶದಲ್ಲಿ ಸಾರ್ವಜನಿಕ ಕ್ಷೇತ್ರದ ಆರೋಗ್ಯಸೇವೆ ಯಾವುದೇ ಮುಂದುವರಿದ ದೇಶದಲ್ಲಿನ ಸೇವೆಗಿಂತ ಕಡಿಮೆಯಿಲ್ಲ ಎಂಬ ಪ್ರಶಂಸೆಗೆ ಪಾತ್ರವಾಗಿದೆ. ಅಂದ ಮೇಲೆ ನಮ್ಮ ದೇಶಕ್ಕೆ ಸಾರ್ವಜನಿಕ ಕ್ಷೇತ್ರದ ಆರೋಗ್ಯ ಸೇವೆ ಅಗತ್ಯವಿಲ್ಲ ಎಂಬಂತೆ ವರ್ತಿಸುತ್ತಿರುವ ನಮ್ಮ ಸರ್ಕಾರದ ನಿಲುವು ಜನಪರ ಕಾಳಜಿಯನ್ನು ಪ್ರತಿಬಿಂಬಿಸುತ್ತಿದೆಯೇ ?

**ವೈದ್ಯರ ಜವಾಬ್ದಾರಿ**

ಕಾರ್ಪೊರೇಟ್ ಆಸ್ಪತ್ರೆಗಳಲ್ಲಿ ಕೆಲಸ ಮಾಡುವ ವೈದ್ಯರು ವಿವಿಧ ರೀತಿಯ ಒತ್ತಡಗಳಿಗೆ ಒಳಗಾಗುತ್ತಾರೆ ಎಂಬುದು ನಿಜ. ತಿಂಗಳಿಗೆ ಇಷ್ಟು ಆಪರೇಷನ್‌ಗಳನ್ನು






ಮಾಡಬೇಕು ಅಥವಾ ಇಂತಿಷ್ಟು ದುಬಾರಿಯಾದ ಪರೀಕ್ಷೆಗಳನ್ನು ಮಾಡಿಸಬೇಕು ಎಂದು ಮ್ಯಾನೇಜ್‌ಮೆಂಟ್ ಅವರಿಗೆ ತಾಕೀತು ಮಾಡುತ್ತದೆ. ಆ ಗುರಿಯನ್ನು ಮುಟ್ಟಲಾರದವರಿಗೆ ಅಲ್ಲಿ ಜಾಗವಿಲ್ಲ. ಅತ್ಯಂತ ಪರಿಶ್ರಮಪಟ್ಟು ಓದಿ ಉನ್ನತ ಶಿಕ್ಷಣ ಪಡೆದುಬಂದ ಎಲ್ಲ ವೈದ್ಯರಿಗೂ ಬೇರೆ ಕಡೆ ಅವಕಾಶ ದೊರೆಯುವುದಿಲ್ಲ. ಹಾಗಾಗಿ ಅನೇಕರು ಪರಿಸ್ಥಿತಿಯ ಕೈಗೊಂಬೆಗಳಾಗಿ ಇಲ್ಲಿ ಸಿಕ್ಕಿಹಾಕಿಕೊಂಡಿರುತ್ತಾರೆ. ಒತ್ತಡ ತಡೆಯಲಾರದೆ ಕೆಲಸವನ್ನು ಬಿಟ್ಟುಹೋಗಿರುವ ವೈದ್ಯರನ್ನು ನಾನು ನೋಡಿದ್ದೇನೆ. ಕಷ್ಟದಲ್ಲಿರುವ ರೋಗಿಗಳಿಗೆ ಔದಾರ್ಯ ತೋರಿಸಲು ಹೋಗಿ ಮ್ಯಾನೇಜ್‌ಮೆಂಟಿನ ಕೋಪಕ್ಕೆ ಗುರಿಯಾದವರೂ ಇದ್ದಾರೆ. ದುರಾಸೆಯಿಂದ ತಾವೂ ಮೇಲಿನವರ ಜೊತೆ ಶಾಮೀಲಾಗಿರುವ ವೈದ್ಯರೂ ಇಲ್ಲವೆಂದಲ್ಲ. ಆದರೆ ಎಲ್ಲ ಸಮಸ್ಯೆಗಳಿಗೂ ವೈದ್ಯರೇ ಕಾರಣ ಎಂದು ಅವರನ್ನು ದೂಷಿಸುವುದು ಸರಿಯಲ್ಲ. ಅದರ ಜೊತೆಗೆ ಇನ್ನೊಂದು ಮಾತು. ವೈದ್ಯರ ಜವಾಬ್ದಾರಿ ಬಹಳ ಹಿರಿದು. ವೈದ್ಯಕೀಯ ವಿಜ್ಞಾನವೆಂಬುದು ಸೇವೆಯ ಕ್ಷೇತ್ರ. ಇದು ಇಂದಿನ ಮಟ್ಟಕ್ಕೆ ಬೆಳೆಯಲು ಅದೆಷ್ಟೋ ಜನರ ತ್ಯಾಗ, ಬಲಿದಾನಗಳ ಪಾತ್ರವಿದೆ. ಆದುದರಿಂದ ವೈದ್ಯರಾದವರು ತಮ್ಮ ವೃತ್ತಿನೈತಿಕತೆಗೆ ಕುಂದುಬಾರದಂತೆ ಕಾರ್ಯ ನಿರ್ವಹಿಸಬೇಕೆಂಬುದು ಜನರ ಆಶಯ. ಅದನ್ನವರು ಖಂಡಿತವಾಗಿ ಮರೆಯಬಾರದು.

**ನಾವೇನು ಮಾಡಬಲ್ಲೆವು ?**

ಸರ್ಕಾರಿ ಆಸ್ಪತ್ರೆಗಳ ದುಃಸ್ಥಿತಿಯಿಂದಾಗಿ ಇಂದು ಅನೇಕ ಜನ ಕಾರ್ಪೊರೇಟ್ ಆಸ್ಪತ್ರೆಗಳಿಗೆ ಶರಣುಹೋಗಬೇಕಾಗಿದೆ. ಆದರೆ ಸರ್ಕಾರಿ ಆಸ್ಪತ್ರೆಗಳಲ್ಲಿ ಇಂದಿಗೂ ಹಲವು ಉತ್ತಮ ವೈದ್ಯರು ಸೇವೆ ಸಲ್ಲಿಸುತ್ತಿದ್ದಾರೆ. ಹಾಗಾಗಿ ಅಲ್ಲಿ ಕೂಡ ಉತ್ತಮ ಆರೈಕೆ ದೊರೆಯುವ ಸಾಧ್ಯತೆಯನ್ನು ತಳ್ಳಿಹಾಕಲು ಸಾಧ್ಯವಿಲ್ಲ. ಜನ ತಮ್ಮ ಆರೋಗ್ಯ ಸಮಸ್ಯೆಯ ಚಿಕಿತ್ಸೆಗಾಗಿ ಹುಡುಕಾಟ ನಡೆಸುವಾಗ ಕೆಲವು ಅಂಶಗಳನ್ನು ಗಮನದಲ್ಲಿಡಬೇಕಾಗುತ್ತದೆ. ಖಾಸಗಿ ಆಸ್ಪತ್ರೆಗಳು ನಡೆಸುವ ಬಣ್ಣದ ಪ್ರಚಾರಗಳ ಬಗ್ಗೆ ಎಚ್ಚರವಿರಬೇಕು. ಹಾಗೆಯೇ ದುಬಾರಿ ಚಿಕಿತ್ಸೆ ಅಂದರೆ ಉತ್ತಮವೆಂದೂ ಅರ್ಥವಲ್ಲ. ಚಿಕಿತ್ಸೆಯಲ್ಲಿ ಉತ್ತಮ ಪರಿಣತಿ ಹೊಂದಿದ ಮತ್ತು ರೋಗಿಗಳ ಬಗ್ಗೆ ಕಾಳಜಿಯಿರುವ ವೈದ್ಯರ ಬಗ್ಗೆ ತಿಳಿದುಕೊಳ್ಳಿ. ನಿಮ್ಮ ಹಿತೈಷಿಗಳು, ಕುಟುಂಬದ ವೈದ್ಯರು ಮುಂತಾದವರು ಈ ಕುರಿತು ಉಪಯುಕ್ತ ಮಾಹಿತಿ ನೀಡಬಹುದು. ಸರ್ಕಾರಿ ಆಸ್ಪತ್ರೆಗಳಲ್ಲಿ ಉತ್ತಮ ವೈದ್ಯರು ಹಾಗೂ ಚಿಕಿತ್ಸೆ ಲಭ್ಯವಿದ್ದರೆ ಅದನ್ನು ಬಳಸಿಕೊಳ್ಳಲು ಹಿಂಜರಿಯಬಾರದು. ಅಷ್ಟೇ ಅಲ್ಲದೆ ಸರ್ಕಾರ ಈ ಆಸ್ಪತ್ರೆಗಳನ್ನು ಸುಧಾರಣೆ ಮಾಡಬೇಕೆಂದು ಜನಪ್ರತಿನಿಧಿಗಳು, ಸಂಘ-ಸಂಸ್ಥೆಗಳ ಮೂಲಕ ಒತ್ತಾಯವನ್ನು ತರುವುದು ಕೂಡ ನಮ್ಮೆಲ್ಲರ ಜವಾಬ್ದಾರಿಯಾಗಿರುತ್ತದೆ ಎಂಬುದನ್ನು ಮರೆಯಬಾರದು.

**ಡಾ॥ ಸುರೇಶ್ ಹೆಗ್ಡೆ**
'ಆನಂದ ಕ್ಲಿನಿಕ್', ನಂ. ೧೭೮, ೧ನೇ ಮುಖ್ಯರಸ್ತೆ
ಬಿ.ಇ.ಎಂ.ಎಲ್. ಲೇಔಟ್
ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯





# ನೀಲಿಕ್ರಾಂತಿ ರೂವಾರಿಗೆ ವಿಶ್ವ ಆಹಾರ ಪ್ರಶಸ್ತಿ

**ಮೊದಡುಗು ವಿ. ಗುಪ್ತ ೧೭ ಆಗಸ್ಟ್ ೧೯೩೯ರಂದು ಬಾಪಟ್ಲದಲ್ಲಿ ಜನಿಸಿದರು. ವಿದ್ಯಾಭ್ಯಾಸದಲ್ಲಿ ಯಾವಾಗಲೂ ಮುಂದಿದ್ದ ಗುಪ್ತ, ಕಲ್ಕತ್ತಾ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದರು. ಇಂಡಿಯನ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚ್ ಸಂಸ್ಥೆಯಲ್ಲಿ ಸಹಾಯಕ ವಿಜ್ಞಾನಿಯಾಗಿ ಸೇರಿದರು. ನಿಷ್ಠೆ ಹಾಗೂ ಪರಿಶ್ರಮದಿಂದ ಹಂತ ಹಂತವಾಗಿ ವೃತ್ತಿಯಲ್ಲಿ ಮೇಲೇರಿ ಕೊನೆಗೆ ಮಲೇಷ್ಯಾದಲ್ಲಿ ಅಂತರರಾಷ್ಟ್ರೀಯ ಸಂಬಂಧಗಳು ಹಾಗೂ ಪಾಲುಗಾರಿಕೆ ಎಂಬ ಸಂಸ್ಥೆಯ ಸಹಾಯಕ ನಿರ್ದೇಶಕರಾದರು. ಈ ಮಧ್ಯೆ ಥೈಲ್ಯಾಂಡ್, ಲಾವೋಸ್, ಬಾಂಗ್ಲಾದೇಶಗಳಲ್ಲಿ ಸಂಯುಕ್ತರಾಷ್ಟ್ರದ ವತಿಯಿಂದ ಸೇವೆ ಸಲ್ಲಿಸಿದರು. ಅವರ ಕಾರ್ಯಕ್ಷೇತ್ರ ಜಲಕೃಷಿ. ಭಾರತ ಹಾಗೂ ಏಷ್ಯಾದ ಇತರ ರಾಷ್ಟ್ರಗಳಲ್ಲಿ ಜಲಕೃಷಿ ತಂತ್ರಜ್ಞಾನವನ್ನು ಅಳವಡಿಸಿ ನೀಲಿಕ್ರಾಂತಿಗೆ ನಾಂದಿ ಹಾಡಿದರು.**

**ಡಾ|| ಎಮ್. ಎಸ್. ಎಸ್. ಮೂರ್ತಿ**

ಅಕ್ಟೋಬರ್ ೧೩, ೨೦೦೫ರಂದು ಅಮೆರಿಕಾದ ಅಯೋವ ಸಂಸ್ಥಾನದ ರಾಜಧಾನಿಯಲ್ಲಿ ಅಲ್ಲಿನ ರಾಜ್ಯಪಾಲರ ಸಮ್ಮುಖದಲ್ಲಿ ಒಂದು ಥಳಥಳಿಸುವ ಸಮಾರಂಭ. ಅದರ ವಿಶಿಷ್ಟತೆ ಏನೆಂದರೆ ಭಾರತೀಯ ಕೃಷಿ ವಿಜ್ಞಾನಿ ಡಾ|| ಎಮ್. ವಿ. ಗುಪ್ತ ಅವರಿಗೆ ಈ ವರ್ಷದ ಪ್ರತಿಷ್ಠಿತ ವಿಶ್ವ ಆರೋಗ್ಯ ಪ್ರಶಸ್ತಿ ನೀಡಲಾಯಿತು. ವಿಶ್ವ ಆಹಾರ ಸಂಸ್ಥೆಯ ಅಧ್ಯಕ್ಷ ಅಂಬಾಸಿಡರ್ ಕ್ವಿನ್ ಅವರು ''ಬಾಂಗ್ಲಾದೇಶ್, ಲಾವೋಸ್, ಮತ್ತು ಆಗ್ನೇಯ ಏಷ್ಯಾದ ರಾಷ್ಟ್ರಗಳಲ್ಲಿ ಡಾ|| ಗುಪ್ತ ಅವರು ಮೀನುಸಾಕಣೆ ಮತ್ತು ಮತ್ಸ್ಯ ಅಭಿವೃದ್ಧಿ ಕಾರ್ಯಗಳ ಮೂಲಕ ನೀಲಿಕ್ರಾಂತಿಯನ್ನು ಲಕ್ಷಾಂತರ ಬಡ ಸಂಸಾರಗಳ ಮಡಿಲಿಗೆ ತಂದು ಅವರ ಜೀವನಕ್ಕೆ ಆಧಾರವಾಗುವಂತೆ ನಿರಂತರವಾಗಿ ಶ್ರಮಿಸಿದ್ದಾರೆ'' ಎಂದು ಪ್ರಶಂಸಿಸಿದರು.

ನೀವು ಹಸಿರುಕ್ರಾಂತಿ, ಬಿಳಿಕ್ರಾಂತಿ ಇವುಗಳ ಬಗ್ಗೆ ಕೇಳಿರಬಹುದು. ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ, ಅಂದಿನ ಕೃಷಿ ವ್ಯವಸ್ಥೆ, ಬೆಳೆಯುತ್ತಿದ್ದ ಜನಸಂಖ್ಯೆಗೆ ಸಾಕಷ್ಟು ಆಹಾರ ಧಾನ್ಯಗಳನ್ನು ಉತ್ಪಾದಿಸಲು ಹೆಣಗಾಡುತ್ತಿತ್ತು. ಮಾಲ್ಥೂಸಿಯನ್ ಸಿದ್ಧಾಂತದ ಪ್ರಕಾರ ಹತ್ತೊಂಬತ್ತನೇ ಶತಮಾನದಲ್ಲೇ ತೋರಬೇಕಾಗಿದ್ದ ಭೀಕರ ಬರ ಈಗ ಜಯಭೇರಿ ಹೊಡೆಯ ಬಹುದೆಂಬ ಆತಂಕ ಎಲ್ಲರನ್ನೂ ಕಾಡುತ್ತಿತ್ತು. ಆದರೆ ಕೃಷಿ ವಿಜ್ಞಾನದಲ್ಲಾದ ಮುನ್ನಡೆಗಳು – ಅಧಿಕ ಇಳುವರಿಯ ತಳಿಗಳು, ಮಳೆಯ ಅಭಾವದಲ್ಲೂ ಬೆಳೆಯತಕ್ಕ ತಳಿಗಳು, ಶೀಘ್ರ ಫಲಕೊಡುವ ತಳಿಗಳು, ಇತ್ಯಾದಿ – ಬಳಕೆಗೆ ಬಂದು ವಿಶ್ವದ ಆಹಾರ ಉತ್ಪಾದನೆಯನ್ನು ಬಹುಮಟ್ಟಿಗೆ ಸುಧಾರಿಸಿ, ಬರದ ಭಯವನ್ನು ಹಿಂದೆ ತಳ್ಳಲು ಸಾಧ್ಯವಾಯಿತು. ಅದು ಹಸಿರುಕ್ರಾಂತಿ ಎಂದು ಪ್ರಸಿದ್ಧವಾಯಿತು. ಅದೇ ರೀತಿ ಭಾರತದಲ್ಲಿ ಹೈನುಗಾರಿಕೆಯನ್ನು ವೈಜ್ಞಾನಿಕವಾಗಿ ಉತ್ತಮಪಡಿಸಿ, ಹಾಲಿನ ಇಳುವರಿಯನ್ನು ಹೆಚ್ಚಿಸಿ ಬಿಳಿಕ್ರಾಂತಿ ಅಥವಾ ಕ್ಷೀರಕ್ರಾಂತಿಯನ್ನು ತಂದ ಕೀರ್ತಿ ವರ್ಘೀಸ್ ಕುರಿಯನ್ ಅವರಿಗೆ ಸಲ್ಲುತ್ತದೆ. ಈಗ ಕೃಷಿ ಮತ್ತು ಆಹಾರ ಕ್ಷೇತ್ರದಲ್ಲಾದ ಮೂರನೇ ಕ್ರಾಂತಿ – ನೀಲಿಕ್ರಾಂತಿ ಅಥವಾ ಮತ್ಸ್ಯಕ್ರಾಂತಿ. ಅದರ ರೂವಾರಿ ಡಾ|| ಗುಪ್ತ.

ಮೊದಡುಗು ವಿ. ಗುಪ್ತ ೧೭ ಆಗಸ್ಟ್ ೧೯೩೯ರಂದು ಬಾಪಟ್ಲದಲ್ಲಿ ಜನಿಸಿದರು. ವಿದ್ಯಾಭ್ಯಾಸದಲ್ಲಿ ಯಾವಾಗಲೂ ಮುಂದಿದ್ದ ಗುಪ್ತ, ಕಲ್ಕತ್ತಾ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದರು. ಇಂಡಿಯನ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚ್ ಸಂಸ್ಥೆಯಲ್ಲಿ ಸಹಾಯಕ ವಿಜ್ಞಾನಿಯಾಗಿ ಸೇರಿದರು. ನಿಷ್ಠೆ ಹಾಗೂ ಪರಿಶ್ರಮದಿಂದ ಹಂತಹಂತವಾಗಿ ವೃತ್ತಿಯಲ್ಲಿ ಮೇಲೇರಿ ಕೊನೆಗೆ ಮಲೇಷ್ಯಾದಲ್ಲಿ ಅಂತರರಾಷ್ಟ್ರೀಯ ಸಂಬಂಧಗಳು ಹಾಗೂ ಪಾಲುಗಾರಿಕೆ ಎಂಬ ಸಂಸ್ಥೆಯ ಸಹಾಯಕ ನಿರ್ದೇಶಕರಾದರು. ಈ ಮಧ್ಯೆ ಥೈಲ್ಯಾಂಡ್, ಲಾವೋಸ್, ಬಾಂಗ್ಲಾದೇಶಗಳಲ್ಲಿ ಸಂಯುಕ್ತರಾಷ್ಟ್ರದ ವತಿಯಿಂದ ಸೇವೆ ಸಲ್ಲಿಸಿದರು. ಅವರ ಕಾರ್ಯಕ್ಷೇತ್ರ ಜಲಕೃಷಿ. ಭಾರತ ಹಾಗೂ ಏಷ್ಯಾದ ಇತರ ರಾಷ್ಟ್ರಗಳಲ್ಲಿ ಜಲಕೃಷಿ ತಂತ್ರಜ್ಞಾನವನ್ನು ಅಳವಡಿಸಿ ನೀಲಿಕ್ರಾಂತಿಗೆ ನಾಂದಿ ಹಾಡಿದರು.

## ನೀಲಿಕ್ರಾಂತಿ

ನೀಲಿಕ್ರಾಂತಿಯ ಮಹತ್ವವೇನು ? ಏಷ್ಯಾ, ಶಾಂತಿ ಸಾಗರ ಮತ್ತು ಆಫ್ರಿಕಾದ ಲಕ್ಷಾಂತರ ಬಡಜನರಿಗೆ ಮೀನು ಒಂದು ಅವಶ್ಯವಾದ ಆಹಾರ. ಅದು ಅವರ ನಿತ್ಯದ ಪ್ರೋಟೀನ್. ವಿಟಮಿನ್ ಮತ್ತು ಇತರ ಸೂಕ್ಷ್ಮ ಪೋಷಕಾಂಶಗಳು ಬೇಡಿಕೆಯಲ್ಲಿ ಅರ್ಧದಷ್ಟನ್ನು ಪೂರೈಸುತ್ತವೆ. ೧೯೭೦ರ ದಶಕದಲ್ಲಿ ಏರುತ್ತಿರುವ ಬೇಡಿಕೆಯನ್ನು ಪೂರೈಸಲು ಬೆಸ್ತರು ಸಮುದ್ರದ ತಳವನ್ನೆಲ್ಲಾ ಶೋಧಿಸಿ, ಮೀನು ಹಿಡಿಯಲಾರಂಭಿಸಿದರು. ಕ್ರಮೇಣ ಸಮುದ್ರದ ಉತ್ಪಾದನೆ ಕಡಿಮೆಯಾಗಿ, ಮೀನಿನ ಬೆಲೆ ಗಗನಕ್ಕೇರಿ ಬಡವರಿಗೆ ಅದನ್ನು ಕೊಳ್ಳುವುದು ಅಸಾಧ್ಯವಾಯಿತು. ಮೀನಿನ ಉತ್ಪಾದನೆಯನ್ನು ಹೆಚ್ಚಿಸಿ ಪರಿಸ್ಥಿತಿಯನ್ನು ನಿಯಂತ್ರಿಸಲು ಆಗ ಇದ್ದ ಒಂದೇ ಮಾರ್ಗವೆಂದರೆ ಜಲಕೃಷಿ (ಆಕ್ವಾಕಲ್ಚರ್) – ಸಿಹಿನೀರಿನಲ್ಲಿ ಮೀನು ವೃದ್ಧಿಪಡಿಸುವುದು. ಆದರೆ ಸರ್ಕಾರಗಳು ಕೈಕೊಂಡ ಜಲಕೃಷಿ ಕಾರ್ಯಗಳು ಸಿರಿವಂತ ಕೃಷಿಕರಿಗೆ ಹಾಗೂ ಶ್ರೀಮಂತ ಗ್ರಾಹಕರಿಗೆ ಮಾತ್ರ ಎಟುಕುವಂತಿತ್ತು. ಏಕೆಂದರೆ ಅದರಿಂದ ಉತ್ಪತ್ತಿಯಾಗುತ್ತಿದ್ದದ್ದು ದುಬಾರಿ ಶ್ರಿಂಪ್ ಜಾತಿಯ ಮೀನುಗಳು. ಡಾ|| ಗುಪ್ತ ಅವರಿಗೆ ಆರಂಭದಲ್ಲೇ ಈ ನ್ಯೂನತೆಯ ಅರಿವಾಯಿತು. ''ಬರೆ ವಿಜ್ಞಾನ ಬೋಧಿಸುವುದರಿಂದ ಗ್ರಾಮೀಣ ಜನರ ಉದ್ಧಾರವಾಗದು. ಅದು ಆಗಬೇಕಾದರೆ, ಆ ಜನರಿಗೆ ಅವಶ್ಯವಾದ ಯೋಜನೆಗಳನ್ನು ವೈಜ್ಞಾನಿಕವಾಗಿ ನಿರೂಪಿಸಬೇಕು''



**ಗೂಳಿ**

**ಭೂ**ಮಿಯನ್ನು ಬಿರಿದು
ಏಳುತ್ತಿರುವ ಗೂಳಿ

ಗೋಡೆಯ ಕೆತ್ತನೆಯ ಮೇಲೆ

ಸಾವಿನ ಬಳಿಗೆ ನೆಗೆಯಲು ಸಿದ್ಧವಿರುವ
ಜೀವಕ್ಕೆ ಮಾತ್ರ
ಜೀವನದ ಹೃದಯ
ತನ್ನೆಲ್ಲ ಸೌಂದರ್ಯದಲ್ಲಿ
ತೆರೆದುಕೊಳ್ಳುತ್ತವೆ.

ಅಂಕುರ್ ಬೆಟಗೇರಿ
೧೦೬, ಇ.ಎ.ಟಿ. ರಸ್ತೆ, ಬಸವನಗುಡಿ, ಬೆಂಗಳೂರು - ೪

ಎಂಬುದು ಅವರ ವೃತ್ತಿ ಧೋರಣೆಯಾಗಿತ್ತು. ಹಾಗಾಗಿ ಸುಲಭವಾಗಿ ಲಭ್ಯವಿರುವ ಸಂಪನ್ಮೂಲಗಳನ್ನೇ ಬಳಸಿಕೊಂಡು ದುಬಾರಿಯಲ್ಲದ, ಆದರೆ ಹೆಚ್ಚು ಇಳುವರಿ ಕೊಡುವ ಜಲಕೃಷಿ ವಿಧಾನಗಳನ್ನು ಯೋಜಿಸಿದರು. ಅವರ ಯೋಜನೆಗಳಲ್ಲಿ ಎರಡು ವೈಶಿಷ್ಟ್ಯಗಳು. ಮೊದಲನೆಯದಾಗಿ, ಕೃಷಿ ತ್ಯಾಜ್ಯಗಳು ಮತ್ತು ಹೊಲಗದ್ದೆಗಳಲ್ಲಿ ಬೆಳೆಯುವ ಕಳೆ ಇವುಗಳನ್ನೇ ಮೀನಿಗೆ ಆಹಾರವಾಗಿ ಬಳಸುವುದು. ಎರಡನೆಯದಾಗಿ, ಒಂದೇ ಹೊಂಡದಲ್ಲಿ ವಿಧವಿಧವಾದ ಆಹಾರ ಸೇವಿಸುವ ಅನೇಕ ಜಾತಿಯ ಮೀನುಗಳನ್ನು ಬೆಳೆಸುವುದು. ಅದರಿಂದ ಹೊಂಡಕ್ಕೆ ಹಾಕಿದ ಆಹಾರದ ಸಂಪೂರ್ಣ ಉಪಯೋಗವಾಗಿ, ಇಳುವರಿ ಜಾಸ್ತಿಯಾಗುತ್ತಿತ್ತು. ಯೋಜನೆ ಸರಳವಾದರೂ ಫಲಿತಾಂಶ ಅದ್ಭುತವಾಗಿತ್ತು. ಭಾರತದಲ್ಲಿ ಹೆಕ್ಟೇರಿಗೆ ಅರ್ಧ ಟನ್ ಅಷ್ಟು ಇದ್ದ ಮೀನು ಇಳುವರಿ ಕೆಲವೇ ಕಾಲದಲ್ಲಿ ಎರಡು ಟನ್ನಿಗೂ ಮಿಗಿಲಾಯಿತು. ಕೆಲವು ಪ್ರದೇಶಗಳಲ್ಲಿ ಹತ್ತು ಟನ್ ಇಳುವರಿಯೂ ಸಾಧ್ಯವಾಯಿತು. ಮತ್ತೊಮ್ಮೆ ಮೀನು ಸಮೃದ್ಧವಾಗಿ ದೊರೆತು, ಬಡವರೂ ಗ್ರಾಮೀಣರೂ ಕೊಳ್ಳುವಂತಾಯಿತು.

ಭಾರತದಲ್ಲಿ ಕಂಡ ಸಫಲತೆಯಿಂದಾಗಿ, ಅದೇ ರೀತಿಯ ತಂತ್ರಜ್ಞಾನವನ್ನು ಏಷ್ಯಾದ ಇತರ ರಾಜ್ಯಗಳಲ್ಲೂ ಜಾರಿಗೆ ತರಲು ಡಾ॥ ಗುಪ್ತ ಸಹಕರಿಸಿದರು. ಮೇಕಾಂಗ್ ನದಿಯ ತಪ್ಪಲು ಪ್ರದೇಶಗಳಾದ ಲಾವೋಸ್, ವಿಯಟ್ನಾಮ್, ಥೈಲ್ಯಾಂಡ್‌ಗಳಲ್ಲಿ ಶೀಘ್ರವಾಗಿ ಬೆಳೆಯುವ ಜಾತಿಯ ಮೀನಿಗಾಗಿ ಕೃಷಿಕರು ಬಹಳ ಪ್ರಯತ್ನಿಸುತ್ತಿದ್ದರು. ಆದರೆ ಅದು ಸಾಧ್ಯವಾಗಿರಲಿಲ್ಲ. ಡಾ॥ ಗುಪ್ತ ಅಲ್ಲಿನ ಪರಿಸರವನ್ನು ಕೂಲಂಕಷವಾಗಿ ಅಧ್ಯಯನಮಾಡಿ, ಭಾರತದಲ್ಲಿ ಕಂಡುಬರುವ ಶೀಘ್ರ ಬೆಳವಣಿಗೆಯ ಕ್ಯಾಪ್ ಜಾತಿಯ ಮೀನು ಆ ಪರಿಸರಕ್ಕೆ ಒಗ್ಗಬಹುದೆಂದು ತಿಳಿದು ಅಲ್ಲಿನ ಜನರಿಗೆ ಅದನ್ನು ಬೆಳೆಯುವ ವಿಧಾನವನ್ನು ತೋರಿಸಿಕೊಟ್ಟರು. ಇಂದು ಉತ್ತರ ವಿಯಟ್ನಾಮಿನ ಒಟ್ಟು ಮತ್ಸ್ಯಕೃಷಿಯಲ್ಲಿ ಶೇಕಡ ೩೦ರಿಂದ ೪೦ರಷ್ಟು ಡಾ॥ ಗುಪ್ತ ಪರಿಚಯಿಸಿದ ಭಾರತದ ಕ್ಯಾಪ್ ಜಾತಿಯ ಮೀನು.

ಅವರ ಮುಂದಿನ ಕಾರ್ಯಕ್ಷೇತ್ರ ಬಾಂಗ್ಲಾದೇಶ್. ೧೯೮೦ರ ದಶಕದಲ್ಲಿ ಸಂಯುಕ್ತರಾಷ್ಟ್ರದ ಖಾದ್ಯ ಹಾಗೂ ಕೃಷಿ ಸಂಸ್ಥೆ ಗುಪ್ತ ಅವರನ್ನು ಬಾಂಗ್ಲಾದೇಶದಲ್ಲಿ ಜಲಕೃಷಿಯನ್ನು ವೃದ್ಧಿಪಡಿಸಲು ಸಹಕರಿಸಬೇಕೆಂದು ಕೋರಿತು. ಅಲ್ಲಿ ಸಹಸ್ರಾರು ಹೊಂಡಗಳು, ಕೆರೆಗಳು, ಕಾಲುವೆಗಳು ಮೀನು ಸಾಕಣೆಕೆಯ ದೃಷ್ಟಿಯಿಂದ ನಿರುಪಯೋಗವಾಗಿದ್ದವು. ಒಂದು ವರದಿಯ ಪ್ರಕಾರ ಹತ್ತು ಲಕ್ಷಕ್ಕೂ ಹೆಚ್ಚಿನ ಸಿಹಿನೀರಿನ ಕೂಪಗಳನ್ನು ಗುರುತಿಸಿ, ಅವುಗಳ ಪರಿಸರ, ನೀರಿನ ಪರಿಮಾಣ, ಗುಣಲಕ್ಷಣಗಳು, ಎಲ್ಲವನ್ನೂ ವಿಶದವಾಗಿ ಪರಿಶೀಲಿಸಿ ಅವುಗಳನ್ನು ಮೀನು ಸಾಕಣೆಕೆಗೆ ಯೋಗ್ಯವನ್ನಾಗಿ ಮಾಡಿದರು. ದುಬಾರಿ ಮೀನಿನ ಆಹಾರವನ್ನು ಮಾರುಕಟ್ಟೆಯಲ್ಲಿ ಕೊಳ್ಳುವ ಬದಲು ಸ್ಥಳದಲ್ಲೇ ಲಭ್ಯವಿರುವ ಸಸ್ಯ ಹಾಗೂ ಇತರ ತ್ಯಾಜ್ಯಗಳನ್ನೇ ಆಹಾರವಾಗಿ ಬಳಸಬಹುದೆಂದು ತೋರಿಸಿಕೊಟ್ಟರು. ಇದೆಲ್ಲದರ ಫಲವಾಗಿ ಇಂದು ಬಾಂಗ್ಲಾದೇಶದಲ್ಲಿ ಸಹಸ್ರಾರು ನೀರಿನ ತಾಣಗಳು ಮೀನುಗಳಿಂದ ತುಂಬಿವೆ!

ಡಾ॥ ಗುಪ್ತ ಅವರ ಶ್ರಮ ಕೇವಲ ಮೀನು ಸಾಕಣೆಕೆಗೆ ಮಾತ್ರ ಸೀಮಿತವಾಗಿರಲಿಲ್ಲ. ಕೃಷಿ ಮಾಡಿದ ಮೀನನ್ನು ಲಾಭದಾಯಕವಾಗಿ ವಿಕ್ರಯಿಸಲು ಅನುಕೂಲವಾಗುವಂತೆ ಮಾರುಕಟ್ಟೆಯ ಜಾಲವನ್ನೇ ಸೃಷ್ಟಿಸಿದರು. ಸರ್ಕಾರದ ಇಲಾಖೆಗಳ ಇತಿಮಿತಿಗಳನ್ನು ಚೆನ್ನಾಗಿ ಅರಿತಿದ್ದ ಗುಪ್ತ, ಆದಕ್ಕಾಗಿ ಸರ್ಕಾರೇತರ ಸಂಸ್ಥೆಗಳನ್ನು ಆ ಜಾಲದಲ್ಲಿ ತಂದರು. ಆ ಸಂಸ್ಥೆಗಳು ಮುಖ್ಯವಾಗಿ ಗ್ರಾಮೀಣ ಸ್ತ್ರೀಯರನ್ನು ಗುರಿಯಾಗಿಟ್ಟುಕೊಂಡಿದ್ದುದರಿಂದ ಇಂದು ಬಾಂಗ್ಲಾದೇಶದ ಜಲಕೃಷಿಯಲ್ಲಿ ಶೇಕಡ ೬೦ರಷ್ಟು ಸ್ತ್ರೀಯರದೇ ಕೈವಾಡ. ಅಲ್ಲದೆ ಹೊಸ ಕೃಷಿಕರಿಗೆ ತರಬೇತಿ ನೀಡಲು ಸಾಧ್ಯವಾಗುವಂತೆ ೩೦೦ ವಿಜ್ಞಾನಿಗಳ ಒಂದು ಅಂತರರಾಷ್ಟ್ರೀಯ ತರಬೇತಿ ಕೇಂದ್ರವನ್ನು ಸೃಷ್ಟಿಸಿ, ತಾವು ಆರಂಭಿಸಿದ ಕೆಲಸವು ನಿರಂತರವಾಗಿ ನಡೆದುಕೊಂಡು ಹೋಗುವಂತೆ ಏರ್ಪಾಡುಮಾಡಿದರು.

೧೯೯೦ರ ದಶಕದಲ್ಲಿ ಡಾ॥ ಗುಪ್ತ ತಳಿಗಳನ್ನು ಹೊಂದಾಣಿಕೆ ಮಾಡುವ ಅಂತರರಾಷ್ಟ್ರೀಯ ಸಂಸ್ಥೆಯ ವತಿಯಿಂದ ಮೀನು ಉತ್ಪಾದನೆಯನ್ನು ಮತ್ತಷ್ಟು ವೃದ್ಧಿಪಡಿಸಲು ತಳಿವಿಜ್ಞಾನದ ಅಧ್ಯಯನಕ್ಕೆ ಬುನಾದಿ ಹಾಕಿದರು. ಏಷ್ಯಾ ಮತ್ತು ಶಾಂತಿಸಾಗರದ ಹದಿಮೂರು ರಾಷ್ಟ್ರಗಳು ಈ ಸಂಸ್ಥೆಯ ಸದಸ್ಯರು. ಅಲ್ಲದೇ ಅನೇಕ ವಿಖ್ಯಾತ ಪ್ರಯೋಗಾಲಯಗಳೂ ಕೈಜೋಡಿಸಿವೆ. ಹಾಗಾಗಿ ಈಗ ಹೆಚ್ಚು ಇಳುವರಿ ಕೊಡುವ ಅನೇಕ ಹೊಸ ತಳಿಗಳನ್ನು ಈ ರಾಷ್ಟ್ರಗಳು ಅಭಿವೃದ್ಧಿಪಡಿಸುತ್ತಿವೆ. ಉದಾಹರಣೆಗೆ, ಫಿಲಿಪೈನ್ಸ್‌ನಲ್ಲಿ ಟಿಲಾಪಿಯ ಎಂಬ ಸುಧಾರಿತ ತಳಿ ಈಗ ಪ್ರತಿವರ್ಷ ಸುಮಾರು ೨೫,೦೦೦ ಟನ್ ಉತ್ಪಾದನೆಗೆ ಕಾರಣವಾಗಿದೆ.

ಅವರ ಸುಮಾರು ಮೂವತ್ತು ವರ್ಷಗಳ ಪರಿಶ್ರಮದ ಸಮಗ್ರ ಫಲವೇನು? ವಿಶ್ವ ಮತ್ಸ್ಯಕೇಂದ್ರದ ಒಂದು ಸಮೀಕ್ಷೆಯ ಪ್ರಕಾರ ೨೦೦೧ರಲ್ಲಿ ಏಷ್ಯಾ, ಶಾಂತಿಸಾಗರ, ಆಫ್ರಿಕಾದ ರಾಷ್ಟ್ರಗಳಲ್ಲಿ ಹತ್ತು ಲಕ್ಷಕ್ಕೂ ಹೆಚ್ಚು ಗ್ರಾಮೀಣ ಪ್ರದೇಶದ ಬಡ ಜನರು, ಅದರಲ್ಲೂ ಮಹಿಳೆಯರು, ಜಲಕೃಷಿಯಲ್ಲಿ ತೊಡಗಿದ್ದಾರೆ. ಡಾ॥ ಗುಪ್ತ ಅವರ ದುಬಾರಿಯಲ್ಲದ, ಹೆಚ್ಚು ಇಳುವರಿಯ ಮತ್ಸ್ಯಕೃಷಿ ತಂತ್ರಜ್ಞಾನದ ಫಲವಾಗಿ ಅವರೆಲ್ಲಾ ಸಮೃದ್ಧವಾಗಿ ಮೀನು ಬೆಳೆಯುತ್ತಿದ್ದಾರೆ. ಈ ನೀಲಿಕ್ರಾಂತಿಯಿಂದಾಗಿ ಅವರ ಕುಟುಂಬದ ಸದಸ್ಯರಿಗೆ ಉತ್ತಮ ಪೋಷಕಾಂಶ ದೊರೆಯುವುದಲ್ಲದೆ ಆರ್ಥಿಕ ಪರಿಸ್ಥಿತಿಯೂ ಸುಧಾರಿಸಿದೆ.

ಇನ್ನು ಈ ಪ್ರಶಸ್ತಿಯ ಬಗ್ಗೆ ಕೆಲವು ಮಾತುಗಳು. ಕೃಷಿ ಮತ್ತು ಆಹಾರ ವಿಜ್ಞಾನ ಕ್ಷೇತ್ರದಲ್ಲಿ ನೊಬೆಲ್ ಪ್ರಶಸ್ತಿಯಷ್ಟೇ ಪ್ರಸಿದ್ಧವಾದ ಈ ಪ್ರಶಸ್ತಿಯ ಸ್ಥಾಪಕರು ಯಾರು ಗೊತ್ತೆ? ಹಸಿರುಕ್ರಾಂತಿಯ ರೂವಾರಿ, ೧೯೭೦ರಲ್ಲಿ ನೊಬೆಲ್ ಪ್ರಶಸ್ತಿ ವಿಜೇತ ಡಾ॥ ನಾರ್ಮನ್ ಬೋರ್ಲಾಗ್. ಅಯೋವ ರಾಜ್ಯದ ಉದ್ಯಮಗಾರ ಜಾನ್ ರುವಾನ್ ಎಂಬಾತ ಇದಕ್ಕೆ ಆರ್ಥಿಕ ನೆರವು ನೀಡುತ್ತಿದ್ದಾರೆ. ಪ್ರತಿವರ್ಷದ ಪ್ರಶಸ್ತಿಯು ಅಯೋವ ರಾಜ್ಯಪಾಲರಿಂದ ಪ್ರಶಂಸೆ ಪತ್ರ, ಸ್ಮರಣಿಕೆ ಹಾಗೂ ೨೫೦,೦೦೦ ಅಮೆರಿಕನ್ ಡಾಲರ್ ಒಳಗೊಂಡಿರುತ್ತದೆ. ೧೯೮೬ರಲ್ಲಿ ಅಸ್ತಿತ್ವಕ್ಕೆ ಬಂದ ಈ ಪ್ರಶಸ್ತಿ ಗ್ರಾಮೀಣ ಜನರಲ್ಲಿ ಹಸಿವು ಹಾಗೂ ಅಪೌಷ್ಟಿಕತೆಯನ್ನು ಹತ್ತಿಕ್ಕುವುದಕ್ಕಾಗಿ ಅಮೂಲ್ಯ ಸೇವೆ ಸಲ್ಲಿಸಿದ ಕೃಷಿವಿಜ್ಞಾನಿಗೆ ನೀಡಲಾಗುತ್ತದೆ. ಇದಕ್ಕೆ ದೇಶ, ಜಾತಿ, ಮತ, ರಾಜಕೀಯ ನಂಬಿಕೆ ಇದಾವುದರ ನಿರ್ಬಂಧವೂ ಇಲ್ಲ. ಪ್ರತಿವರ್ಷ ವಿಶ್ವದ ೪೦೦೦ಕ್ಕೂ ಹೆಚ್ಚು ಸಂಸ್ಥೆಗಳಿಗೆ ನೇಮಕಾತಿ ಸಲ್ಲಿಸಲು ವಿನಂತಿಸಲಾಗುತ್ತದೆ.

ಮೊದಲನೇ ಪ್ರಶಸ್ತಿಯನ್ನು ಭಾರತದಲ್ಲಿ ಹಸಿರುಕ್ರಾಂತಿಗೆ ಕಾರಣರಾದ ಡಾ॥ ಎಮ್. ಎಸ್. ಸ್ವಾಮಿನಾಥನ್ ಅವರಿಗೆ ೧೯೮೭ರಲ್ಲಿ ನೀಡಲಾಯಿತು. ಅದಾದನಂತರ ಮತ್ತೆ ನಾಲ್ಕು ಭಾರತೀಯ ವಿಜ್ಞಾನಿಗಳಿಗೆ – ವರ್ಘೀಸ್ ಕುರಿಯನ್ (ಕ್ಷೀರಕ್ರಾಂತಿ, ೧೯೮೯), ಗುರುದೇವ್ ಖುಶ್ (ಅಧಿಕ ಇಳುವರಿಯ ಬತ್ತದ ತಳಿ, ೧೯೯೬), ಬಿ. ಆರ್. ಬರ್ವಾಲೆ (ಮ್ಯಾಹೈಕೋ ಬೀಜ ಕಂಪನಿ ಸ್ಥಾಪಕ, ೧೯೯೮), ಮತ್ತು ಸುರಿಂದರ್ ಕೆ. ವಾಸಲ (ಉತ್ತಮ ಮಟ್ಟದ ಜೋಳದ ಪ್ರೋಟೀನ್, ೨೦೦೦) ವಿಶ್ವ ಆಹಾರ ಪ್ರಶಸ್ತಿ ಸಂದಾಯವಾಗಿದೆ. ಇವರುಗಳಲ್ಲದೆ ಅಮೆರಿಕಾ, ಬ್ರಿಟನ್, ಚೈನ, ಸ್ವಿಡ್ಜರ್‌ಲ್ಯಾಂಡ್, ಬಾಂಗ್ಲಾದೇಶ್ ವಿಜ್ಞಾನಿಗಳಿಗೂ ಈ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

ಡಾ॥ ಎಮ್. ಎಸ್. ಎಸ್. ಮೂರ್ತಿ
ಬಿ-೧೦೪, ಟೆರ್ರೇಸ್ ಗಾರ್ಡನ್ ಅಪಾರ್ಟ್‌ಮೆಂಟ್ಸ್, ೨ನೇ ಮುಖ್ಯರಸ್ತೆ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಮಾನವಮತಿಯ ಫಲವಂತ ಸೃಷ್ಟಿಗಳಾದ

# ದೇವರು ಮತ್ತು ಧರ್ಮ















ಇತಿಹಾಸದ ಮುನ್ನಡೆಯನ್ನು ನಿರಪೇಕ್ಷವಾಗಿ ಅವಲೋಕಿಸಿದಾತನಿಗೆ ಅದರಲ್ಲಿ ಎದ್ದು ಕಾಣುವುದು ಸ್ಥಳೀಯ ಕದನ, ಅಂತಾರಾಜ್ಯ ಯುದ್ಧ, ಪ್ರಪಂಚ ಸಮರ ಮುಂತಾದ ಹೊಡೆದಾಟ ಕಾದಾಟಗಳ ದೃಶ್ಯಗಳೇ. ಸಮಾಜದಲ್ಲಿ ಶಾಂತಿ ಸುವ್ಯವಸ್ಥೆಗಳ ಸ್ಥಾಪನೆಗೆಂದು ಕ್ರಮೇಣ ಮೈದಳೆದ ಧರ್ಮ ಕೂಡ ಇಂಥ ಸ್ವಾರ್ಥಮೂಲ ಹೋರಾಟಗಳಲ್ಲಿ ವಹಿಸಿರುವ ಮತ್ತು ಇಂದು ತುಸು ಹೆಚ್ಚಾಗಿಯೇ ವಹಿಸುತ್ತಿರುವ, ಪಾತ್ರಗಳು ವಿರಳವಲ್ಲ. ನಿಜಕ್ಕೂ ಇದೊಂದು ವಿಪರ್ಯಾಸ. ಧರ್ಮದ ಪ್ರಕಟಿತ ರೂಪಗಳಾಗಿ ಕೋಮು, ಜಾತಿ ಇಲ್ಲವೇ ವರ್ಣ ವೈಷಮ್ಯ ಮುಂಚೂಣಿಗೆ ಬಂದು ನರಮೇಧಕ್ಕೆ ಇನ್ನಷ್ಟು ಇಂಧನ ಸುರಿಯುತ್ತಿರುವುದು ಅಧಿಕ ದುರಂತ.

ಕ್ರಿಸ್ತಪೂರ್ವ ೫೦೦೦ ವರ್ಷಗಳಿಗಿಂತಲೂ ಹಿಂದೆ ಬಾಳಿದ ವೇದಕಾಲೀನ ದ್ರಷ್ಟಾರರು, ಜ಼ರಾತುಷ್ಟ್ರ (ಕ್ರಿಪೂಸು ೬೦೦), ಲವೊಟ್ಸೆ (ಕ್ರಿಪೂಸು ೫೭೦-೪೯೦), ಗೌತಮ ಬುದ್ಧ (ಕ್ರಿಪೂಸು ೫೬೬-೪೮೬), ಕನ್ಫೂಶಿಯಸ್ (ಕ್ರಿಪೂಸು ೫೫೧-೪೭೦), ಸಾಕ್ರಟೀಸ್ (ಕ್ರಿಪೂಸು ೪೭೦-೩೯೯), ಜೀಸಸ್ ಕ್ರೈಸ್ಟ್ (ಕ್ರಿಪೂಸು ೫-ಕ್ರಿಶಸು ೩೬), ಮಹಮದ್ ಪೈಗಂಬರ್ (೫೭೦-೬೩೨), ಶ್ರೀ ರಾಮಕೃಷ್ಣ ಪರಮಹಂಸ (೧೮೩೬-೮೬), ಸ್ವಾಮಿ ವಿವೇಕಾನಂದ (೧೮೬೩-೧೯೦೨), ಮಹಾತ್ಮಾ ಗಾಂಧಿ (೧೮೬೯-೧೯೪೮) ಮೊದಲಾದ ಶಾಂತಿದೂತರ ರಂಗಪ್ರವೇಶ, ಅವರು ಮಾಡಿದ ಪ್ರಯೋಗ, ಬೋಧನೆ ಮುಂತಾದವು ತಾತ್ಕಾಲಿಕ ಸೀಮಿತ ಶಮನಕಾರಿಗಳಾಗಿ ವರ್ತಿಸಿದ್ದು ನಿಜ. ಆದರೆ ಕ್ರಮೇಣ ಇವು ಪ್ರತ್ಯೇಕ ಪಂಥಗಳಾಗಿ ವಿಕೃತಿಸಿ ಯಥಾಶಕ್ತಿ ಮಾರಣಹೋಮಕ್ಕೆ ತಮ್ಮ ಅಜ್ಯಾಹುತಿಯನ್ನು ನೀಡುತ್ತ ಬಂದಿರುವುದು ಇನ್ನೊಂದು ವಿಪರ್ಯಾಸ. ಈ ವಿರೂಪಣೆ ಕುರಿತು ಸಂತ ಭದ್ರಗಿರಿ ಅಚ್ಯುತದಾಸರು ಮಾರ್ಮಿಕವಾಗಿ ಹಾಡಿದ್ದಾರೆ :

*ವಿಚಾರವೆಂಬೋ ಸಸಿಯನು ನೆಟ್ಟು*
*ಆಚಾರವೆಂಬೋ ಬೇಲಿಯ ಕಟ್ಟಿ*
*ಪ್ರಚಾರವೆಂಬೋ ಗೊಬ್ಬರ ಕೊಟ್ಟು*
*ನೋಡಲು ಬಯಸಿದನು*
*ಕಾಲವು ಸಂದಿತು*
*ಬೇಲಿಯು ಬೆಳೆಯಿತು*
*ಸಸಿಯನು ನುಂಗುತ*
*''ನಾನೇ ಸಸಿಯೆನ್ನುತ ಘೋಷಿಸಿತು !''*

**ಜಿ. ಟಿ. ನಾರಾಯಣರಾವ್**

ಇದೇಕೆ ಹೀಗೆ. ಎಂಬ ಮೂಲಭೂತ ಸಮಸ್ಯೆಯನ್ನು ಎತ್ತಿಕೊಂಡು ಮಹಾವಿಜ್ಞಾನಿ-ಮಾನವತಾವಾದಿ-ಶಾಂತಿದೂತ ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) Religion and Science ಎಂಬ ಲೇಖನ ಬರೆದಿದ್ದಾರೆ (೧೯೩೦). ಅದರಲ್ಲಿ ವಿಶ್ಲೇಷಿಸಿರುವ ಮೂಲಭೂತ ಸಂಗತಿಗಳು ಇಂದಿಗೆ ಅಧಿಕ ಪ್ರಸ್ತುತವಾಗಿವೆ. ಆ ಲೇಖನದ ಭಾವಾನುವಾದ :

ಮನುಕುಲದ ಸಮಸ್ತ ಚಟುವಟಿಕೆ ಚಿಂತನೆಗಳೂ ವ್ಯಕ್ತಿಯ ಅದಮ್ಯ ಅಗತ್ಯಗಳ ಪೂರೈಕೆ ಮತ್ತು ನೋವಿನ ಉಪಶಮನ ಕುರಿತೇ ಇರುವಂಥವು. ಆಧ್ಯಾತ್ಮಿಕ ಆಂದೋಲನ ಅಭಿವರ್ಧನೆಗಳನ್ನು ಅರಿಯಬಯಸುವಾತ ಈ ಸಂಗತಿಯನ್ನು ನೆನಪಿನಲ್ಲಿಟ್ಟುಕೊಂಡಿರಬೇಕು. ಮಾನವನ ಸಕಲ ಉದ್ಯಮ ಮತ್ತು ನಿರ್ಮಿತಿಗಳನ್ನು ಪ್ರೇರಿಸುವ ಚಾಲನ ಬಲಗಳು, ಅವು ಎಂಥ ವೇಷ ಭೂಷಣಗಳಲ್ಲೇ ಅವತರಿಸಲಿ, ಎರಡು ಮಾತ್ರ: ಸಂವೇದನೆ ಮತ್ತು ಅವಶ್ಯಕತೆಗಳು. ಹಾಗಾದರೆ ವ್ಯಕ್ತಿಗಳನ್ನು ಧಾರ್ಮಿಕ ಭಾವನೆ ಮತ್ತು ನಂಬಿಕೆಗಳತ್ತ - ಈ ಪದಗಳ ಅತ್ಯಂತ ವ್ಯಾಪಕಾರ್ಥಗಳಲ್ಲಿ – ಸಾಗುವಂತೆ ಮಾಡುವ ಸಂವೇದನೆ ಮತ್ತು ಆವಶ್ಯಕತೆಗಳು ಯಾವುವು ?

ವ್ಯಾಪಕ ವೈವಿಧ್ಯಪೂರಿತ ರಾಗಭಾವಗಳು ಧಾರ್ಮಿಕ ಭಾವನೆ ಹಾಗೂ ಅನುಭವಗಳ ಉದ್ಭವಕ್ಕೆ ಕಾರಣವಾಗುತ್ತವೆಂಬ ಸಂಗತಿ ಅತ್ಯಲ್ಪ ಪರಿಶೀಲನೆಗೂ ವೇದ್ಯವಾಗುತ್ತದೆ. ಆದಿಮಾನವನಲ್ಲಿ ಎಲ್ಲಕ್ಕಿಂತಲೂ ಮಿಗಿಲಾಗಿ ಧಾರ್ಮಿಕ ಭಾವನೆಯನ್ನು ಪ್ರೇರಿಸಿದ ಬಲವೆಂದರೆ ಹಸಿವಿನ, ಹಿಂಸ್ರ ಪಶುಗಳ, ಅನಾರೋಗ್ಯದ ಮತ್ತು ಮರಣದ ಭಯ. ನಾಗರಿಕತೆಯ ಆ ಆದಿಮ ಹಂತದಲ್ಲಿ ಕಾರ್ಯ-ಕಾರಣ ಸಂಬಂಧ ಕುರಿತಂತೆ ಮಾನವನ ತಿಳಿವಳಿಕೆ ಸಾಧಾರಣವಾಗಿ ತೀರ ಕೆಳಮಟ್ಟದ್ದಾಗಿದ್ದುದರಿಂದ, ಆತನ ಮನಸ್ಸು ಹೆಚ್ಚುಕಡಿಮೆ ತನಗೆ ಸದೃಶವಾದ ಭ್ರಾಮಕ ಬಲಗಳನ್ನು ಸೃಷ್ಟಿಸಿತು ಮತ್ತು ಅವುಗಳ ಇಚ್ಛೆ ಹಾಗೂ ಕ್ರಿಯೆ ಅನುಸರಿಸಿ ಈ ಭಯಕಾರಕ ಘಟನೆಗಳು ಸಂಭವಿಸುವುವೆಂದು ಭಾವಿಸಿತು.

ಹೀಗೆ ವ್ಯಕ್ತಿ ಈ ಬಲಗಳನ್ನು ಪ್ರಸನ್ನಗೊಳಿಸಿ ಅವು ತನ್ನ ಬಗ್ಗೆ ಸುಪ್ರೀತವಾಗುವಂತೆ ಮಾಡಲು, ಪೀಳಿಗೆಯಿಂದ ಪೀಳಿಗೆಗೆ ಅನೂಚಾನವಾಗಿ ಹರಿದುಬಂದಿರುವ ನಡವಳಿಕೆಗಳನ್ನು ಪಾಲಿಸುತ್ತ, ಅವುಗಳಿಗೆ ಪೂಜೆ ಸಲ್ಲಿಸಿದ ಮತ್ತು ಬಲಿ ಒಪ್ಪಿಸಿದ. ಈ ಅರ್ಥದಲ್ಲಿ ನಾನು ಭಯಾಧಾರಿತ ಧರ್ಮದ ಬಗ್ಗೆ ಪ್ರಸ್ತಾವಿಸುತ್ತಿದ್ದೇನೆ. ಇದು ಸೃಷ್ಟಿಸಲ್ಪಡುವುದಿಲ್ಲ, ಬದಲು, ಜನರಿಗೂ ಅವರು ಹೆದರುವ ಪೀಡಕಗಳಿಗೂ ನಡುವೆ ತನ್ನನ್ನು ತಾನೇ ಸ್ಥಾಪಿಸಿಕೊಳ್ಳುತ್ತದೆ, ಮತ್ತು ಆ ಆಧಾರದ ಮೇಲೆ ಅಧಿನಾಯಕತ್ವ ವಹಿಸಿಕೊಂಡ ಪುರೋಹಿತ ವರ್ಗವೊಂದರ ರೂಪಣೆಯಿಂದ ಬಲು ನಿರ್ಣಾಯಕ ಮಟ್ಟದಲ್ಲಿ ಭದ್ರವಾಗಿ ನೆಲೆಗೊಳ್ಳುತ್ತದೆ.

ಹಲವಾರು ಸಂದರ್ಭಗಳಲ್ಲಿ ಒಬ್ಬ ಧುರೀಣ ಇಲ್ಲವೇ ಅರಸು ಅಥವಾ ಇತರ ಕಾರಣಗಳಿಗಾಗಿ ಸ್ಥಾನ ಸುಭದ್ರವಾಗಿದ್ದು ಸಾಕಷ್ಟು ಸವಲತ್ತು ಪಡೆದಿರುವ ಒಂದು ವರ್ಗಕ್ಕೆ ಸೇರಿದಾತ, ತನ್ನ ಐಹಿಕ ಅಧಿಕಾರವನ್ನು ಭದ್ರಗೊಳಿಸುವ ಈ ಧರ್ಮದ ಜೊತೆಗೆ, ಪುರೋಹಿತನ ಕ್ರಿಯೆಗಳನ್ನೂ ಸಂಯೋಗಿಸುತ್ತಾನೆ; ಅಥವಾ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವ ಸಲುವಾಗಿ ರಾಜಕೀಯ ನಾಯಕರೂ ಪುರೋಹಿತ ವರ್ಗದವರೂ ಉಭಯಸಾಮಾನ್ಯ ವೇದಿಕೆಯಲ್ಲಿ ಸಹಕರಿಸುತ್ತಾರೆ.

ಧರ್ಮದ ಎಳೆಗಳು ಪರಸ್ಪರ ಹೆಣೆದುಕೊಂಡು ವಸ್ತ್ರವಾಗಿ ನೇಯ್ದುಕೊಳ್ಳಲು ಕಾರಣವಾಗುವ ಇನ್ನೊಂದು ಮೂಲವೆಂದರೆ ಸಾಮಾಜಿಕ ಪ್ರೇರಣೆಗಳು : ತಂದೆ ತಾಯಿಯರು, ಅಂತೆಯೇ ಮಾನವ ಸಮುದಾಯಗಳ ನಾಯಕರು ಯಾರೂ ಅಮರರಲ್ಲ, ಅಜೇಯರೂ ಅಲ್ಲ ಎಂಬ ಅರಿವು. ಎಂದೇ ದಿಗ್ದರ್ಶನ, ಪ್ರೀತಿ ಮತ್ತು ಅವಲಂಬನೆ ಬಯಸುವ ಮಂದಿ ದೇವರ ಬಗೆಗಿನ ಸಾಮಾಜಿಕ ಅಥವಾ ನೈತಿಕ ಪರಿಕಲ್ಪನೆ ರೂಪಿಸಲು ಸ್ಫೂರ್ತಿ ಬಯಸುತ್ತಾರೆ. ಈ ಸ್ಫೂರ್ತಿಯ ಆಕರ ಆ ಸರ್ವನಿಯಾಮಕ, ಸರ್ವಾಂತರ್ಯಾಮಿ ಮತ್ತು ಸರ್ವಶಕ್ತ ಭಗವಂತ. ಈತ ಶಿಷ್ಟಸಂರಕ್ಷಕ, ದುಷ್ಟನಿಗ್ರಾಹಕ, ಅಭೀಷ್ಟವರಪ್ರದಾಯಕ ಮತ್ತು ಶಿಕ್ಷಾಪ್ರದಾಯಕ. ಈತ ತನ್ನನ್ನು ನಂಬಿದಾತನ ಜೀವನದೃಷ್ಟಿಯ ಸೀಮಿತಗಳ ಅನುಸಾರ ಸಮುದಾಯದ ಇಲ್ಲವೇ ಮನುಕುಲದ ಬದುಕನ್ನು ಅಥವಾ ಸ್ವತಃ ಜೀವನವನ್ನೇ ಪ್ರೀತಿಸಿ ಪೋಷಿಸುತ್ತಾನೆ ; ಶೋಕಪರಿಹಾರದಲ್ಲಿಯೂ ಅತೃಪ್ತ ಅಭೀಪ್ಸೆಗಳ ಪೂರೈಕೆಯಲ್ಲಿಯೂ ಸಾಂತ್ವನ ನೀಡುತ್ತಾನೆ ; ಮೃತರ ಜೀವಗಳನ್ನು ಜೋಪಾನವಾಗಿ ಕಾಪಾಡುತ್ತಾನೆ. ದೇವರನ್ನು ಕುರಿತ ಸಾಮಾಜಿಕ ಅಥವಾ ನೈತಿಕ ಪರಿಕಲ್ಪನೆ ಇದು.

ಭಯಾಧಾರಿತ ಧರ್ಮ ಹೇಗೆ ನೀತ್ಯಾಧಾರಿತ ಧರ್ಮಕ್ಕೆ ಉತ್ತರಿಸುತ್ತದೆ ಎನ್ನುವುದಕ್ಕೆ ಯೆಹೂದ್ಯ ಧರ್ಮದಲ್ಲಿ ವ್ಯಾಪಕ ನಿದರ್ಶನಗಳು ದೊರೆಯುತ್ತವೆ. ಈ ಅಭಿವರ್ಧನೆ ಹೊಸ ಒಡಂಬಡಿಕೆಯಲ್ಲಿಯೂ ಮುಂದುವರಿದಿದೆ. ಎಲ್ಲ ನಾಗರಿಕ ಜನಾಂಗಗಳ, ತತ್ರಾಪಿ ಪೌರಸ್ತ್ಯ ಜನಾಂಗಗಳ, ಧರ್ಮಗಳು ನೀತ್ಯಾಧಾರಿತವಾದವು. ಭಯಾಧಾರಿತ ಧರ್ಮದಿಂದ ನೀತ್ಯಾಧಾರಿತ ಧರ್ಮಕ್ಕೆ ಆದ ಉತ್ತಾರಣೆ ನಾಗರಿಕತೆಯ ಪ್ರವಹನದಲ್ಲಿ ಸಂಭವಿಸಿದ ಒಂದು ವಿಶಿಷ್ಟ ಕ್ರಾಂತಿಕಾರಿ ಘಟನೆ. ಇಂತಿದ್ದರೂ ಆದಿಮ ಧರ್ಮಗಳು ಪೂರ್ತಿ ಭಯಾಧಾರಿತವಾದವು, ನಾಗರಿಕ ಜನಾಂಗಗಳವಾದರೋ ಶುದ್ಧ ನೀತ್ಯಾಧಾರಿತವಾದವು ಎಂಬ ಗ್ರಹಿಕೆ ಸಮರ್ಥನೀಯವಲ್ಲ. ಈ ಪೂರ್ವಗ್ರಹದ ವಿರುದ್ಧ ನಾವು ಜಾಗರೂಕರಾಗಿರುವುದು ಅಗತ್ಯ. ನಿಜ ಸಂಗತಿ ಏನೆಂದರೆ ಎಲ್ಲ ಧರ್ಮಗಳೂ, ಒಂದು ವ್ಯತ್ಯಾಸದ ಹೊರತಾಗಿ, ವಿವಿಧ ಬಗೆಯ ಒಂದಿಕೆಗಳು ಮಾತ್ರ ; ಸಾಮಾಜಿಕ ಜೀವನದ ಉನ್ನತ ಸ್ತರಗಳಲ್ಲಿ ನೀತ್ಯಾಧಾರಿತ ಧರ್ಮದ ಪ್ರಾಬಲ್ಯ ಅಧಿಕ.

ದೇವರ ಬಗೆಗಿನ ಪರಿಕಲ್ಪನೆಯಲ್ಲಿ ಮಾನವಕೇಂದ್ರೀಯ ಲಕ್ಷಣವಿರುವುದು ಎಲ್ಲ ಧರ್ಮಗಳ ನಡುವೆ ಕಂಡುಬರುವ ಸಾಮಾನ್ಯ ಲಕ್ಷಣ. ವ್ಯಾಪಕವಾಗಿ ಹೇಳುವುದಾದರೆ ಅಸಾಧಾರಣ ಪ್ರತಿಭಾನ್ವಿತ ವ್ಯಕ್ತಿಗಳು ಮತ್ತು ಅಪೂರ್ವ ಚಿಂತನಶೀಲ ಸಮುದಾಯಗಳು ಮಾತ್ರ ಈ ಮಾನಸಿಕ ಸ್ಥಿತಿಗಿಂತ ಉನ್ನತತರ ಘಟ್ಟಕ್ಕೇರುವುದು ಸಾಧ್ಯ. ಇಂಥ ವಿರಳರಲ್ಲಿ ಪ್ರಕಟವಾಗುವ ಮೂರನೆಯ ಹಂತದ ಧಾರ್ಮಿಕಾನುಭವವೊಂದುಂಟು : ಇದನ್ನು ಬ್ರಹ್ಮಾಂಡೀಯ ಧಾರ್ಮಿಕ ಸಂವೇದನೆ ಎನ್ನುತ್ತೇವೆ. ಮುಖ್ಯವಾಗಿ, ಇದಕ್ಕೆ ಸಂವಾದಿಯಾಗಿ ಯಾವುದೇ ಮಾನವಕೇಂದ್ರೀಯ ದೇವರ ಪರಿಕಲ್ಪನೆ ಇಲ್ಲವಾದ್ದರಿಂದ ಈ ಸಂವೇದನೆ ಒಂದಿಷ್ಟೂ ಇಲ್ಲದವರಿಗೆ ಇದನ್ನು ವಿವರಿಸಿ ಹೇಳುವುದು ಕಡು ಕಷ್ಟ.

ಮಾನವನ ಬಯಕೆ, ಉದ್ದೇಶಗಳ ಅರ್ಥಹೀನತೆ ಮತ್ತು ಅದೇ ವೇಳೆ ನಿಸರ್ಗದಲ್ಲಿಯೂ ಭಾವನಾಪ್ರಪಂಚದಲ್ಲಿಯೂ ಪ್ರಕಟವಾಗುವ ಪರಮ ಭವ್ಯತೆ ಹಾಗೂ ಕ್ರಮಬದ್ಧತೆಗಳನ್ನು ವ್ಯಕ್ತಿ ಸ್ಫುಟವಾಗಿ ಮನಗಾಣುತ್ತಾನೆ. ಆತನಿಗೆ ವೈಯಕ್ತಿಕ ಅಸ್ತಿತ್ವ ಒಂದು ಬಗೆಯ ತುರಂಗಬಂಧನವೆಂಬ ಸಂಗತಿ ಮನವರಿಕೆಯಾಗಿ ಸಮಗ್ರ ವಿಶ್ವವನ್ನೂ ಅಖಂಡ ಏಕಘಟಕವಾಗಿ ಅನುಭವಿಸಬೇಕೆಂದು ಹವಣಿಸುತ್ತಾನೆ. ನಾಗರಿಕತೆಯ ವಿಕಾಸದ ಆರಂಭ ಘಟ್ಟದಲ್ಲಿಯೇ ಡೇವಿಡ್ಡನ ಹಲವಾರು ಸ್ತುತಿ ಗೀತಗಳಲ್ಲಿ ಮತ್ತು ಪ್ರವಾದಿಗಳ ಕೆಲವು ಸೂಕ್ತಿಗಳಲ್ಲಿ ಬ್ರಹ್ಮಾಂಡೀಯ ಧಾರ್ಮಿಕ ಸಂವೇದನೆಯ ಸುಳುಹುಗಳು ಮೈದೋರಿರುವುದನ್ನು ಕಾಣುತ್ತೇವೆ. ವಿಶೇಷವಾಗಿ ಶೋಪೆನ್‌ಹೋರ್ (೧೭೮೮-೧೮೬೦) ಎಂಬ ತತ್ತ್ವಜ್ಞಾನಿಯ ಅದ್ಭುತ ಬರೆಹಗಳು ಶ್ರುತಪಡಿಸಿರುವ ಬೌದ್ಧ ಧರ್ಮದಲ್ಲಿ ಈ ಅಂಶ ಸಾಕಷ್ಟು ಸ್ಫುಟವಾಗಿ ಪ್ರಕಟವಾಗಿದೆ.




ಎಲ್ಲ ಕಾಲಗಳ ಧಾರ್ಮಿಕ ಸೀಮಾಪುರುಷರಲ್ಲಿಯೂ ಈ ಪರಿಯ ಧಾರ್ಮಿಕ ಸಂವೇದನೆ ಎದ್ದು ಕಾಣುತ್ತದೆ. ಯಾವುದೇ ಅಂಧ ಸಿದ್ಧಾಂತ ಇಲ್ಲವೇ ಮಾನವ ಪ್ರತಿಬಿಂಬವಾಗಿ ರೂಪಿತವಾಗುವ ದೇವರು ಇದಕ್ಕೆ ಗ್ರಾಹ್ಯವಲ್ಲ. ಎಂದೇ ಇದನ್ನು ಆಧರಿಸಿ ತನ್ನ ಪ್ರಧಾನ ತತ್ತ್ವಗಳನ್ನು ಪ್ರಚುರಿಸುವ ಮಠ, ವ್ಯವಸ್ಥಾಪನೆ ಅಥವಾ ಕೇಂದ್ರಗಳಿರುವುದು ಅಸಾಧ್ಯ. ಇಂಥ ಧಾರ್ಮಿಕ ಸಂವೇದನೆ ಇರುವ ವ್ಯಕ್ತಿಗಳು ಪ್ರತಿಯೊಂದು ಯುಗದಲ್ಲಿಯೂ 'ಪಾಷಂಡಿ'ಗಳಾಗಿಯೇ ಪ್ರಕಟವಾಗುವುದು ಈ ಕಾರಣದಿಂದ. ಸಮಕಾಲೀನರಿಗೆ ಇವರ ಪೈಕಿ ಅನೇಕರು ನಾಸ್ತಿಕರಾಗಿ ಕಂಡಿರಬಹುದು. ಈ ನೆಲೆಯಲ್ಲಿ ನೋಡುವಾಗ ಡೆಮಾಕ್ರಿಟಸ್ (ಕ್ರಿಪೂಸು ೪೬೦-೩೭೦), ಅಸ್ಸೀಸಿಯ ಫ್ರಾನ್ಸಿಸ್ (ಕ್ರಿಶ ೧೧೮೧/೧೧೮೨-೧೨೨೬) ಮತ್ತು ಸ್ಪಿನೋಝ (೧೬೩೨-೭೭) ಪರಸ್ಪರ ನಿಕಟಸಂಬಂಧಿತರಾಗುತ್ತಾರೆ.

ಬ್ರಹ್ಮಾಂಡೀಯ ಧಾರ್ಮಿಕ ಸಂವೇದನೆ ಮತಧರ್ಮಶಾಸ್ತ್ರದ ಉಗಮಕ್ಕೂ ದೇವರ ಬಗೆಗಿನ ನಿರ್ದಿಷ್ಟ ಪರಿಕಲ್ಪನೆಯ ಉದ್ಭವಕ್ಕೂ ಎಡೆಮಾಡಿಕೊಡದಿದ್ದರೆ ಆ ಸಂವೇದನೆಯನ್ನು ವ್ಯಕ್ತಿಯಿಂದ ವ್ಯಕ್ತಿಗೆ ಸಂವಹನಿಸುವುದು ಹೇಗೆ ತಾನೆ ಸಾಧ್ಯ ? ಈ ಸಂವೇದನೆಯನ್ನು ಗ್ರಹಿಸಬಲ್ಲವರಲ್ಲಿ ಇದನ್ನು ಉದ್ದೀಪಿಸುವುದೂ ಜೀವಂತವಾಗಿ ಇಡುವುದೂ ಕಲೆ-ವಿಜ್ಞಾನಗಳ ಅತಿ ಮುಖ್ಯ ಪಾತ್ರವೆಂಬುದು ನನ್ನ ಅಭಿಪ್ರಾಯ.

ಹೀಗೆ ಧರ್ಮದ ಜೊತೆ ವಿಜ್ಞಾನದ ಸಂಬಂಧ ಕುರಿತು ಮಾಮೂಲಿ ಭಾವನೆಗಿಂತ (ಧರ್ಮ ಮತ್ತು ವಿಜ್ಞಾನ ಎರಡು ವಿಭಿನ್ನ ಅಸಂಬಂಧಿತ ವಿಚಾರಗಳು, ಧರ್ಮವೇ ಶ್ರೇಷ್ಠ, ವಿಜ್ಞಾನವೇನಿದ್ದರೂ ಲೌಕಿಕ, ಧರ್ಮವಾದರೋ ಪಾರಲೌಕಿಕ ಮುಂತಾದವು ಈ 'ಮಾಮೂಲಿ' ಭಾವನೆಗಳು) ತೀರ ಬೇರೆಯದೇ ಆದ ಒಂದು ಪರಿಕಲ್ಪನೆಗೆ ತಲಪುತ್ತೇವೆ. ಇದೇ ವಿಷಯವನ್ನು ಐತಿಹಾಸಿಕವಾಗಿ ಪರಿಶೀಲಿಸುವಾತನಿಗೆ ವಿಜ್ಞಾನ ಮತ್ತು ಧರ್ಮ ಎಂದೂ ರಾಜಿಯಾಗದ ಬದ್ಧ ವೈರಿಗಳಾಗಿ ಕಾಣುವುದು ಸಾಧ್ಯವಿದೆ! ಇದರ ಕಾರಣ ಸುಸ್ಪಷ್ಟ: ವಿಶ್ವದ ಸಮಸ್ತ ವಿದ್ಯಮಾನಗಳೂ ಕಾರ್ಯ-ಕಾರಣ ಸಂಬಂಧದಿಂದ ಬೆಸುಗೆಗೊಂಡಿವೆ ; ಈ ಸಂಬಂಧದ, ಅಂದರೆ ಕಾರಣತಾನಿಯಮದ ಸಾರ್ವತ್ರಿಕತೆ ಬಗ್ಗೆ ಪೂರ್ಣ ಭರವಸೆ ಇರುವಾತ (ಈತನೇ ಋಜು ವಿಜ್ಞಾನಿ) ನೈಸರ್ಗಿಕ ಅಥವಾ ಮಾನವಸಂಬಂಧಿತ ಘಟನೆಗಳನ್ನು ಪ್ರಭಾವಿಸಬಲ್ಲ ಯಾವುದೇ ಪಾರಲೌಕಿಕ ಶಕ್ತಿ ಕುರಿತು ಇನಿತೂ ವಿಶ್ವಾಸ ತಳೆಯಲಾರ.

ಈತನಿಗೆ ಭಯಾಧಾರಿತ ಧರ್ಮ ಪೂರ್ತಿ ನಿಷ್ಪ್ರಯೋಜಕ, ಅಂತೆಯೇ ಸಮಾಜ – ಅಥವಾ ನೀತಿ-ಆಧಾರಿತ ಧರ್ಮ ಕೂಡ. ಸತ್ಕಾರ್ಯಕ್ಕೆ ಪಾರಿತೋಷಕ ಪ್ರದಾನಿಸುವ ಮತ್ತು ದುಷ್ಕಾರ್ಯಕ್ಕೆ ಶಿಕ್ಷೆ ವಿಧಿಸುವ ದೇವರು ಈತನಿಗೆ ಅಗ್ರಾಹ್ಯ. ಏಕೆಂದರೆ ವಸ್ತುತಃ ಎಲ್ಲ ಚಟುವಟಿಕೆಗಳನ್ನೂ ನಿರ್ಣಯಿಸುವುದು ಬಾಹ್ಯ ಮತ್ತು ಆಂತರಿಕ ಅವಶ್ಯಕತೆಗಳು ಮಾತ್ರ. ಎಂದೇ ದೇವರ ದೃಷ್ಟಿಯಲ್ಲಿ ನಿರ್ಜೀವ ವಸ್ತುಗಳು ಹೇಗೆ ತಮ್ಮಲ್ಲಿ ಕಂಡುಬರುವ ವ್ಯತ್ಯಯಗಳಿಗೆ ತಾವು ಹೊಣೆ ಆಗಲಾರವೋ ಹಾಗೆ ವ್ಯಕ್ತಿಗಳು ಕೂಡ.

ಈ ತೆರನಾಗಿ ಚಿಂತಿಸುವ ವಿಜ್ಞಾನ, ನೈತಿಕತೆಯನ್ನು ಸಡಿಲಗೊಳಿಸುವುದೆಂದು ಅದನ್ನು ದೂಷಿಸುವುದುಂಟು. ಆದರೆ ಇದು ಪೂರ್ತಿ ನಿರಾಧಾರವಾದ ಆರೋಪಣೆ. ವ್ಯಕ್ತಿಯ ನೈತಿಕ ವರ್ತನೆ ಮುಖ್ಯವಾಗಿ ಅನುಕಂಪ, ಶಿಕ್ಷಣ ಮತ್ತು ಸಾಮಾಜಿಕ ಬದ್ಧತೆ ಹಾಗೂ ಆವಶ್ಯಕತೆಗಳನ್ನು ಅವಲಂಬಿಸಿರಬೇಕು. ಇಂಥ ಅವಲಂಬನೆಗೆ ಧಾರ್ಮಿಕ ಆಧಾರ ಅನಗತ್ಯ. ಈ ವರ್ತನೆಯನ್ನು ಮರಣಾನಂತರದಲ್ಲಿ ಒದಗಬಹುದಾದ ಶಿಕ್ಷೆಯ ಭಯ ಮತ್ತು ಬಹುಮಾನದ ಆಮಿಷದಿಂದ ನಿಯಂತ್ರಿಸಬೇಕಾದಲ್ಲಿ ಬದುಕು ಅಷ್ಟರಮಟ್ಟಿಗೆ ಬಡವಾಗುವುದು ದಿಟ.

ಅಂದಮೇಲೆ ಇಗರ್ಜಿಗಳು ಸದಾ ವಿಜ್ಞಾನದ ವಿರುದ್ಧ ಕತ್ತಿ ಮಸೆದಿರುವುದೇಕೆ ಮತ್ತು ಅದರ ಅನುಯಾಯಿಗಳನ್ನು ಹಿಂಸಿಸಿರುವುದೇಕೆ ಎನ್ನುವುದನ್ನು ತಿಳಿಯುವುದು ಸುಲಭ. ವಾಸ್ತವವಾಗಿ ಬ್ರಹ್ಮಾಂಡೀಯ ಧಾರ್ಮಿಕ ಸಂವೇದನೆಯೇ ವೈಜ್ಞಾನಿಕ ಸಂಶೋಧನೆಗೆ ಒದಗುವ ಅತ್ಯಂತ ಬಲಿಷ್ಠ ಹಾಗೂ ಉದಾತ್ತ ಪ್ರೇರಕ ಬಲವೆಂದು ಹೇಳಬಯಸುತ್ತೇನೆ. ವಿಜ್ಞಾನಿ ತನ್ನ ಕಾರ್ಯದಲ್ಲಿ ಪ್ರವರ್ತಿಸುವ ಅಮಿತ ಪರಿಶ್ರಮವನ್ನೂ, ಎಲ್ಲಕ್ಕೂ ಮಿಗಿಲಾಗಿ, ಯಾವುದರ ಅಭಾವದಲ್ಲಿ ಸೈದ್ಧಾಂತಿಕ ವಿಜ್ಞಾನದಲ್ಲಿ ಹೊಸ ಹಾದಿ ರೂಪಿಸುವ ಕೆಲಸ ಸಾಧ್ಯವೇ ಆಗದೋ ಆ ಶ್ರದ್ಧೆಯನ್ನೂ ಅರಿಯಬಲ್ಲವರು ಮಾತ್ರ, ಜೀವನದ ತತ್ಕಾಲೀನ

ವಾಸ್ತವತೆಗಿಂತ ದೂರವಾದ ವೈಜ್ಞಾನಿಕ ಕೃತಿ ಉದ್ಭವಿಸಲು ಏಕೈಕ ಕಾರಣವಾಗಿರುವ ರಾಗಭಾವಗಳ ತೀವ್ರತೆಯನ್ನು ಗ್ರಹಿಸಲು ಸಮರ್ಥರಾಗುವರು.

ಕೆಪ್ಲರ್ (೧೫೭೧-೧೬೩೦) ಮತ್ತು ನ್ಯೂಟನ್ (೧೬೪೨-೧೭೨೭) ಮಹಾಶಯರಿಗೆ ವಿಶ್ವದ ಕ್ರಮಬದ್ಧತೆ ಬಗ್ಗೆ ದೃಢ ಭರವಸೆಯೂ ಅದನ್ನು ಅರಿಯಬೇಕೆನ್ನುವುದರ ಬಗ್ಗೆ ತೀವ್ರ ಪಿಪಾಸೆಯೂ ಇರಲಿಲ್ಲವಾಗಿದ್ದರೆ ಅಥವಾ ಅವರು ಸಾಮಾನ್ಯ ವ್ಯಕ್ತಿಗಳಂತೆ ದುರ್ಬಲ ಮನಸ್ಕರಾಗಿದ್ದರೆ, ವಿಶ್ವದ ಗೋಜುಗೋಜಲಿನಿಂದ ಖಗೋಳಿಯ ಸಂಯಂತ್ರದ ಸೂತ್ರಗಳನ್ನು ಎಳೆ ಬಿಡಿಸಿ ವಿವರಿಸಲು ಅಷ್ಟು ದೀರ್ಘ ಕಾಲ ಏಕಾಂಗಿಗಳಾಗಿ ಶ್ರಮಿಸಿರುತ್ತಿರಲಿಲ್ಲ. ಯುಗಯುಗಗಳಲ್ಲಿ ಅವತರಿಸಿ ಪ್ರಪಂಚಾದ್ಯಂತ ಹರಡಿಹೋಗಿದ್ದು ಸಂದೇಹಗ್ರಸ್ತ ಜನರಿಂದ ಸುತ್ತುವರಿಯಲ್ಪಟ್ಟಿದ್ದರೂ ತಮ್ಮ ಪ್ರಗಲ್ಭ ಸಾಧನೆ ಸಿದ್ಧಿಗಳ ಮೂಲಕ ಜ್ಞಾತಿಬಾಂಧವರಿಗೆ ಸದಾಕಾಲ ಸರಿದಾರಿ ತೋರಿಸಿರುವ ವಿಜ್ಞಾನ ಸೀಮಾಪುರುಷರ ಮನೋಧರ್ಮವನ್ನೂ ಹಿರಿಮೆಯನ್ನೂ, ಪ್ರಧಾನವಾಗಿ ಅವರ ವೈಜ್ಞಾನಿಕ ಸಂಶೋಧನೆಯ ವ್ಯಾವಹಾರಿಕ ಫಲಿತಾಂಶ ಇಲ್ಲವೇ ಲಾಭಗಳಿಂದ ಮಾತ್ರ ಅಳೆಯುವ ವ್ಯಕ್ತಿಗಳು, ತೀರಾ ಸುಲಭವಾಗಿ ಮಿಥ್ಯಾಭಾವನೆ ತಳೆಯುವುದುಂಟು.

ಈ ಸೀಮಾಪುರುಷರಿಗೆ ಸ್ಫೂರ್ತಿಪ್ರೇರಕವಾದದ್ದು ಯಾವುದು, ಅಸಂಖ್ಯಾತ ವೈಫಲ್ಯಗಳನ್ನು ಎದುರಿಸಿಯೂ ತಮ್ಮ ಉದ್ದೇಶಕ್ಕೆ ಬದ್ಧರಾಗಿ ನಡೆಯಲು ತ್ರಾಣ ನೀಡಿದ್ದು ಯಾವುದು ಎಂಬ ಸಂಗತಿಗಳನ್ನು ಅವೇ ಪರಮಗಮ್ಯ ಉದ್ದೇಶಗಳ ಸಿದ್ಧಿಗಾಗಿ ತನ್ನ ಜೀವನವನ್ನೇ ಮುಡಿಪಾಗಿಟ್ಟ ಒಬ್ಬ ವ್ಯಕ್ತಿ ಮಾತ್ರ ತಿಳಿಯಬಲ್ಲ. ವ್ಯಕ್ತಿಗೆ ಇಂಥ ತ್ರಾಣವೀಯುವ ಆ ಪರಮಚೈತನ್ಯವೇ ಬ್ರಹ್ಮಾಂಡೀಯ ಧಾರ್ಮಿಕ ಸಂವೇದನೆ. ಐಹಿಕ ಭೋಗಲಾಲಸೆಗಳು ಪ್ರಧಾನ ಆಕರ್ಷಣೆಗಳಾಗಿರುವ ಪ್ರಸಕ್ತ ದಿನಗಳಲ್ಲಿ ಗಂಭೀರ ಚಿಂತನಶೀಲ ವೈಜ್ಞಾನಿಕ ಕಾರ್ಯಕರ್ತರು ಮಾತ್ರ ನಿಜವಾದ ಧಾರ್ಮಿಕ ವ್ಯಕ್ತಿಗಳೆಂಬುದಾಗಿ ಸಮಕಾಲೀನ ಲೇಖಕನೊಬ್ಬ ಹೇಳಿರುವುದು ಅತ್ಯಂತ ಯುಕ್ತವಾಗಿದೆ.

ಪ್ರಗಲ್ಭ ವಿಜ್ಞಾನಮತಿಗಳ ಶ್ರೇಣಿಯಿಂದ ಸ್ವಂತ ಧಾರ್ಮಿಕ ಸಂವೇದನೆ ಇರುವ ಯಾರೇ ಒಬ್ಬನನ್ನು ಪ್ರತ್ಯೇಕವಾಗಿ ಆಯ್ದು ಗುರುತಿಸುವುದು ಅತಿ ಕಠಿಣ. ಆದರೆ ಈ ಸಂವೇದನೆ ಮುಗ್ಧನೊಬ್ಬನ ನಿಷ್ಕಪಟ ಧಾರ್ಮಿಕತೆಗಿಂತ ತೀರ ಬೇರೆಯೇ. ಈತ (ಮುಗ್ಧ ವ್ಯಕ್ತಿ) ದೇವರ ಕೃಪೆಯಿಂದ ತನಗೆ ಒಳಿತಾಗುವುದೆ ಎಂದು ಹರ್ಷಿಸುತ್ತಾನೆ; ಅವಕೃಪೆಯಿಂದ ಕೆಡುಕಾಗುವುದೆಂದು ಹೆದರುತ್ತಾನೆ. ತಂದೆಯ ಬಗ್ಗೆ ಮಗುವಿನ ಮನದಲ್ಲಿರುವ ಭಾವನೆಯ ಭವ್ಯ ರೂಪವಿದು; ದೇವರ ಜೊತೆ ತನಗೊಂದು ವೈಯಕ್ತಿಕ ಸಂಬಂಧವಿದೆ, ಅದು ಎಷ್ಟೇ ರುದ್ರ ಗಂಭೀರ ಸ್ವರೂಪದ್ದೇ ಆಗಿರಲಿ ಎನ್ನುವ ಪರಿಸ್ಥಿತಿ.

ವಿಜ್ಞಾನಿ ಹೀಗಲ್ಲ. ಈತ ವಿಶ್ವರೂಪಿ ಕಾರಣತೆಯ ಪ್ರಜ್ಞೆಯಿಂದ ದೀಪ್ತನಾಗಿರುತ್ತಾನೆ. ಈತನ ದೃಷ್ಟಿಯಲ್ಲಿ ಭವಿಷ್ಯಕಾಲದ ಪ್ರತಿಯೊಂದು ತುಣುಕೂ ಭೂತಕಾಲದ್ದರಂತೆಯೇ ಅಗತ್ಯ ಹಾಗೂ ನಿರ್ಧಾರಿತ. ನೈತಿಕತೆ ಕುರಿತಂತೆ ದೈವಿಕವಾದದ್ದು ಏನೂ ಇಲ್ಲ. ಇದೊಂದು ಶುದ್ಧ ಮಾನವ ವ್ಯವಹಾರ. ಈತನ ಧಾರ್ಮಿಕ ಸಂವೇದನೆ ನೈಸರ್ಗಿಕ ನಿಯಮದಲ್ಲಿ ಪ್ರಕಟವಾಗುವ ಅದ್ಭುತ ಸುಸಾಂಗತ್ಯ ಕುರಿತು ದಿವ್ಯ ಮೂಕ ವಿಸ್ಮಯವಾಗಿ ಮೈದಳೆಯುತ್ತದೆ. ಈ ಸುಸಾಂಗತ್ಯದ ಅಂತರಾಳದಲ್ಲಿ ಪರಮಶ್ರೇಷ್ಠ ಮತ್ತು ಪರಿಶುದ್ಧ ಧೀಶಕ್ತಿ ಹುದುಗಿದೆ. ಇದರ ಜೊತೆ ಹೋಲಿಸುವಾಗ ಮನುಕುಲದ ವ್ಯವಸ್ಥಿತ ಚಿಂತನೆ ವರ್ತನೆಗಳೆಲ್ಲವೂ ತೀರ ಕ್ಷುದ್ರ ಅಲೆಗಳೆನ್ನಿಸುತ್ತವೆ. ಸ್ವಾರ್ಥಮೂಲ ಪ್ರಲೋಭನೆಯ ಬಂಧನದಿಂದ ಮುಕ್ತನಾಗಿರುವುದರಲ್ಲಿ ಈತ ಯಶಸ್ವಿಯಾಗಿ ಉಳಿದಿರುವ ತನಕ ಈ ಸಂವೇದನೆ ಈತನ ಜೀವನದ ಮಾರ್ಗದರ್ಶಕ ಸೂತ್ರವಾಗಿರುತ್ತದೆ. ಎಲ್ಲ ಯುಗಗಳ ಧಾರ್ಮಿಕ ಸೀಮಾಪುರುಷರನ್ನೂ ಹಿಡಿದಿಟ್ಟಿದ್ದ ಆ ವಿಶಿಷ್ಟ ಚೇತನಕ್ಕೆ ಇದು ಸನ್ನಿಕಟವಾಗಿ ಸಂಬಂಧಿತವಾಗಿದೆ ಎಂಬುದು ಪ್ರಶ್ನಾತೀತ.

ಡಿವಿಜಿಯವರ ಕಗ್ಗ ಇದೇ ಭಾವನೆಯನ್ನು ಬಿಂಬಿಸಿದೆ :

ಜೀವ ಜಡರೂಪ ಪ್ರಪಂಚವನದಾವುದೋ
ಆವರಿಸಿಕೊಂಡುಮೊಳನೆರೆದುಮಿಹುದಂತೆ
ಭಾವಕೊಳಪಡದಂತೆ ಅಳತೆಗಳವಡದಂತೆ
ಆ ವಿಶೇಷಕೆ ಮಣಿಯೊ - ಮಂಕುತಿಮ್ಮ

ಜಿ. ಟಿ. ನಾರಾಯಣರಾವ್
೮ ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ
ಮೈಸೂರು - ೫೭೦ ೦೦೯

# ಎರಡು ಗಜ಼ಲ್‌ಗಳು



ಚಿದಾನಂದ ಸಾಲಿ
ಸಿರಿವಾರ - ೫೮೪ ೧೨೯
ರಾಯಚೂರು ಜಿಲ್ಲೆ

– ೧ –

ಚಳಿಯಂತೆ ಕಾಡುವುದು ಅವಳ ನೆನಪು
ಸೋನೆಮಳೆಯಂತೆ ಜಿಟಿಜಿಟಿ ಆಡುವುದು ಅವಳ ನೆನಪು ॥೧॥
ಅಮರತ್ವವ ದಯಪಾಲಿಸಿದ ದೇವರ್ಯಾವನವನು ?
ನದಿಯ ನಿನಾದದೊಲು ಹಾಡೇ ಹಾಡುವುದು ಅವಳ ನೆನಪು ॥೨॥
ಮಲಗೇಳುವವರೆಗೆ ಮರೆಗಿರುವುದು ಕರುಣಾಮಯಿ
ಏಳುತಲೆ ಅರುಣನ ತುಟಿಯಾಗಿ ಮೂಡುವುದು ಅವಳ ನೆನಪು ॥೩॥
ನಾರಿ, ಧರಿಣಿ, ಜನಪ್ರೀತಿಗಳೆಲ್ಲ ನಿನಗೇ ಇರಲಿ 'ಸಾಲಿ'
ಕಾಡುವ ತೋಷವೊಂದು ನನಗೇ ಬೇಕೆಂದು ಬೇಡುವುದು
ಅವಳ ನೆನಪು ॥೪॥

– ೨ –

ಹಸಿವಿನ ಆಳ, ಅಗಲ, ನಿಲುವು – ಬಡವನಿಗಷ್ಟೇ ಗೊತ್ತು
ಪ್ರೇಮದ ಹಾಡು–ಪಾಡು ಎರಡೂ ವಿರಹಿಗಷ್ಟೇ ಗೊತ್ತು ॥೧॥
ಆಗಲೇ ನೆನಪಾಗುವ ಕಳೆದ ಕೀಲಿಕೈಯ ಶಕ್ತಿ
ಮುಚ್ಚಿದ ಬಾಗಿಲಲಿ ಪೆಚ್ಚಾಗಿ ಕುಂತವನಿಗಷ್ಟೇ ಗೊತ್ತು ॥೨॥
ಬದುಕೆಷ್ಟು ಚೆಲುವು, ವಿಶಾಲ, ಏನದರ ಮಹತಿಯು
ಸಾವಿನ ಮನೆಯ ಬಾಗಿಲ ಬಳಿ ನಿಂತವನಿಗಷ್ಟೇ ಗೊತ್ತು ॥೩॥
'ಅದು', ಅಧರ, ಮಧು ಮತ್ತು ಮಧುಶಾಲೆಗಳ ಸವಿಯು
ಒಡೆದು ಹೇಳಬಾರದು ಅವೆಲ್ಲ 'ಮತ್ತ' ಸಾಲಿಗಷ್ಟೇ ಗೊತ್ತು ॥೪॥

ಅಮ್ಮನಿಗೆ ಈಚೆಗೆ ಕಿವಿ ಚೆನ್ನಾಗಿ ಕೇಳಿಸುತ್ತಿಲ್ಲವೆಂದು ಅಪ್ಪ ಗೊಣಗುತ್ತಿದ್ದಾರೆ. ''ನಿಮ್ಮ ಜೋರಿಗೆ ಅಮ್ಮನ ಕಿವಿ ಮಂದವಾಗಿರಬೇಕು'' ಎಂದು ನಾನು ಅಪ್ಪನನ್ನು ಛೇಡಿಸಿದೆ. ''ಮದುವೆಗೆ ಮುಂಚಿನಿಂದಲೂ ಹೀಗೆಯೇ'' ಅಂತ ಅಮ್ಮನೂ ತಮಾಷೆಗೆ ಹೇಳಿದಳು. ಸತ್ಯವೇನೆಂದರೆ, ವಯಸ್ಸಿನ ಪ್ರಭಾವದಿಂದ ಅಪ್ಪನಿಗೂ 'ಅಂಗಡಿ ದೂರ'ವಾಗಿದೆ.

**ಬಡತನವೇ ಬದುಕು**

ಇಪ್ಪತ್ತೇಳು ವರ್ಷಕ್ಕೆ ಅಪ್ಪನಿಗೆ ಎರಡನೇ ಸಂಬಂಧವಾಗಿ ನಮ್ಮ ಸೋಗೆ ಮಾಡಿನ ಮನೆಹೊಕ್ಕ ನನ್ನಮ್ಮ ಸುಖ ಉಂಡ ಜೀವಿಯಲ್ಲ. ತವರುಮನೆಯಲ್ಲೂ ತುಂಬು ಸಂಸಾರ. ನನ್ನಜ್ಜನಿಗೆ ಹನ್ನೊಂದು ಮಂದಿ ಮಕ್ಕಳು. ಮರದ ವ್ಯಾಪಾರ ಮಾಡುತ್ತಿದ್ದ ಅಜ್ಜನಿಗೆ (ಮರದ ಗಣಪತಿ ಎಂಬುದು ಅವರಿಗೆ ಅನ್ವರ್ಥ ನಾಮ) ಇನ್ನೆರಡು ಆದಾಯ ಮೂಲಗಳಿದ್ದವು: ಪ್ರತಿಯೊಂದು ಮಳೆಗಾಲದಲ್ಲೂ ಹೊಳೆನೀರಲ್ಲಿ ಮುಳುಗುತ್ತಿದ್ದ ಎರಡು ಗದ್ದೆಗಳು ಹಾಗೂ ಬೇಸಿಗೆಯಲ್ಲಿ ನೀರು ಮತ್ತು ಮಳೆಗಾಲದಲ್ಲಿ ಗೊಬ್ಬರ ಸಾಲದೆ ಆಕಾಶಕ್ಕೆ ಬಾಯ್ತೆರೆದು ನಿಂತ ಭರ್ಚಿಗಳಂತೆ ಇದ್ದ ಅಡಿಕೆ ಮರಗಳ ತೋಟ.

ಆ ಮನೆಯಲ್ಲಿ ಎಷ್ಟು ಬಡತನವಿತ್ತು ಎಂಬುದಕ್ಕೆ ಒಂದು ಪ್ರಮಾಣವಿದೆ. ಬೇರೆ ಮನೆಯ ಹೆಣ್ಣುಮಕ್ಕಳೆಲ್ಲ ಹದಿನೈದು-ಹದಿನಾರಕ್ಕೆ ಮದುವೆಯಾಗಿ ಗಂಡನ ಮನೆ ಸೇರುತ್ತಿದ್ದ ಕಾಲದಲ್ಲಿ, ಮದುವೆಯಾಗಲು ನನ್ನಮ್ಮ-ಚಿಕ್ಕಮ್ಮಂದಿರು ಇಪ್ಪತ್ತೇಳು ವರ್ಷಗಳ ಕಾಲ ಕಾಯಬೇಕಾಯಿತು. ಕಿತ್ತುತಿನ್ನುವ ಬಡತನದ ಪ್ರತಿದಿನವೂ ಏಕಾದಶಿ. ಆದರೆ, ಒಂದು ಪೊಟ್ಟಣ ಕಾರಶೇವ್ ಮತ್ತು ಅರ್ಧಸೇರು ಅವಲಕ್ಕಿ ತಂದ ದಿನ ಮನೆಯಲ್ಲಿ ಮಹಾನವಮಿ. ಎಲ್ಲರೂ ಸೇರಿ ಇಡೀ ದಿನ ದುಡಿದರೂ ಗಂಜಿಗೆ ತತ್ವಾರ. ಊಟದ ಹೊತ್ತಿಗೆ ಹಲಸಿನಹಣ್ಣು ಬಿಡಿಸುತ್ತಿದ್ದರು. ತಪ್ಪಿದರೆ, ಸುಟ್ಟಿದ್ದೋ, ಬೇಯಿಸಿದ್ದೋ ಹಲಸಿನ ಬೀಜ – ಇಷ್ಟನ್ನೇ ತಿಂದು ಬದುಕಿದ, ಬೆಳೆದ ಸಂಸಾರ ಅದು.

''ಮನೆಯಲ್ಲಿ ಕೆಲಸಕ್ಕೆ ಜನವಿಲ್ಲ. ಹುಡುಗಿಯರು ಶಾಲೆಗೆ ಮಣ್ಣು ಹೊತ್ತದ್ದು ಸಾಕು'' ಎಂದು ಅಜ್ಜ ಘೋಷಿಸಿದರು. ಶಾಲೆಯಲ್ಲಿ ಪಾನಮತ್ತರಾಗಿ ಬಂದು ಮಕ್ಕಳನ್ನು ಹಿಂಸಿಸುತ್ತಿದ್ದ ಅಧ್ಯಾಪಕರೊಬ್ಬರ ಕಾಟವನ್ನು ತಡೆಯಲಾದರೆ ಅಮ್ಮ ನಾಲ್ಕನೇ ಇಯತ್ತೆಗೆ ಶಾಲೆಗೆ ವಿದಾಯ ಹೇಳಿದರು.

> 'ನಿನ್ನ ಆರೋಗ್ಯಕ್ಕೆ ಇದೆಲ್ಲ ಒಳ್ಳೆಯದಲ್ಲಮ್ಮ' ಎಂದು ಎಷ್ಟು ಹೇಳಿದರೂ ಕೇಳದೆ ಹೊಗೆಸೊಪ್ಪು, ಅಡಿಕೆ ಜಜ್ಜಿ ಬಾಯಲ್ಲಿ ಹಾಕಿ ವೀಳ್ಯ ಮೆಲ್ಲುವ ನನ್ನಮ್ಮನಿಗೆ ಈಗ ಅಪ್ಪನೇ ಆತ್ಮಸಖ. ನಾವೆಲ್ಲ ಉದ್ಯೋಗ ನಿಮಿತ್ತ ಮನೆಯಿಂದ ದೂರವಿದ್ದೇವೆ. 'ನಾನು ಬಡವಿ, ಆತ ಬಡವ, ಒಲವೆ ನಮ್ಮ ಬದುಕು' ಎಂಬಂತೆ ಕಡೆಗಾಲದಲ್ಲಿ ಒಬ್ಬರಿಗೊಬ್ಬರು ಆಸರೆಯಾಗಿದ್ದಾರೆ. ಎಲ್ಲ ಚಟಗಳನ್ನೂ ಸ್ವಯಂ ಪ್ರೇರಣೆಯಿಂದ ತೊರೆದು ಅಪ್ಪನೂ ಹೊಸಮನುಷ್ಯರಾಗಿದ್ದಾರೆ. ಈಗ ನನ್ನಮ್ಮನಿಗೆ ಇರುವುದು ಒಂದೇ ಆಸೆ: ಸಾಯುವ ಮುನ್ನ ಒಮ್ಮೆಯಾದರೂ ಎರಡೆಳೆಯ ಚಿನ್ನದ ಕರಿಮಣಿಸರ ಧರಿಸಬೇಕು!

ಅಮ್ಮನಿಗೆ ತವರುಮನೆ-ಗಂಡನ ಮನೆ ಎರಡಕ್ಕೂ ವ್ಯತ್ಯಾಸವೇ ತಿಳಿಯಲಿಲ್ಲ. ಬಡತನ ಎರಡು ಕಡೆಗಳಲ್ಲಿಯೂ ಭೇದ ತೋರಿರಲಿಲ್ಲ. ಮಳೆಗಾಲದಲ್ಲಿ ಮನೆಯೊಳಗೆ ಸೋರದ ಜಾಗ ಹುಡುಕಿಕೊಂಡು ಮಲಗಿದರೂ ಗೊಬ್ಬರದ ಹುಳುಗಳು ಸೋಗೆಯ ಮಾಡಿನಿಂದ ತುಪು ತುಪು ಉದುರುತ್ತಿದ್ದವು.

ಅಪ್ಪನಿಗೆ ಮೊದಲ ಹೆಂಡತಿಯಲ್ಲಿ ಐವರು ಮಕ್ಕಳು – ನಾಲ್ಕು ಗಂಡು ಒಂದು ಹೆಣ್ಣು. ಬಾಣಂತಿ ಕಾಯಿಲೆಯಿಂದ ನನ್ನ ದೊಡ್ಡಮ್ಮ ತೀರಿ ಕೊಂಡಿದ್ದರು. ಅದೇ ಹೊತ್ತಿಗೆ ಕೊಲೆ ಆರೋಪ ಹೊತ್ತು ನಮ್ಮಪ್ಪ ಎಂಟು ತಿಂಗಳು ಜೈಲಿನಲ್ಲಿದ್ದರು. ಆಗ ಅಕ್ಕ ತೀರಾ ಪುಟ್ಟ ಮಗು. ಆಕೆಯನ್ನು ಗುಬ್ಬಿ ಅಂತಲೇ ಕರೆಯುತ್ತಿದ್ದುದು. ಆ ಮಕ್ಕಳನ್ನೆಲ್ಲ ತಿಕ್ಕಿ ತೊಳೆದು, ''ಪರವಾಗಿಲ್ಲ, ಮಕ್ಕಳು ಸಾಕಷ್ಟು ಬೆಳ್ಳಗೇ ಇವೆ'' ಅಂತ ಅಕ್ಕಪಕ್ಕದವರೆಲ್ಲ ಹೇಳುವ ಹಾಗೆ ಮಾಡಿದ್ದಳು,

ಅನಂತ ಹುದೆಂಗಜೆ

# ಅಮ್ಮ ನಿನ್ನ ಒಲುಮೆಗೆ



ಅಮ್ಮ. ಆ ಮಕ್ಕಳೂ ತನ್ನವೇ ಎಂಬ ಕಕ್ಕುಲತೆ ಆಕೆಗಿತ್ತು.

ಅಮ್ಮನಿಗೆ ಮನೆಯಲ್ಲಿ ಪ್ರೀತಿಯ ಕೊರತೆಯಿತ್ತು. ಏಕೆಂದರೆ, ಕುಡಿತ, ಇಸ್ಪೀಟಿನ ಬೆನ್ನು ಹತ್ತಿದ ಅಪ್ಪ ಮನೆಯಲ್ಲಿ ಇರುತ್ತಿದ್ದುದೇ ಕಮ್ಮಿ. ಒಮ್ಮೊಮ್ಮೆ ಮೂರ್ನಾಲ್ಕು ದಿನ ಮನೆ ಕಡೆ ಮುಖ ಹಾಕುತ್ತಿರಲಿಲ್ಲ. ಮುಟ್ಟಾಗಿರುವಾಗ ಅಮ್ಮ ಅಡುಗೆಮನೆಯ ಕಿಟಕಿಯ ಹೊರಗೆ ನಿಂತು ನೀಡುತ್ತಿದ್ದ ಸೂಚನೆಗಳಿಗೆ ಅನುಸಾರವಾಗಿ ನಾನು ತಂಗಿಯ ಜೊತೆಗೂಡಿ ಅಡುಗೆ ಮಾಡುತ್ತಿದ್ದೆ.

**ಅಮ್ಮನಿಗೇಕೆ ಶಿಕ್ಷೆ?**

ಕುಡಿದ ಅಮಲಿನಲ್ಲಿ ತೂರಾಡುತ್ತಾ, ಯಾರ್ಯಾರನ್ನೋ ಬಯ್ಯುತ್ತಾ ಅಪ್ಪ ಮನೆಗೆ ಬಂದರೆಂದರೆ ಅಮ್ಮನ ಆದಿಯಾಗಿ ನಮಗೆಲ್ಲರಿಗೂ ನಡುಕ. ಚಿಕ್ಕಂದಿನಲ್ಲಿ ನಾನು

ಶಾಲೆಗೆ ಸರಿಯಾಗಿ ಹೋಗುತ್ತಿರಲಿಲ್ಲ. ಮನೆಯಿಂದ ಬುತ್ತಿ, ಚೀಲ ಕಟ್ಟಿಕೊಂಡು ಹೊರಡುತ್ತಿದ್ದೆ, ಸಂಜೆ ಮನೆಗೂ ಮರಳುತ್ತಿದ್ದೆ. ಶಾಲೆಗೆ ಮಾತ್ರ ಚಕ್ಕರ್ ! ಒಮ್ಮೆ ನಾನು ಶಾಲೆಗೆ ಹೋಗದೆ ಮೋರಿಯ ಅಡಿಯಲ್ಲಿ ಅವಿತು ಕೂತಿದ್ದನ್ನು ಅನಿರೀಕ್ಷಿತವಾಗಿ ಪೇಟೆಗೆ ಹೊರಟಿದ್ದ ಅಪ್ಪ ನೋಡಿಯೇಬಿಟ್ಟರು. ಸರಿ, ನನ್ನ ರಟ್ಟೆ ಹಿಡಿದು ದರದರನೆ ಎಳೆದೊಯ್ದು ಬಾರುಕೋಲಿನಿಂದ ನನಗೂ, ಅಮ್ಮನಿಗೂ ಸಾಯ ಬೀಳುವಂತೆ ಹೊಡೆದರು. ಅದೇ ಕೊನೆ. ಮತ್ತೆಂದೂ ನಾನು ಶಾಲೆ ತಪ್ಪಿಸಲಿಲ್ಲ. ಆದರೆ, ಒಂದು ಪ್ರಶ್ನೆ ಇಂದಿಗೂ ನನ್ನನ್ನು ಕಾಡುತ್ತಿದೆ : ಶಾಲೆ ತಪ್ಪಿಸಿದವನು ನಾನು. ಅಮ್ಮನಿಗೇಕೆ ಶಿಕ್ಷೆ ?




**ಬೊಳ್ಳಿ ಎಮ್ಮೆ**

ತನಗೇ ಸರಿಯಾಗಿ ಉಂಡು, ಉಡುವುದಕ್ಕಿಲ್ಲ ದಿದ್ದರೂ ಅಮ್ಮನಿಗೆ ಎಮ್ಮೆ ಹಸುಗಳೆಂದರೆ ಬಹಳ ಅಕ್ಕರೆ. ಅಪ್ಪ ಕೂಡ ಮೈಲು ದೂರದಿಂದ ಸೊಪ್ಪು-ಹುಲ್ಲು ತಂದು ಹಟ್ಟಿಗೆ ಹಾಕದ ಹೊರತು ಊಟ ಮಾಡುವುದಿರಲಿ, 'ತೀರ್ಥ'ವನ್ನೂ ಮುಟ್ಟುತ್ತಿರಲಿಲ್ಲ. ನಮ್ಮಲ್ಲಿ ಒಂದು ಬಿಳಿ ಎಮ್ಮೆಯಿತ್ತು. ಚೆನ್ನಾಗಿ ಹಾಲು ಕೊಡುತ್ತಿದ್ದುದರಿಂದ ಆ 'ಬೊಳ್ಳಿ' ಅಮ್ಮನ ಪ್ರಾಣವೇ ಆಗಿತ್ತು. ಅಮ್ಮ ತೋಟಕ್ಕೆ ಹೋದರೂ ಸಾಕು – ಅವಳು ಮನೆಯೊಳಗೆ ಬರುವವರೆಗೂ ಆ ಎಮ್ಮೆ ಕೂಗುತ್ತಲೇ ಇರುತ್ತಿತ್ತು. ಅದು ಬಚ್ಚುವವರೆಗೂ ಅಮ್ಮ ಮನೆ ಬಿಟ್ಟು ಕದಲುತ್ತಿರಲಿಲ್ಲ.

**ಗಟ್ಟಿಗಿತ್ತಿ**

ಅಮ್ಮ ಗಟ್ಟಿಗಿತ್ತಿ ಹೆಣ್ಣು. ಆಕೆಯಿಂದಾಗಿಯೇ ನಮ್ಮ ಮನೆ-ಮಾನ ಉಳಿಯಿತೆಂದು ನಮ್ಮತ್ತೆ ಹೇಳುವುದರಲ್ಲಿ ಉತ್ಪ್ರೇಕ್ಷೆಯಿಲ್ಲ. ಬೆಳಿಗ್ಗೆ ಎದ್ದು ಅಡುಗೆಮನೆ ಹಾಗೂ ಬಚ್ಚಲೊಲೆಯಲ್ಲಿ ಬೆಂಕಿ ಊದುತ್ತಿರುವಾಗ ಹೊಗೆ ಕಣ್ಣು-ಮೂಗಿನೊಳಗೆ ತುಂಬಿ ಕೆಮ್ಮುತ್ತಾ, ಕಣ್ಣೀರು ಸುರಿಸುತ್ತಾ ಆಕೆ ಕೆಲಸ ಮಾಡುತ್ತಿದ್ದರೆ, ಆ ಕಣ್ಣೀರು ಹೊಗೆಯಿಂದಾಗಿ ಬಂತೋ, ಒಳಗಿನಿಂದ ದುಃಖ ಒದ್ದುಕೊಂಡು ಬಂತೋ ಎಂದು ತಿಳಿಯದೆ ಗಾಬರಿಯಾಗುತ್ತಿದ್ದೆ.

ಅಮ್ಮ ಗಟ್ಟಿಗಿತ್ತಿಯೇ. ಆದರೆ ಒಂಟಿಯಾಗಿ ಅವಳೆಂದೂ ಪೇಟೆಗೂ ಹೋದವಳಲ್ಲ. ತವರು ಮನೆಗೆ ಹೋಗಲಿಕ್ಕೂ ಯಾರಾದರೂ ಜೊತೆಗೆ ಬೇಕೇ ಬೇಕು. ಮೂರು ಬಸ್ಸು ಬದಲಿಸಬೇಕು – ಎಂಬುದೇ ಅವಳ ಅಂಜಿಕೆಗೆ ಕಾರಣ. ''ಏನಮ್ಮಾ? ಎಲ್ಲ ಬಸ್ಸುಗಳನ್ನೂ ಒಂದೇ ಸಾರಿ ಬದಲಿಸಬೇಕೇ ?'' ಎಂದು ಕೇಳಿದಾಗ ಅಳುಮುಖ ಮಾಡಿಕೊಂಡಳು.

''ಹಾಗಲ್ಲ ಕಣೋ. ಅವತ್ತೊಂದು ಸಾರಿ ಧೈರ್ಯಮಾಡಿ ಒಬ್ಬಳೇ ಹೋಗಿದ್ದೆನಲ್ಲ. ಆಗ ಬಜಗೋಳಿಯಿಂದ ಶೃಂಗೇರಿಗೆ ಹೋಗುವ ಬಸ್ಸನ್ನೇರಿದ್ದೆ. ಕೂಡಬೆಟ್ಟು ಬರುವ ವೇಳೆಗೆ ಇಳಿಯಲಿಕ್ಕೆ ಗೊತ್ತಾಗಲಿಲ್ಲ. ಯಮವೇಗದಲ್ಲಿ ಸಾಗಿದ ಬಸ್ಸು ಘಾಟಿ ಬುಡದಲ್ಲಿ ನನ್ನನ್ನು ಇಳಿಸಿ ಮುಂದೆ ಸಾಗಿತು. ಆ ನಡು ಮಧ್ಯಾಹ್ನ ಉರಿಬಿಸಿಲಲ್ಲಿ ಕಾಲಿಗೆ ಚಪ್ಪಲಿಯೂ ಇಲ್ಲದೆ ಒಂಟಿಯಾಗಿ ನಡೆದು ಬರುವಾಗ ಎಷ್ಟು ಭಯವಾಗಿತ್ತು ಗೊತ್ತಾ?'' ಎಂದು ಕೇಳಿ ಅತ್ತುಬಿಟ್ಟಳು.

**ಶಿಕ್ಷಣಕ್ಕೆ ಪ್ರೇರಣೆ**

ಅಮ್ಮ ತಾನು ಹೆಚ್ಚು ಓದಿಲ್ಲವಾದರೂ ನನ್ನ ಶಿಕ್ಷಣಕ್ಕೆ ಪ್ರೇರಣೆ ನೀಡಿದಳು. ನನ್ನ ಹರಿದ ಚಡ್ಡಿಗಳನ್ನು, ಹಕ್ಕಿಯ ರೆಕ್ಕೆಗಳಂತೆ ಹೊಲಿಗೆ ಬಿಚ್ಚಿ, ಗುಂಡಿ ಕಿತ್ತು ಹಾರುತ್ತಿದ್ದ ಅಂಗಿಗಳನ್ನು ಹೊಲಿದು ಶಾಲೆಗೆ ಕಳಿಸಿದಳು. ಶನಿವಾರ ಮಧ್ಯಾಹ್ನ ಬಿಸಿಲಲ್ಲಿ ನಡೆದು ಬರುತ್ತೇವಲ್ಲ– ಎಂಬ ಕನಿಕರದಿಂದ ನಮ್ಮ ಕೈಗೆ ನಾಲ್ಕಾಣೆ ಕೊಡುತ್ತಿದ್ದಳು, ಚಾಕಲೇಟು ತಿನ್ನಲಿ ಎಂದು. ಕಬಡ್ಡಿ ಆಡಿ ಕೆಸರು ಮೆತ್ತಿಕೊಂಡು ಮನೆಗೆ ಮರಳುತ್ತಿದ್ದ ನಮ್ಮ ಮೈತೊಳೆದು, ಬಟ್ಟೆ ಒಗೆದು ಶುಚಿತ್ವದ ಪಾಠ ಹೇಳಿಕೊಟ್ಟಳು. ಅಪ್ಪನ ಜೇಬಿನಿಂದ ದುಡ್ಡು ತೆಗೆದಿಟ್ಟು ನಮಗೆ ಬಟ್ಟೆ, ಬುತ್ತಿ, ಪುಸ್ತಕ, ಚೀಲ, ಚಪ್ಪಲಿಗಳನ್ನು ಹೊಂದಿಸುತ್ತಿದ್ದಳು. ಅವಳಿಗೆ ಮಾತ್ರ ವರ್ಷಕ್ಕೆರಡೇ ಸೀರೆ !

ಶಾಲೆಯಿಂದ ಆಗೀಗ ನಾನು ಸ್ಪರ್ಧೆಗಳಲ್ಲಿ ಭಾಗವಹಿಸಿ ಗೆದ್ದು ತರುತ್ತಿದ್ದ ಸ್ಟೀಲ್ ತಟ್ಟೆ, ಲೋಟ, ಪುಸ್ತಕ ಇತ್ಯಾದಿ ಬಹುಮಾನಗಳನ್ನು ಮನೆಗೆ ಬಂದವರಿಗೆಲ್ಲ ಹೆಮ್ಮೆಯಿಂದ ತೋರಿಸುತ್ತಿದ್ದಳು. ಬಿ.ಎ.ಯಲ್ಲಿ ನನಗೆ ರ್‍ಯಾಂಕ್ ಬಂದಾಗ ಅಮ್ಮನಿಗಿಂತ ಹೆಚ್ಚು ಸಂತೋಷ ನನಗೂ ಆಗಿರಲಿಕ್ಕಿಲ್ಲ.

ಅಮ್ಮ ನಾನು ತುಂಬ ಓದಬೇಕೆಂಬ ಆಸೆಯನ್ನು ಇಟ್ಟಿದ್ದಳು. ಇದು ನನ್ನೊಳಗೇ ಸಾಹಿತ್ಯಾಭಿರುಚಿಯನ್ನು ಮೊಳೆಯಿಸಿತು. ನನ್ನ ಮೊದಲ ಕೆಲವು ಕತೆಗಳಿಗೆ ಅಪ್ಪನೇ ವಿಮರ್ಶಕ. ನನ್ನ ಸಾಹಿತ್ಯರಾಶಿಯಿಂದಾಗಿ ಎರಡು ದಿನ ಬಚ್ಚಲೊಲೆಯಲ್ಲಿ ಚೆನ್ನಾಗಿ ನೀರು ಕಾಯಿತು. ನನ್ನ ಸಾಹಿತ್ಯದಿಂದ ಇಷ್ಟಾದರೂ ಪ್ರಯೋಜನವಾಯಿತಲ್ಲ – ಎಂದು ಸಮಾಧಾನ ಮಾಡಿಕೊಂಡು ಆ ಬಿಸಿನೀರನ್ನು ಪೂರ್ತಿಯಾಗಿ ನಾನೇ ಸ್ನಾನಮಾಡಿ ಮುಗಿಸಿ ಅಪ್ಪನ ಮೇಲೆ ಸೇಡು ತೀರಿಸಿಕೊಂಡೆ. ಆದರೆ, ಮುಂದೆ ನನ್ನ ಕೆಲವು ಬರೆಹಗಳು ಗುಟ್ಟಾಗಿ (ತುರ್ತು ಪರಿಸ್ಥಿತಿಯಲ್ಲಿ ಆಗುತ್ತಿದ್ದಂತೆ) ಪತ್ರಿಕಾಲಯಗಳಿಗೆ ರವಾನೆಯಾಗಿ, ಪ್ರಕಟವೂ ಆಗಿ, ಒಂದೆರಡು ಕಡೆಗಳಿಂದ ಸಂಭಾವನೆಯೂ ಬಂತು. ಅಲ್ಲಿಗೆ ಅಪ್ಪ ತಮ್ಮ 'ವಿಮರ್ಶಕನ' ಸ್ಥಾನಕ್ಕೆ ಸ್ವಯಂ ನಿವೃತ್ತಿ ಘೋಷಿಸಿದರು.

ಆಗೀಗ ನನ್ನ ಲೇಖನಗಳು ಪ್ರಕಟಗೊಂಡು ಪತ್ರಿಕೆಗಳನ್ನು ತೆಗೆದುಕೊಂಡು ಅಮ್ಮ ಓದುತ್ತಿದ್ದಳು. 'ಓದಲಿಕ್ಕೇ ಇಷ್ಟು ಕಷ್ಟವಾದರೆ ಇನ್ನು ಬರೆಯುವುದೆಷ್ಟು ತ್ರಾಸದ ಕೆಲಸವೋ!' ಎಂದು ತನ್ನಷ್ಟಕ್ಕೇ ಗೊಣಗುತ್ತಿದ್ದಳು. ಆದರೆ, ನನಗೆ ನಿಜಕ್ಕೂ ಸಂತೋಷವಾಗುತ್ತಿದ್ದುದು – ಅಪ್ಪ ಆ ಲೇಖನಗಳನ್ನು ಓದಿದಾಗ.

**ಆಧುನಿಕತೆಯ ಗಾಳಿ**

ಹತ್ತು ವರ್ಷಗಳಿಂದೀಚೆಗೆ ನಮ್ಮ ಮನೆಯಲ್ಲೂ ಬದಲಾವಣೆಯ ಗಾಳಿ ಬೀಸಿದೆ. ಗೋಬರ್ ಗ್ಯಾಸ್‌ನಿಂದಾಗಿ ಅಮ್ಮನಿಗೆ ಬೆಳಗ್ಗೆದ್ದು ಹೊಗೆ ಕುಡಿಯುವ ಕಷ್ಟ ತಪ್ಪಿದೆ. ಛಾವಣಿಗೆ ಹೆಂಚು ಹಾಕಿಸಿದ್ದು ಅವಳಿಗೆ ಖುಷಿಯ ವಿಷಯವಾಗಿದೆ. ಪಾಯಿಖಾನೆ ಕಟ್ಟಿಸಿ ಶೌಚಕ್ಕೆ ಗುಡ್ಡ ಅಲೆಯುವುದು ತಪ್ಪಿದ್ದರಿಂದ ಸಮಾಧಾನವಾಗಿದೆ. ಚಾವಡಿಗೆ ಸಿಮೆಂಟ್ ಹಾಕಿಸಿದಾಗ, 'ಅಬ್ಬಾ ! ಅಂತೂ ಒಂದು ಕೋಣೆಗೆ ಸೆಗಣಿ ಸಾರಿಸುವುದು ತಪ್ಪಿತು !' ಎಂದು ನಿಟ್ಟುಸಿರು ಬಿಟ್ಟಳು. ವಿದ್ಯುದ್ದೀಪಗಳ ಮುಂದೆ ಹೊಗೆ ಕಾರುವ ಚಿಮಿಣಿ ದೀಪಗಳು ಮಂಕಾದಾಗ ಆ ಬದಲಾವಣೆಗೂ ಬೇಗನೆ ಹೊಂದಿಕೊಂಡಳು.

ಜೀತದಾಳಿನಂತೆ ದುಡಿದು, ಎಲ್ಲವನ್ನೂ ಸಹಿಸಿಕೊಂಡು ಹಣ್ಣಾದ ಅಮ್ಮ ಈಗ ಅರವತ್ತರ ಹರೆಯಕ್ಕೆ ಕಾಲಿರಿಸುತ್ತಿದ್ದಾಳೆ. ಕೂದಲಲ್ಲಿ ಬೆಳ್ಳಿ ಸರಿಗೆಗಳು, ಕೆನ್ನೆಯಲ್ಲಿ ನೆರಿಗೆಗಳು ಇಣುಕಿವೆ. ಕಷ್ಟಗಳೆಲ್ಲ ಕಳೆದವು, ಇನ್ನೇನು ಎಲ್ಲ ನಿರಾಳ ಎನಿಸಿದಾಗ ಬಿ.ಪಿ. ವಕ್ಕರಿಸಿತು. ಅದಕ್ಕೂ ಅಮ್ಮನ ಪ್ರತಿಕ್ರಿಯೆ ವಿಚಿತ್ರವಾಗಿತ್ತು: ''ಬಿ.ಪಿ.ಯಾದರೆ ತೊಂದರೆಯಿಲ್ಲ.'' ಏಕೆಂದರೆ, ಆಕೆಗೆ ಪಾಯಸದ ಊಟವೆಂದರೆ ಎಲ್ಲಿಲ್ಲದ ಹಿಗ್ಗು. ''ಸಕ್ಕರೆ ಕಾಯಿಲೆ ಬಂದಿದ್ದರೆ ಏನು ಗತಿ ?'' ಎಂದು ಹಲುಬಿದಳು. ಸಾಲದ್ದಕ್ಕೆ ಕಣ್ಣಿಗೆ ಪೊರೆಯೂ ಬಂತು. ಹೆದರಿ ಹೆದರಿ ಆಪರೇಶನ್ ಮಾಡಿಸಿಕೊಂಡಳು.

'ನಿನ್ನ ಆರೋಗ್ಯಕ್ಕೆ ಇದೆಲ್ಲ ಒಳ್ಳೆಯದಲ್ಲಮ್ಮ' ಎಂದು ಎಷ್ಟು ಹೇಳಿದರೂ ಕೇಳದೆ ಹೊಗೆಸೊಪ್ಪು, ಅಡಿಕೆ ಜಜ್ಜಿ ಬಾಯಲ್ಲಿ ಹಾಕಿ ವೀಳ್ಯ ಮೆಲ್ಲುವ ನನ್ನಮ್ಮನಿಗೆ ಈಗ ಅಪ್ಪನೇ ಆತ್ಮಸಖ. ನಾವೆಲ್ಲ ಉದ್ಯೋಗ ನಿಮಿತ್ತ ಮನೆಯಿಂದ ದೂರವಿದ್ದೇವೆ. 'ನಾನು ಬಡವಿ, ಆತ ಬಡವ, ಒಲವೆ ನಮ್ಮ ಬದುಕು' ಎಂಬಂತೆ ಕಡೆಗಾಲದಲ್ಲಿ ಒಬ್ಬರಿಗೊಬ್ಬರು ಆಸರೆಯಾಗಿದ್ದಾರೆ. ಎಲ್ಲ ಚಟಗಳನ್ನೂ ಸ್ವಯಂ ಪ್ರೇರಣೆಯಿಂದ ತೊರೆದು ಅಪ್ಪನೂ ಹೊಸಮನುಷ್ಯರಾಗಿದ್ದಾರೆ. ಈಗ ನನ್ನಮ್ಮನಿಗೆ ಇರುವುದು ಒಂದೇ ಆಸೆ: ಸಾಯುವ ಮುನ್ನ ಒಮ್ಮೆಯಾದರೂ ಎರಡೆಳೆಯ ಚಿನ್ನದ ಕರಿಮಣಿಸರ ಧರಿಸಬೇಕು !

**ಅನಂತ ಹುದೆಂಗಜೆ**

ಸಹಸಂಪಾದಕ, 'ಮಂಜುವಾಣಿ' ಮಾಸಪತ್ರಿಕೆ, ಉಜಿರೆ - ೫೭೪ ೨೪೦, ಬೆಳ್ತಂಗಡಿ ತಾ, ದಕ್ಷಿಣ ಕನ್ನಡ ಜಿ

# ದಂಡಿನ ಪದ: ಸ್ತ್ರೀಶಕ್ತಿ - ಸಾಧ್ಯತೆಗಳ ಶಕ್ತಿಶಾಲಿ ನಿರೂಪಣೆ

ವನಮಾಲಾ ಕಟ್ಟೇಗೌಡರ

ಜಗತ್ತಿನ ಜೀವಸಂಕುಲದಲ್ಲಿ 'ಮೈಥುನ' ಕ್ರಿಯೆ ನಿಸರ್ಗಸಹಜವಾದದ್ದು. ಅದು ಸಂತತಿಯ ಮುಂದುವರಿಕೆಗೆ ಪ್ರಕೃತಿ ನೀಡಿದ ಕೊಡುಗೆಯೂ ಹೌದು. ಆದರೆ ಮನುಷ್ಯ ನಾಗರಿಕ ಸಮಾಜವನ್ನು ಕಟ್ಟಿಕೊಂಡು ನಿಸರ್ಗಕ್ಕೆ ದೂರವಾಗಿ ಬಾಳತೊಡಗಿದ ನಂತರ 'ಮೈಥುನ' ಪ್ರಕ್ರಿಯೆ ಹಲವಾರು ನಿರ್ಬಂಧಗಳಿಗೆ ಪಕ್ಕಾಗಿ ಅನೇಕ ಕಟ್ಟುಪಾಡುಗಳಿಗೆ ಒಳಗಾಗತೊಡಗಿತು. ಮಾನವ ಜನಾಂಗದಲ್ಲಿ 'ಕುಟುಂಬ' ಪರಿಕಲ್ಪನೆ ಬಂದ ನಂತರ ಅದು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಿಂದ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯತ್ತ ಚಲಿಸತೊಡಗಿದಂತೆಲ್ಲಾ ಅದರ ಎಲ್ಲಾ ವಿಕಾರಗಳಿಗೆ ಮೊದಲು ಬಲಿಯಾದವಳು ಮಹಿಳೆಯೇ. ಪುರುಷಪ್ರಧಾನ ಕಟ್ಟುಪಾಡುಗಳಲ್ಲಿ, ಶಿಷ್ಟಸಂಪ್ರದಾಯದ ಸೋಗಿನಲ್ಲಿ ನಲುಗಿಹೋದ ಮಹಿಳೆ ತನ್ನ ಬಿಡುಗಡೆಯ ದಾರಿಗಳನ್ನು ಮೊದಲು ಕಂಡುಕೊಂಡದ್ದು ಜನಪದ ಕಾವ್ಯದ ಮೂಲಕ ಎನ್ನಬಹುದು.

ಜನಪದ ಕಾವ್ಯದಲ್ಲಿ 'ಸ್ತ್ರೀವಾದಿ' ನೆಲೆಯನ್ನು ಪ್ರಚುರಪಡಿಸುವ ಅನೇಕ ಚಿಕ್ಕ-ದೊಡ್ಡ ಕಥನ ಕವನಗಳು ಸಿಗುತ್ತವೆ. ಮಹಿಳಾ ಸಂವೇದನೆಯ ಅನೇಕ ಆಯಾಮಗಳನ್ನು ತೆರೆದುತೋರುವ ಈ ಕಥನ ಕವನಗಳು ಸ್ತ್ರೀಶಕ್ತಿ ಸಾಧ್ಯತೆಗಳನ್ನು ನೈಸರ್ಗಿಕ ಪಾತಳಿಯ ಗಟ್ಟಿನೆಲೆಯಲ್ಲಿ ನಿರೂಪಿಸುತ್ತವೆ. ಯಾವ ಸಮಾಜ-ಸಂಪ್ರದಾಯಗಳು ಮಹಿಳೆಯನ್ನು 'ಅಬಲೆ' ಎಂದು ಕರೆದು ಅವಳ ಸರ್ವಶಕ್ತಿ ಸಾಧ್ಯತೆಗಳನ್ನು ನಿರಾಕರಿಸಿತೋ ಆ ಸಮಾಜ-ಸಂಪ್ರದಾಯಗಳು ಬೆಚ್ಚಿಬೀಳುವಂತೆ ಮಹಿಳಾಶಕ್ತಿ ಸಾಧ್ಯತೆಗಳನ್ನು ಈ ಕಥನ ಕವನಗಳು ಕಟ್ಟಿಕೊಡುತ್ತವೆ, ಮಾತ್ರವಲ್ಲ ಯಾವುದೇ ಸಮಾಜ-ಸಂಪ್ರದಾಯಗಳು ಪ್ರತಿಗಾಮಿ ಮಾರ್ಗ ತುಳಿದಾಗ ಅವು ತೆರಬೇಕಾದ ಬೆಲೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತವೆ. ಆ ಮೂಲಕ ಬಂಡಾಯದ ಉಗಮದ ಮೂಲ ನೆಲೆಗಳತ್ತ ನಮ್ಮನ್ನು ಕೊಂಡೊಯ್ಯುತ್ತವೆ!

ಈ ಬಗೆಯ ವಿದ್ಯಮಾನಗಳನ್ನು ತಿಳಿಸುವ ಜನಪದ ಗೀತೆಯೇ 'ದಂಡಿನ ಪದ'. ಈ ಗೀತೆ ನಾಲ್ಕು ತ್ರಿಪದಿಗಳ ಒಂದು ಪುಟ್ಟ ಗೀತೆಯಾಗಿದ್ದು ತನ್ನ ಅಂತರ್ಯದಲ್ಲಿ ಸ್ತ್ರೀ-ಶಕ್ತಿ ಸಂವೇದನೆಗಳ ಹಲವಾರು ಆಯಾಮಗಳನ್ನು ಹುದುಗಿಸಿಕೊಂಡಿದೆ. ಪ್ರಸ್ತುತ ಈ ಗೀತೆಯನ್ನು ನಾನು ಸಂಗ್ರಹಿಸಿದ್ದು ಗಧುಗಿನ ಶಹಪೂರ್ ಪೇಟೆ ನಿವಾಸಿ 'ಸಂಗಮ್ಮ, ಮರಿಯಪ್ಪ ಬೆಂಗಳೂರ್' ಎಂಬುವವರಿಂದ. ಈ ಗೀತೆಯ ಪೂರ್ತಿ ಪಾಠ ಇಂತಿದೆ :

*ನಾರಿ ಸಣ್ಣಕೆಂದು ನಲದ ದಂಡೀಗ್ಹೋದ।*
*ಆರs ಹಡದಿಂದ ಆವ ಬಂದ। ಕೇಳ್ಯಾನ*
*ಆರೂ ಮಕ್ಕಳದ ಹೆಸರೇನ ?*

*ಕಾಳಿಂಗ, ಕರವೀರ, ವೀರಭದ್ರರ ಲಿಂಗ।*
*ನಾಗ ಮುರಿಯಂಬು ಚನಬಸವ। ಶಿವಬಸವ*
*ಹೋಗಿ ನಿಮ್ಮಪ್ಪನಿಗೆ ಶರಣೆನ್ನಿರೆ.*

*ಆಶಿವಂತವರಾಗ, ಅಪ್ಪಬಲ್ಲಿದ ರಾಗ।*
*ನಾಳೆ ನಿಮ್ಮೌವ್ವ ಬಿಡಲೇನಿ। ನೀವಾರು*
*ಮಂದಿಯವಳ ಸಲುವರಿ.*

*ಬಿಟ್ಟರ ಬಿಡು ಹೋಗ ಕೆಟ್ಟ ಸೂಳೆ ಮಗನ।*
*ಆರs ಮಂದ್ಯಾಗ ಪಡಿಕಾಳ। ತಂದರ*
*ನಾಳೆ ನಮ್ಮೌವ್ವ ಸಲುವೇವ.*

ಶಿಷ್ಟ ಸಂಪ್ರದಾಯಕ್ಕೆ ಸಡ್ಡುಹೊಡೆದಂತೆ ರಚಿತಗೊಂಡಿರುವ ಈ ಜನಪದ ಗೀತೆಯ ಹಿಂದೆ 'ಬಾಲ್ಯವಿವಾಹ'ದ ಹಿನ್ನೆಲೆಯಲ್ಲಿ ಕೆಲಸ ಮಾಡಿರುವ ಪ್ರಮುಖ ಅಂಶಗಳು ಮೂರು :

೧. ಹೆಣ್ಣೊಬ್ಬಳು ನಿಸರ್ಗದತ್ತ ಬಯಕೆಯನ್ನು ಪೂರೈಸಿಕೊಳ್ಳುವುದು,

೨. ಆ ಒಂದು ಪೂರೈಕೆಯ ಸುತ್ತಲಿರುವ ಕಟ್ಟುಪಾಡುಗಳನ್ನು ಭಂಜಿಸುವುದು,

೩. ಭಂಜನದ ಭೀಕರ ಪರಿಣಾಮದ ನಂತರವೂ ತನ್ನ ತಾಯ್ತನದ ಧೀಮಂತಿಕೆಯಿಂದ ತನ್ನ ವ್ಯಕ್ತಿತ್ವವನ್ನು ಕಾಯ್ದುಕೊಳ್ಳುವುದು.

ಇದನ್ನು ಶಿಷ್ಟ ಸಂಪ್ರದಾಯ ಹುಟ್ಟುಹಾಕಿದ 'ಬೀಜ', 'ಕ್ಷೇತ್ರ' ಪರಿಕಲ್ಪನೆಯ ಹಿನ್ನೆಲೆಯಲ್ಲಿ ಪರಿಶೀಲಿಸಬಹುದು. ಸಾಮಾನ್ಯವಾಗಿ ಶಿಷ್ಟ ಸಮುದಾಯದಲ್ಲಿ ಕೌಟುಂಬಿಕವಾಗಿ-ಸಾಮಾಜಿಕವಾಗಿ ಪುರುಷನನ್ನು 'ಬೀಜ'ವೆಂತಲೂ ಮಹಿಳೆಯನ್ನು 'ಕ್ಷೇತ್ರ'ವೆಂತಲೂ ಪರಿಗಣಿಸಲಾಗುತ್ತದೆ. ಇಲ್ಲಿ ಬೀಜ (ಗಂಡು)ವೇ ಪ್ರಧಾನ. ಕ್ಷೇತ್ರ (ಹೆಣ್ಣು) ಗೌಣ. ಅವರ ಪ್ರಕಾರ ಬೀಜ ದೊಡ್ಡ ಮನಸ್ಸು ಮಾಡಿ ಕ್ಷೇತ್ರದೊಡಲಿನಲ್ಲಿ ಅಂಕುರಿಸಿದಾಗಲೇ ಅವಳಿಗೆ ತಾಯ್ತನದ ಪುಣ್ಯ. ಇಲ್ಲದಿದ್ದರೆ ಅವಳಿಗೆ ಸ್ವರ್ಗದ ಬಾಗಿಲು ಬಂದ್! ಯಾಕೆಂದರೆ ಅವಳು ಸಂತಾನಹೀನ ಬಂಜೆ!



ಮಹಿಳಾ ಸಂವೇದನೆಯ ಅನೇಕ ಆಯಾಮಗಳನ್ನು ತೆರೆದುತೋರುವ ಈ ಕಥನ ಕವನಗಳು ಸ್ತ್ರೀಶಕ್ತಿ ಸಾಧ್ಯತೆಗಳನ್ನು ನೈಸರ್ಗಿಕ ಪಾತಳಿಯ ಗಟ್ಟಿನೆಲೆಯಲ್ಲಿ ನಿರೂಪಿಸುತ್ತವೆ. ಯಾವ ಸಮಾಜ-ಸಂಪ್ರದಾಯಗಳು ಮಹಿಳೆಯನ್ನು 'ಅಬಲೆ' ಎಂದು ಕರೆದು ಅವಳ ಸರ್ವಶಕ್ತಿ ಸಾಧ್ಯತೆಗಳನ್ನು ನಿರಾಕರಿಸಿತೋ ಆ ಸಮಾಜ-ಸಂಪ್ರದಾಯಗಳು ಬೆಚ್ಚಿಬೀಳುವಂತೆ ಮಹಿಳಾಶಕ್ತಿ ಸಾಧ್ಯತೆಗಳನ್ನು ಈ ಕಥನ ಕವನಗಳು ಕಟ್ಟಿಕೊಡುತ್ತವೆ, ಮಾತ್ರವಲ್ಲ ಯಾವುದೇ ಸಮಾಜ-ಸಂಪ್ರದಾಯಗಳು ಪ್ರತಿಗಾಮಿ ಮಾರ್ಗ ತುಳಿದಾಗ ಅವು ತೆರಬೇಕಾದ ಬೆಲೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತವೆ. ಆ ಮೂಲಕ ಬಂಡಾಯದ ಉಗಮದ ಮೂಲ ನೆಲೆಗಳತ್ತ ನಮ್ಮನ್ನು ಕೊಂಡೊಯ್ಯುತ್ತವೆ!

ಹಿಂದಿನ ಕಾಲದ ಮಾತು ಹೇಗೂ ಇರಲಿ, 'ಭ್ರೂಣವೊಂದು ಬೆಳೆದು ಮಗುವಾಗಲು ಪುರುಷನ ವೀರ್ಯಾಣುಗಳಷ್ಟೇ ಮಹಿಳೆಯ ಅಂಡಾಣು ಕೂಡ ಮುಖ್ಯ' ಎಂಬ ಸತ್ಯವನ್ನು ವಿಜ್ಞಾನ ಘಂಟಾಘೋಷವಾಗಿ ಸಾರುತ್ತಿರುವ ಇವತ್ತಿನ ಆಧುನಿಕ ಕಾಲದಲ್ಲಿಯೂ, ಅದಕ್ಕಿಂತಲೂ ಮುಂದೆಹೋಗಿ ಪುರುಷನ ವೀರ್ಯಾಣುಗಳ ಸಹಾಯವಿಲ್ಲದೆ ಬರೀ ಅಂಡಾಣುವಿನ ಸಹಾಯದಿಂದ ಸೃಷ್ಟಿಕಾರ್ಯವನ್ನು ಸಾಧ್ಯವಾಗಿಸಿದ ('ಡಾಲಿ' ಕುರಿಮರಿಯ ಜನನದ ಪ್ರಸಂಗ) ತಂತ್ರಜ್ಞಾನದ ಯುಗದಲ್ಲಿಯೂ ಸಹ 'ಬೀಜ-ಕ್ಷೇತ್ರ' ಪರಿಕಲ್ಪನೆಗೇ ಜೋತುಬೀಳುತ್ತಿರುವ ಮಹಾನುಭಾವರಿದ್ದಾರೆ! ಈ ಬೀಜವಾದರೂ ಅವಳಲ್ಲಿ ಯಾರಿಂದ ಅಂಕುರಿಸಬೇಕು? ಕುಟುಂಬ-ಸಮಾಜದ ಹಿರಿಯರು ಒಪ್ಪಿದ ಗಂಡಿನಿಂದ. ಆ ಗಂಡನ್ನು ಅವಳು ಒಪ್ಪಬೇಕೆಂದೇನೂ ಇಲ್ಲ! ಅಲ್ಲವೇ ಮತ್ತೆ? ಯಾರಾದರೂ ಕುರಿ ಕೇಳಿ ಮಸಾಲೆ ಅರೆಯುತ್ತಾರೆಯೇ ?! ಒಪ್ಪಿಗೆಯ ಮಾತು ಮಣ್ಣುಗೂಡಿ ಹೋಯಿತು. ಅವಳಿಗೆ ಕುಟುಂಬ, ದಾಂಪತ್ಯ, ಸಮಾಗಮಗಳ ಬಗ್ಗೆ ತಿಳುವಳಿಕೆ ಮೂಡುವವರೆಗಾದರೂ, ಸಂತಾನೋತ್ಪತ್ತಿಗೆ (ಮದುವೆಯ ಮುಖ್ಯ ಉದ್ದೇಶ ಅದೇ ತಾನೇ?) ಅವಳ ದೇಹ-ಮನಸ್ಸುಗಳು ಸಿದ್ಧವಾಗುವವರೆಗಾದರೂ ಪುರುಸೊತ್ತು ಬೇಡವೇ? ಕಟ್ಟಿಬಿಟ್ಟರು ಒಂದು ಗಂಡಿನ ಕೊರಳಿಗೆ ಆಕೆಯನ್ನು! ಇನ್ನೂ ಪ್ರಪಂಚವನ್ನೇ ಅರಿಯದ ಆ ಮುಗ್ಧಬಾಲೆಯನ್ನು ಕಟ್ಟಿಕೊಂಡು ಅವನಾದರೂ ಏನು ಮಾಡಬೇಕು? ಹೊರಟೇಬಿಟ್ಟ ದಂಡಿಗೆ! ಆ ದಂಡಿನಲ್ಲೇ ಎಷ್ಟೋ ಕಾಲ ಕಳೆದ ನಂತರ ಯಾವತ್ತೋ ಒಂದು ದಿನ ಪಟ್ಟಂತ ಅವನಿಗೆ ಹೆಂಡತಿ ನೆನಪಾಗಬೇಕೇ ?!



ದೌಡಾಯಿಸಿದ ಹೆಂಡತಿಯತ್ತ. ಬಂದು ನೋಡುತ್ತಾನೆ, ಅಲ್ಲವಳು ಆರು ಮಕ್ಕಳ ತಾಯಿ! ಇವನ ಮುಖ ಕಂಡಕೂಡಲೇ ಅವಳು ಮಕ್ಕಳಿಗೆ ಹೇಳುತ್ತಾಳೆ 'ನಿಮ್ಮಪ್ಪನಿಗೆ ನಮಿಸಿರಿ' ಎಂದು. ಅಲ್ಲವೇ ಮತ್ತೆ? ಕ್ಷೇತ್ರ ಅವನದೇ ತಾನೆ? ಅವನ ಹೆಸರಿನ ಕ್ಷೇತ್ರದಲ್ಲಿ ಹುಟ್ಟಿದ ಮಕ್ಕಳು ಅವನ ಮಕ್ಕಳಾಗಬೇಕಾದದ್ದು ನ್ಯಾಯ ತಾನೆ? ಆದರೆ ಅವನು ಮಕ್ಕಳಿಗೆ ಆಶೀರ್ವದಿಸಿ 'ನಾಳೆ ನಿಮ್ಮವ್ವನನ್ನು ಬಿಡುತ್ತೇನೆ. ಇನ್ನವಳನ್ನು ನೀವೇ ಸಲುಹಿರಿ' ಎನ್ನುತ್ತಾನೆ! ಅವನ ಮಾತಿಗೆ ಮಕ್ಕಳು ಏನು? ಯಾಕೆ? ಎತ್ತ? ಒಂದೂ ಕೇಳದೆ

*ಬಿಟ್ಟರ ಬಿಡು ಹೋಗ ಕೆಟ್ಟ ಸೂಳೆ ಮಗನ।*
*ಆರs ಮಂದ್ಯಾಗ ಪಡಿಕಾಳ। ತಂದರs*
*ನಾಳೆ ನಮ್ಮೌವ್ನ ಸಲುವೇವ*

ಎಂದು ಕಪಾಳಕ್ಕೆ ಹೊಡೆದಂತೆ ಉತ್ತರಿಸುತ್ತಾರೆ! ಈ ಇಡೀ ಕವನ ಪುರುಷಪ್ರಧಾನ ಸಮುದಾಯದ ಅಹಂಕಾರದ ಲಯಗಳನ್ನು ಛಿದ್ರಗೊಳಿಸುವ ಆಶಯದಿಂದ ರಚನೆಯಾಗಿದೆ. ಕವನದಲ್ಲಿ ಈ ಆಶಯವನ್ನು ಮಂಡಿಸುವ ತಂತ್ರವೂ ವಿಶಿಷ್ಟವಾಗಿದೆ. ಇಲ್ಲಿ ಅವಳ ಆರೂ ಮಕ್ಕಳು ಗಂಡುಮಕ್ಕಳೇ. ಆ ಮಕ್ಕಳು ತಂದೆಯನ್ನು ಎದುರಿಸಿ ತಾಯಿಯ ಆತ್ಮಗೌರವ, ಸ್ವಾಭಿಮಾನಗಳನ್ನು ಎತ್ತಿಹಿಡಿಯುತ್ತಾರೆ. ಅವರ ಮೂಲಕವೇ ಮಹಿಳಾ ಪರ ಆಶಯವನ್ನು ಮಂಡಿಸುವ ಕ್ರಮ ಕುತೂಹಲಕಾರಿಯಾಗಿದೆ. ಮಗುವನ್ನು ಹೊತ್ತು-ಹೆತ್ತು ಅದರ ಪಾಲನೆ-ಪೋಷಣೆ (ಸಂಗೋಪನೆ) ಮಾಡುವ ಪ್ರತಿಹಂತದಲ್ಲೂ ಮಹಿಳೆಯ (ತಾಯಿಯ) ಪಾತ್ರ ಮಹತ್ವದ್ದಾಗಿರುತ್ತದೆ. ಇಲ್ಲಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಆರ್ಥಿಕವಾಗಿಯೂ ಅವಳು ಸ್ವಾವಲಂಬನೆಯನ್ನು ಸಾಧಿಸಿ ಮಕ್ಕಳನ್ನು ಬೆಳೆಸಿದ್ದಾಳೆ.

ಕುಟುಂಬ ಪರಿಕಲ್ಪನೆಯ ಕಟ್ಟುಪಾಡುಗಳಲ್ಲೇ ನಿಸರ್ಗ ಸಹಜ ಬಯಕೆಗಳನ್ನು ಪೂರೈಸಿಕೊಳ್ಳಬೇಕೆಂದಾದಲ್ಲಿ ಕುಟುಂಬದಲ್ಲಿ ಗಂಡು ಹೆಣ್ಣು ಇಬ್ಬರಿಗೂ ಸಮಾನ ಅವಕಾಶಗಳಿರಬೇಕು. ಇಲ್ಲಿ ಪುರುಷನೊಬ್ಬ ಸಣ್ಣ ನಾರಿ (ಬಾಲಕಿ)ಯನ್ನು ಮದುವೆಯಾದದ್ದು ಮೊದಲ ತಪ್ಪು. 'ನಾರಿ ಸಣ್ಣಕೆಂದು' ಅವಳಿಗೆ ಆರು ಮಕ್ಕಳಾಗುವವರೆಗೂ – ಮಾತ್ರವಲ್ಲ ಅವರು ವಯಸ್ಕರಾಗುವವರೆಗೂ (ಅವರು ತಂದೆಗೆ ಆ ರೀತಿ ತಿರುಗೇಟು ಕೊಟ್ಟಿದ್ದಾರೆಂದಮೇಲೆ ಅವರು ವಯಸ್ಕರೇ. ಇದರಲ್ಲಿ ಅನುಮಾನವಿಲ್ಲ) ದಂಡಿನಲ್ಲಿದ್ದದ್ದು ಎರಡನೆಯ ತಪ್ಪು. ಇವತ್ತಿನ ಸಣ್ಣ ನಾರಿ ನಾಳೆ ದೊಡ್ಡವಳಾಗದೆಯೇ ಇರುತ್ತಾಳೆಯೆ? ಏರು ಯೌವನದಲ್ಲಿ ತನ್ನ ಗೈರುಹಾಜರಿಯಲ್ಲಿ ಅವಳು ಮಕ್ಕಳನ್ನು ಪಡೆದದ್ದು 'ನಿಸರ್ಗ ಸಹಜ ಕ್ರಿಯೆ' ಎಂದು ಭಾವಿಸದೆ, ಅಲ್ಲಿ ತನ್ನ ತಪ್ಪೂ ಇರುವುದನ್ನು ಗಮನಿಸದೆ ಪುರುಷನೆಂಬ ಅಹಂಕಾರದಿಂದ ಅವಳನ್ನು ತೊರೆದದ್ದು ಮೂರನೆಯ ತಪ್ಪು. ಗಂಡನಿಲ್ಲದಾಗ್ಯೂ ಅವಳು ತಾನೂ ಬದುಕಿ, ಮಕ್ಕಳನ್ನೂ ಬದುಕಿಸಲಿಲ್ಲವೆ?

ಬದುಕನ್ನು ನಿಸರ್ಗದಿಂದ ದೂರ ಕೊಂಡೊಯ್ದು, ನಾನಾ ಸಂಪ್ರದಾಯ ಕಟ್ಟುಪಾಡುಗಳನ್ನು ತನ್ನ ಮೂಗಿನ ನೇರಕ್ಕೇ ತನ್ನ ಅನುಕೂಲಕ್ಕಾಗಿ ಸ್ವಾರ್ಥಕ್ಕಾಗಿ (ಮತ್ತು ಅದರಡಿಯಲ್ಲಿಯೇ ಹುದುಗಿರುವ ಅಹಂಕಾರಕ್ಕಾಗಿ ಕೂಡ!) ಒಟ್ಟಿನಲ್ಲಿ ತನ್ನ ಬೇಕು-ಬೇಡಗಳಿಗನುಗುಣವಾಗಿ – ತನ್ನ ಮನೋನೆಲಯಲ್ಲಿಯೇ ರೂಪಿಸಿಕೊಂಡು ಮನುಷ್ಯನ ನಿಸರ್ಗ ಸಹಜವಾದ ನೈಸರ್ಗಿಕ ಪ್ರಕ್ರಿಯೆಯಾದ 'ಮೈಥುನ'ದ ಮೂಲ ಆಶಯಗಳನ್ನೇ ವಿಕಾರಗೊಳಿಸಿ, ಸಂತಾನ ಸೃಷ್ಟಿ ಕಾರ್ಯದ ಪ್ರಮುಖ ರೂವಾರಿ 'ಮಹಿಳೆ'ಯನ್ನು ಭೋಗದ ವಸ್ತುವಾಗಿ ಮಾತ್ರ ನೋಡುವ, ಆ ನೆಲೆಗಳಲ್ಲಿಯೇ ಅವಳ ಶಕ್ತಿ-ಸಾಮರ್ಥ್ಯಗಳನ್ನು ನಿಯಂತ್ರಿಸುವ ಪುರುಷಪ್ರಧಾನ ಸಮಾಜಕ್ಕೆ ಸ್ತ್ರೀಶಕ್ತಿ-ಸಾಧ್ಯತೆಗಳನ್ನು ಮನವರಿಕೆ ಮಾಡಿಕೊಡುವಲ್ಲಿ ಈ ಗೀತೆ ಯಶಸ್ವಿಯಾಗುತ್ತದೆ. ಮಾತ್ರವಲ್ಲ, ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಮಾತೃಪ್ರಧಾನ ವ್ಯವಸ್ಥೆ ಒಡ್ಡಿದ ಪ್ರತಿರೋಧದ, ಪ್ರತಿಭಟನೆಯ ದನಿಯಾಗಿಯೂ ಈ ಗೀತೆ ಗಮನ ಸೆಳೆಯುತ್ತಿದೆ.

ಸ್ತ್ರೀಶಕ್ತಿ-ಸಾಧ್ಯತೆಗಳನ್ನು ಪುರುಷಪ್ರಧಾನ ಸಮಾಜ ವ್ಯವಸ್ಥೆ ಸ್ತ್ರೀಯರ ಬದುಕು-ಬವಣೆಗಳ ನೆಲೆಗಳಲ್ಲಿಯೇ ನಿಂತು ಅವಲೋಕಿಸಬೇಕು. ಯಾವುದೋ ಕಾಲಘಟ್ಟದಲ್ಲಿ ಯಾರೋ ರೂಪಿಸಿದ ಮಾನದಂಡಗಳು ಅವಳ ಶಕ್ತಿ-ಸಾಮರ್ಥ್ಯಗಳ ಅಳತೆಗೋಲಾದರೆ ಅದರಿಂದ ಹೊರಡುವ ಫಲಿತಾಂಶಗಳು ಅಪೂರ್ಣ, ಅಸತ್ಯ. ಇದರ ಪರಿಣಾಮ ಮತ್ತೆ ಮತ್ತೆ ಅದೇ – ಮಹಿಳೆಯರ ನಿರಂತರ ಗೋಳಿನ ಕಥೆ! ಹಾಗಾಗಬಾರದೆಂದಾದರೆ 'ಮಹಿಳಾ ಮನೋನೆಲೆ'ಯಲ್ಲಿಯೂ ಪುರುಷಪ್ರಧಾನ ವ್ಯವಸ್ಥೆ ಯೋಚಿಸಬೇಕು. ಆಗ ಮಾತ್ರ ಆ ವ್ಯವಸ್ಥೆಗೊಂದು ಮನಸ್ಸು-ಹೃದಯ ಹುಟ್ಟಿ ಒಂಚೂರು ಮಾನವೀಯ ನೆಲೆಯಲ್ಲಿ ತುಡಿಯಬಹುದು, ಮಹಿಳೆಯರ ಮನದ ತುಮುಲಗಳನ್ನು ಅವರ ಶಕ್ತಿ ಸಾಮರ್ಥ್ಯಗಳನ್ನು ಅರಿತುಕೊಳ್ಳಲು ಸಾಧ್ಯವಾಗಬಹುದು. ಕುಟುಂಬ-ಸಮಾಜ ವ್ಯವಸ್ಥೆಗಳಲ್ಲಿ ಅವಳಿಗೆ ಸಮಾನ ಅವಕಾಶಗಳನ್ನು ಕಲ್ಪಿಸಿಕೊಡುವುದರ ಮೂಲಕ ಅವಳ ವ್ಯಕ್ತಿಸ್ವಾತಂತ್ರ್ಯವನ್ನು ಘನತೆ-ಗೌರವಗಳನ್ನು ಎತ್ತಿಹಿಡಿಯಲು ದಾರಿಯೂ ಆಗಬಹುದು!



ವನಮಾಲಾ ಕಟ್ಟೇಗೌಡರ
'ಮಾತೃ ಕುಟೀರ', ಪುತ್ತೂರು ಆಸ್ಪತ್ರೆ ಹಿಂಭಾಗ
ಗಾಂಧಿ ಕಾಲನಿ
ಹೊಸಪೇಟೆ - ೫೮೩ ೨೦೩, ಬಳ್ಳಾರಿ ಜಿಲ್ಲೆ



# ಅತಂತ್ರದಲ್ಲಿ ಪ್ರಕೃತಿ-ಸಂಸ್ಕೃತಿಗಳ ನಡುವಣ ಘರ್ಷಣೆ

**ಪಾರ್ವತಿ ಜಿ. ಐತಾಳ್**

**ಪ್ರ**ಕೃತಿ - ಸಂಸ್ಕೃತಿಗಳ ನಡುವಣ ವೈರುಧ್ಯ ಆಧುನಿಕ ಕಾದಂಬರಿಗಳ ಮುಖ್ಯ ಲಕ್ಷಣ. ಸಂಸ್ಕೃತಿ ಮತ್ತು ನಾಗರಿಕತೆಗಳು ಹೇಗೆ ಮನುಷ್ಯನ ಜೀವ ಚೈತನ್ಯಜಲವನ್ನು ಬತ್ತಿಸಿ ಆತನನ್ನು ಅನಾಥನನ್ನಾಗಿಸುತ್ತಿವೆ ಎಂಬುದು ಆಧುನಿಕ ಬರಹಗಾರರ ಕಾಳಜಿ. ಗುರುರಾಜ ಮಾರ್ಪಳ್ಳಿಯವರ 'ಅತಂತ್ರ' ಇಂಥದೇ ಒಂದು ಕಾದಂಬರಿ. ಉದ್ದಕ್ಕೂ ಆಧುನಿಕ ಬದುಕಿನ ದ್ವಂದ್ವ, ಕೃತಕತೆಗಳನ್ನು ಚಿತ್ರಿಸುತ್ತ ಮನುಷ್ಯನ ತಬ್ಬಲಿತನ ಅಸಹಾಯಕತೆ ಮತ್ತು ತೊಳಲಾಟಗಳಿಗೆ ಇದು ಕನ್ನಡಿ ಹಿಡಿಯುತ್ತದೆ.

ನಾಯಕ ಸಂದೀಪ ದಾಸ್‌ನ ಮಾನಸಿಕ ತುಮುಲಗಳ ಒಳನೋಟದ ಮೂಲಕ ಕಾದಂಬರಿ ನಿರೂಪಿತವಾಗುತ್ತದೆ. ಧಾರವಾಡದಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ ಎಂ.ಎ. ಓದಿ, ಗೆಳೆಯ ನಕುಲ್ ತ್ರಿವೇದಿಯ ಒತ್ತಾಯಕ್ಕೆ ಕಟ್ಟುಬಿದ್ದು ಮುಂಬಯಿನಲ್ಲಿ ಒಂದು ವರ್ಷ ದೂಡಿದ ದಾಸ್‌ನಲ್ಲಿ ನಗರ ಜೀವನದ 'ಕ್ರೂರ ಕರ್ಕಶ ಪ್ರಪಂಚ' (ಪುಟ ೩) ಜಿಗುಪ್ಸೆ ಹುಟ್ಟಿಸುತ್ತದೆ. ಆತ ಅಲ್ಲಿರಲಾರದೆ ತನ್ನ ಹುಟ್ಟೂರಿನ ಪುಟ್ಟಹಳ್ಳಿ ಕರ್ಕಿಯ ಸಮೀಪದ ಹೊನ್ನಾವರದ ಕಾಲೇಜೊಂದರಲ್ಲಿ ಪ್ರಾಧ್ಯಾಪಕನಾಗುತ್ತಾನೆ.




ಲೇಖಕರು
**ಗುರುರಾಜ ಮಾರ್ಪಳ್ಳಿ**

ಪ್ರಕಾಶಕರು
**ಲೋಹಿಯಾ ಪ್ರಕಾಶನ**
'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ

**ಪುಟ : ೧೬೮ ಬೆಲೆ : ರೂ. ೫೦**

ಅಂತರಂಗದ ಸ್ಪರ್ಶವಿಲ್ಲದೆ ಯಾವುದೇ ಕೆಲಸವನ್ನು ಮಾಡಲಾರದ ದಾಸ್ ತನ್ನ ಅತ್ಯಂತ ಮಾರ್ಮಿಕ ಭಾವನೆಗಳನ್ನು ಕಾವ್ಯದಲ್ಲಿ ಪ್ರಕಟಪಡಿಸುತ್ತ ಎಂ.ಎ. ವಿದ್ಯಾರ್ಥಿಯಾಗಿದ್ದಾಗಲೇ ಒಳ್ಳೆಯ ಕವಿ ಎಂದು ಹೆಸರು ಪಡೆದವನು. ಮಾರ್ಕ್ಸ್‌ನ ಗೀಳನ್ನು ಹತ್ತಿಸಿಕೊಂಡವನು. ಹಾಗೆಯೇ ಗಾಂಧೀಜಿಯ ಸಿದ್ಧಾಂತಗಳಿಂದಲೂ ಪ್ರಭಾವಿತನಾದವನು.

ಕಾದಂಬರಿ ತೆರೆದುಕೊಳ್ಳುವಾಗ ದಾಸ್ ಹೊನ್ನಾವರದಲ್ಲಿ ನೆಲೆಸಿ ಹತ್ತು ವರ್ಷಗಳು ಆಗಲೇ ಕಳೆದಿವೆ. ಕವಿಗೋಷ್ಠಿ-ಪ್ರಬಂಧ ಮಂಡನೆಗಳಿಗೆಂದು ಆತ ಆಗಾಗ ರಾಜಧಾನಿ ನಗರಿಗೆ ಹೋಗುತ್ತಿರುತ್ತಾನೆ. ಆತನ ಕವನಗಳನ್ನೋದಿ ಆತನ ಅಭಿಮಾನಿಯಾಗಿ ಬೆಳೆದಿರುವ ಮೃಣಾಲಿನಿಯೊಂದಿಗೆ ಆತನ ಭೇಟಿಯಾಗುತ್ತದೆ. ದಿಟ್ಟ ಹೆಣ್ಣು, ಸುಂದರಿ, ಸ್ವಾತಂತ್ರ್ಯಪ್ರಿಯೆ ಮೃಣಾಲಿನಿ ಆತನ ಬಗ್ಗೆ ತೀವ್ರವಾಗಿ ಆಕರ್ಷಿತಳಾಗುತ್ತಾಳೆ. ಜೀವನ ಪರ್ಯಂತ ಪಾಲಿಸಬೇಕಾಗಿ ಬರುವ ಪ್ರೀತಿ-ಪ್ರಣಯಗಳ ಒಪ್ಪಂದವಾಗಿಬಿಡುವ ಮದುವೆ ಎಂಬ ಬಂಧನವನ್ನು ಅನುಮಾನದಿಂದ ಕಾಣುವ ದಾಸ್ ಮೃಣಾಲಿನಿಯ ಹಠದಿಂದಾಗಿ ಆಕೆಯನ್ನು ವಿವಾಹವಾಗುತ್ತಾನೆ. ಮದುವೆಯಾದ ತಕ್ಷಣವೇ ಗರ್ಭಿಣಿಯಾಗುವ ಅವಳನ್ನು ಬೆಂಗಳೂರಿನಲ್ಲೇ ಬಿಟ್ಟು ದಾಸ್ ಹೊನ್ನಾವರಕ್ಕೆ ಬರುತ್ತಾನೆ. ಈ ಮಧ್ಯೆ ಮೃಣಾಲಿನಿ ಮದುವೆಗೆ ಮುಂಚೆ ಸ್ನೇಹ ಬೆಳೆಸಿಕೊಂಡಿದ್ದ ಆದಿತ್ಯ ಪಾಂಡೆ ತಾನು ಕೈಗೊಂಡಿರುವ ಗಾಂಧಿ-ಮ್ಯಾಕ್ಸ್ ಫೌಂಡೇಶನ್ನಿನ ಪ್ರಾಜೆಕ್ಟ್ ಒಂದಕ್ಕೆ ಆಕೆಯನ್ನು ಸೇರಿಸಿಕೊಳ್ಳುವುದಾಗಿ ತಿಳಿಸಿ ದೆಹಲಿಗೆ ಬರಲು ಆಕೆಗೆ ಆಹ್ವಾನ ನೀಡುತ್ತಾನೆ. ಸುವರ್ಣ ಭವಿಷ್ಯದ ಸೆಳೆತಕ್ಕೊಳಗಾಗಿ ಮೃಣಾಲಿನಿ ದೆಹಲಿಗೆ ಹೋಗುವ ಮನಸ್ಸು ಮಾಡುತ್ತಾಳೆ. ತನ್ನೊಂದಿಗೆ ಸರಳ ಸುಂದರ ಬದುಕಿನ ಕನಸು ಕಂಡ ಮೃಣಾಲಿನಿ ಕಾರು ಬಂಗಲೆಗಳ ಹೈಟೆಕ್ ಜೀವನದಲ್ಲಿ ಕೊಚ್ಚಿಕೊಂಡುಹೋಗುವುದು ದಾಸ್‌ಗೆ ಇಷ್ಟವಿಲ್ಲ. ಆದರೆ ಆಕೆ ಆತನನ್ನು ಒತ್ತಾಯಿಸಿ ಒಪ್ಪಿಗೆ ಪಡೆದು ದೆಹಲಿಗೆ ತೆರಳುತ್ತಾಳೆ.

ಬುದ್ಧಿವಂತೆ ಮೃಣಾಲಿನಿ ತನಗೊಪ್ಪಿಸಿದ ಕೆಲಸ ಮಾತ್ರವಲ್ಲದೆ ತನ್ನ ಜರ್ಮನ್ ಮೇಲಧಿಕಾರಿಣಿ ಬ್ರೂನಾಳಿಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡುವ ಮೂಲಕ ಆಕೆಯ ಮೆಚ್ಚುಗೆ ಗಳಿಸಿ ಉಚ್ಚಸ್ಥಾನಕ್ಕೆ ಏರುತ್ತಾಳೆ. ತನ್ನ ವ್ಯಸ್ತ ಚಟುವಟಿಕೆಗಳಿಗೆ ಅಡ್ಡಿಬರುವ ಗರ್ಭವನ್ನು ತೆಗೆಸಿ ಆಕೆ ನಿರಾಳವಾಗುತ್ತಾಳೆ. ದಾಸ್‌ನ ಮೇಲಿನ ಆಕೆಯ ಆಕರ್ಷಣೆ ಈಗ ಪೂರ್ತಿಯಾಗಿ ಕರಗಿಹೋಗಿದೆ. ತನ್ನ ಸ್ಥಾನ-ಮಾನ- ಯಶಸ್ಸುಗಳು ಮಾತ್ರ ಆಕೆಯ ಮುಂದಿನ ಗುರಿ. ತನ್ನ ದೈಹಿಕ ಕಾಮನೆಗಳನ್ನು ತೀರಿಸಿಕೊಳ್ಳುವುದಕ್ಕೋಸ್ಕರ ಆಕೆ ಆದಿತ್ಯ ಪಾಂಡೆಯ ಸಂಗಾತಿಯಾಗುತ್ತಾಳೆ. ಆದರೆ ಉದ್ದಕ್ಕೂ ಆಕೆಯನ್ನು ಅಪರಾಧಿಭಾವ ಕಾಡುತ್ತದೆ.

ಆಕೆಯಿಂದ ದೂರವಾಗಿ ದಾಸ್ ಯಾತನೆ ಪಡುತ್ತಾನೆ. ಆಕೆಯನ್ನು ಮರೆಯುವುದು ಅವನಿಗೆ ಸಾಧ್ಯವಾಗುವುದಿಲ್ಲ. ಮೃಣಾಲಿನಿ ಒಂದಿಲ್ಲೊಂದು ದಿನ ತನ್ನ ಬಳಿಗೆ ಹಿಂದಿರುಗಿಬರುವಳೆಂದು ಆತ ಭರವಸೆ ಇಟ್ಟುಕೊಳ್ಳುತ್ತಾನೆ. ಆದರೆ ಆತನ ಎಲ್ಲ ಆಸೆಗಳಿಗೆ ಕೊಳ್ಳಿಯಿಡುವಂತಹ ಆಕೆಯ ಪತ್ರ ಬಂದಾಗ ದಾಸ್ ದುಃಖದಲ್ಲಿ ಮುಳುಗುತ್ತಾನೆ. ತಾನು ಇನ್ನು ಮೇಲೆ ತನ್ನ ಜೀವನವನ್ನು ಬೇರೆ ರೀತಿಯಲ್ಲಿ ರೂಪಿಸಿಕೊಳ್ಳಬೇಕೆಂದು ನಿರ್ಧರಿಸುತ್ತಾನೆ. ಈ ಮಧ್ಯೆ ಆತನ ಪಕ್ಕದ ಮನೆಯ ವಿಧವೆ ಯಾಮಿನಿಯೊಂದಿಗೆ ಆತನ ಸ್ನೇಹ-ಸಂಪರ್ಕ ಬೆಳೆಯುತ್ತದೆ. ಆ್ಯಕ್ಸಿಡೆಂಟ್‌ನಲ್ಲಿ ಅಕಾಲಮರಣಕ್ಕೆ ತುತ್ತಾದ ತನ್ನ ಪತಿಯ ನೆನಪಿನಲ್ಲೇ ಜೀವನ ಪೂರ್ತಿ ಕಳೆಯಬೇಕೆಂದು ನಿರ್ಧರಿಸಿದ ಹೆಣ್ಣು ಯಾಮಿನಿ. ಬದುಕಿನ ಬಗ್ಗೆ ಗಂಭೀರವಾಗಿ ಚಿಂತಿಸುವ ಸ್ವತಂತ್ರ ಮನೋಭಾವದವಳು. ದಾಸ್ ಆಕೆಯೊಂದಿಗಿನ ಸ್ನೇಹದಲ್ಲಿ ನೆಲೆ ಕಂಡುಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ ಅವರಿಬ್ಬರ ನಡುವಣ ಶುದ್ಧ ಸ್ನೇಹಕ್ಕೆ ಅನೈತಿಕತೆಯ ಹಣೆಪಟ್ಟಿಯನ್ನು ಊರವರು ಮತ್ತು ಕಾಲೇಜಿನವರು ಹಚ್ಚುತ್ತಾರೆ. ಇದರಿಂದ ಆಘಾತಗೊಂಡ ದಾಸ್‌ಗೆ ತಾನು 'ಅತಂತ್ರ'ನೆಂಬ ಭಾವನೆ ಬಲವಾಗುತ್ತದೆ. ಅದೇ ಹೊತ್ತಿಗೆ ನಕುಲ್ ತ್ರಿವೇದಿಯ ಮೂಲಕ ಗಾಂಧಿ-ಮ್ಯಾಕ್ಸ್ ಫೌಂಡೇಶನ್ನಿನ ಪ್ರಾಜೆಕ್ಟ್‌ಗಾಗಿ ಆತ ಬರೆದುಕೊಟ್ಟಿದ್ದ ಟಿಪ್ಪಣಿಗಳಲ್ಲಿನ ಗಾಂಧಿ ಚಿಂತನೆಗಳನ್ನು ಬಹಳವಾಗಿ ಮೆಚ್ಚಿಕೊಂಡ ಬ್ರೂನಾ, ಸ್ಟೇಟ್ಸ್‌ನಲ್ಲಿರುವ ತನ್ನ ಗಂಡನ ಜತೆ ಸೇರಿ ಗಾಂಧಿ-ಲಿಂಕನ್ ಫೌಂಡೇಶನ್‌ಗಾಗಿ ಕೆಲಸ ಮಾಡಲು ಆಹ್ವಾನ ನೀಡುತ್ತಾಳೆ. ದಾಸ್ ಯಾಮಿನಿಯ ಜೊತೆ ಸ್ನೇಹವನ್ನು ಮುಂದುವರಿಸುತ್ತಲೇ ಸ್ಟೇಟ್ಸ್‌ಗೆ ಹೋಗಿ ನೆಲೆಸುವ ನಿರ್ಧಾರ ತಳೆಯುತ್ತಾನೆ.

ಆಧುನಿಕ ಜಗತ್ತಿನ ನಾಗರಿಕತೆಯ ನಾಟಕದಲ್ಲಿ ಸಂವೇದನಾಶೀಲ ಮನುಷ್ಯ ಅತಂತ್ರಸ್ಥಿತಿಯಲ್ಲಿ ತೊಳಲಾಡುವ ಅಸಂಗತ ಧ್ವನಿಯ ಕಥಾವಸ್ತು ಈ ಕಾದಂಬರಿಯದ್ದು. ಆರ್ಥಿಕ, ರಾಜಕೀಯ, ಸಾಮಾಜಿಕ, ತಾತ್ವಿಕ ಮತ್ತು ಗಂಡು-ಹೆಣ್ಣುಗಳ ನಡುವಣ ಮೈ-ಮನಸ್ಸುಗಳ ಸಂಬಂಧಗಳ ಬಗೆಗಿನ ಗಂಭೀರವಾದ ಚಿಂತನೆಗಳಿಂದ ಸಮೃದ್ಧವಾದ ಈ ಕಾದಂಬರಿ ಆರಂಭದಿಂದ ಅಂತ್ಯದ ತನಕ ತನ್ನ ಆಕರ್ಷಕ ಭಾಷಾಶೈಲಿ ಮತ್ತು ಕಥನ ತಂತ್ರಗಳ ಮೂಲಕ ಒಂದೇ ಓಟದಲ್ಲಿ ಓದಿಸಿಕೊಂಡುಹೋಗುತ್ತದೆ. ಪ್ರೇಮ - ಕಾಮಗಳಂತಹ ಸೂಕ್ಷ್ಮ ವಿಚಾರಗಳ ಕುರಿತಾದ ಚರ್ಚೆಯ ಸನ್ನಿವೇಶಗಳು ಎಲ್ಲೂ ಸಮತೋಲನ ತಪ್ಪದೆ ಎರಕಹೊಯ್ದಂತೆ ಹದವಾಗಿ ಮೂಡಿಬಂದಿವೆ. ಆಂತರಿಕವೂ ಬಾಹ್ಯವೂ ಆದ ಹಲವು ರೀತಿಯ ಸಂಘರ್ಷಗಳ ಮೂಲಕ ಬೆಳೆಯುತ್ತ ಹೋಗುವ ದಾಸ್ ಮತ್ತು ಯಾಮಿನಿಯರ ಪಾತ್ರ ಪೋಷಣೆ ಬಹಳ ಚೆನ್ನಾಗಿ ಬಂದಿದೆ.

ಹೆಜ್ಜೆ ಹೆಜ್ಜೆಗೂ ಆಧುನಿಕತೆಯ ಸೋಗುಗಳಿಗೆ ಸಡ್ಡು ಹೊಡೆಯುತ್ತಾನೆ ದಾಸ್. ಪ್ರಜಾಪ್ರಭುತ್ವದ ಹೆಸರಿನಲ್ಲಿ ಇವತ್ತು ನಡೆಯುತ್ತಿರುವುದು ಹಿಂದಿನ ಕಾಲದ ಸರ್ವಾಧಿಕಾರದ ಮುಂದುವರಿಕೆಯೇ ಹೊರತು ಬೇರೇನಲ್ಲ. ಪ್ರಕೃತಿಯ ಮೇಲೆ ದೌರ್ಜನ್ಯ ನಡೆಸುತ್ತ, ಸಂಪತ್ತನ್ನು ಒಟ್ಟುಗೂಡಿಸುತ್ತ,

ಅಧಿಕಾರಕ್ಕಾಗಿ ಸೆಣಸಾಡುತ್ತ, ಯುದ್ಧಕ್ಕಾಗಿ ಸೈನ್ಯಗಳನ್ನು ಸಜ್ಜುಗೊಳಿಸುತ್ತ ಮೃಗಗಳಂತೆ ವರ್ತಿಸುವ ಇಂದಿನ ರಾಜಕೀಯ ನಾಯಕರಲ್ಲಿ ಆಧುನಿಕತೆ ಎಲ್ಲಿದೆ ? ಜಾತ್ಯತೀತತೆ ಎಂದು ಘೋಷಿಸುವ ಆಧುನಿಕ ವ್ಯವಸ್ಥೆಯಲ್ಲಿ ಮೇಲು-ಕೀಳು, ಶ್ರೀಮಂತ-ಬಡವ, ದೊಡ್ಡವ-ಸಣ್ಣವ ಎಂಬ ಪೂರ್ವಗ್ರಹ ಬೆಳೆಯುತ್ತಿರುವುದು ಜಾತಿ ವ್ಯವಸ್ಥೆಗಿಂತ ಭಯಂಕರವಲ್ಲವೆ ? ಮನರಂಜನೆಯ ಹೆಸರಿನಲ್ಲಿ ಕೋಟಿಗಟ್ಟಲೆ ಹಣ ಮಾಡುವ ಉದ್ಯಮಿಗಳು ಗಂಡು-ಹೆಣ್ಣಿನ ದೇಹ ಸಂಬಂಧಗಳ ಕುರಿತು ವಿಕೃತ ಕುಣಿತಗಳು, ಕೃತಕ ಸಂಭಾಷಣೆಗಳು, ಅತ್ಯಾಚಾರ, ಹಿಂಸೆಗಳ ಅತಿರೇಕಗಳ ಮೂಲಕ ಬಡಜನರಿಂದ, ಅವರು ಅನ್ನ ನೀರು ಬಿಟ್ಟು ಒಟ್ಟುಮಾಡಿದ ಪುಡಿಗಾಸನ್ನು ದೋಚುವ ಈ ರಾಕ್ಷಸ ಪ್ರವೃತ್ತಿಗೆ ಕೊನೆ ಎಲ್ಲಿ, ಎಂಬೀ ಮೂಲಭೂತ ಪ್ರಶ್ನೆಗಳನ್ನು ದಾಸ್ ಹಾಕುತ್ತಾನೆ. ಮನುಷ್ಯನ ಸಾಮಾಜಿಕ ಬದುಕನ್ನು ನಿರ್ಧರಿಸುವ ಮದುವೆ- ಸಾಂಸಾರಿಕ ಜೀವನಗಳು ಪ್ರಕೃತಿಗೆ ವಿರುದ್ಧವಾದವುಗಳು ಎಂಬುದು ಅವನ ಅಭಿಮತ.

ಸಂಪತ್ತಿನ ವಿಕೇಂದ್ರೀಕರಣದ ದೃಷ್ಟಿಕೋನವನ್ನಿಟ್ಟುಕೊಂಡು ಪ್ರಕೃತಿಯ ಮೇಲಿನ ಮನುಷ್ಯನ ಅಧಿಕಾರವನ್ನು ಒಪ್ಪಿಕೊಳ್ಳುವ ಮಾರ್ಕ್ಸ್‌ಗಿಂತ ಪ್ರಕೃತಿಯ ಮಡಿಲು ಸೇರುವ ಗ್ರಾಮೀಣ ಸಂಸ್ಕೃತಿಯೇ ಮನುಷ್ಯನ ಪಾಲಿಗೆ ಹೆಚ್ಚು ಆರೋಗ್ಯಕರವೆನ್ನುವ ಗಾಂಧೀಜಿಯವರೇ ಶ್ರೇಷ್ಠರೆಂಬ ನಂಬಿಕೆ ಬೆಳೆಸಿಕೊಳ್ಳುವುದು ದಾಸ್‌ನ ಬೆಳವಣಿಗೆಯ ದ್ಯೋತಕ. ಇಂತಹ ಮೌಲ್ಯ ಮತ್ತು ಆದರ್ಶಗಳಲ್ಲಿ ಬೇರೂರಿಕೊಳ್ಳುವ ದಾಸ್ ಒಂದು ರೀತಿಯಲ್ಲಿ ನೋಡಿದರೆ ಆಂತರಿಕವಾಗಿ ಅತಂತ್ರನಲ್ಲ. ಹಳ್ಳಿಗಳ ಅಧ್ಯಯನವನ್ನು ಭೌತಿಕ ಲಾಭದ ದೃಷ್ಟಿಯಿಂದ ಮಾಡುವ ಬ್ರೂನಾ, ಆದಿತ್ಯ ಪಾಂಡೆ, ಮೃಣಾಲಿನಿ, ನಕುಲ್ ತ್ರಿವೇದಿ ಮತ್ತು ಬದುಕಿನ ಮೇಲ್ಪದರದ ಕೃತಕ ಸೌಂದರ್ಯ, ಸುಖಭೋಗಗಳೇ ಸರ್ವಸ್ವವೆಂದು ತಿಳಿದುಕೊಳ್ಳುವ ಈ ಆಧುನಿಕವೆಂದು ಕರೆಯಲ್ಪಡುವ ಜಗತ್ತಿನ ಸಾಮಾನ್ಯ ಮಂದಿಗಳೇ 'ಅತಂತ್ರರು' ಎಂಬ ಧ್ವನಿ ಕಾದಂಬರಿಯಲ್ಲಿದೆ. ಈ ದೃಷ್ಟಿಯಿಂದ ಕಾದಂಬರಿಗೆ 'ಅತಂತ್ರರು' ಎಂಬ ಶೀರ್ಷಿಕೆ ಸೂಕ್ತವಾಗುತ್ತಿತ್ತು. ಆದರೆ ತಾವು 'ಅತಂತ್ರರು' ಎಂಬ ಅರಿವು ಅವರಲ್ಲಿಲ್ಲ. ಆದರೆ ಅವರನ್ನು ನೋಡಿ ನೋಯುವ ಮತ್ತು ತಲ್ಲಣಗೊಳ್ಳುವ ದಾಸ್ ಈ ಅತಂತ್ರ ಸ್ಥಿತಿಯನ್ನು ತನ್ನ ಮೇಲೆ ಆರೋಪಿಸಿಕೊಳ್ಳುತ್ತಾನೆ. ಸಂವೇದನಾಶೀಲ ಮನಸ್ಸುಳ್ಳ ಪ್ರತಿಯೊಬ್ಬ ವ್ಯಕ್ತಿಯ ಅಸಹಾಯಕತೆ ಇದು.

ಪ್ರಕೃತಿ ಮತ್ತು ಆಧುನಿಕತೆಗಳ ನಡುವಣ ಸಂಘರ್ಷದ ಇಲ್ಲಿನ ಕಥಾವಸ್ತುವಿಗೆ ಶಿವರಾಮ ಕಾರಂತರ 'ಚಿಗುರಿದ ಕನಸು' ಕಾದಂಬರಿಯ ಛಾಯೆ ಇದೆ. ಆದರೆ ಇಲ್ಲಿ ಕಥಾಹಂದರವನ್ನು ತುಂಬಿಕೊಳ್ಳುವ ಸೈದ್ಧಾಂತಿಕ ಚಿಂತನೆಗಳು, ಬೌದ್ಧಿಕ ವಿಚಾರಧಾರೆ ಮತ್ತು ಚರ್ಚೆಗಳಿಂದಾಗಿ ಕಾದಂಬರಿಗೆ ಪೂರ್ತಿ ಭಿನ್ನವಾದ ಒಂದು ರೂಪ ಬಂದಿದೆ. ಕಾರಂತರ ಕಾದಂಬರಿ ವರ್ಣನೆ-ವಿವರಣೆಗಳಿಂದ ತುಂಬಿಕೊಂಡಿದ್ದರೆ ಮಾರ್ಪಳ್ಳಿಯವರು ಘಟನೆಗಳಿಗಾಗಲಿ, ವಿವರಣೆಗಳಿಗಾಗಲಿ ಆದ್ಯತೆ ನೀಡದೆ ಕಾವ್ಯಾತ್ಮಕವಾದ ಚುಟುಕು ಶೈಲಿಯಲ್ಲಿ ಶಬ್ದಗಳ ಪರಿಮಿತ ಬಳಕೆಯ ಮೂಲಕ ಹೆಚ್ಚು ಅರ್ಥಗಳನ್ನು ಧ್ವನಿಸುವ ಪ್ರಯತ್ನ ಮಾಡಿದ್ದಾರೆ.

**ಪಾರ್ವತಿ ಜಿ. ಐತಾಳ್**
ಸುರಗಂಗಾ, ಬಸ್ರೂರು ಕ್ರಾಸ್ ರಸ್ತೆ, ಕುಂದಾಪುರ - ೫೭೬ ೨೦೧

# ಹಸಿವಿನ ತಲ್ಲಣಗಳು




ಹಸಿದಾಗ
ಚಂದ್ರ ರೊಟ್ಟಿಯಾಗಿ
ಅಣಕಿಸುತ್ತಾನೆ
ಚುಕ್ಕಿಗಳು ರೊಟ್ಟಿ ಚೂರಾಗಿ
ಕೆಣಕುತ್ತವೆ

* * *

ಹಸಿವೆ
ನೀನು... ಒಮ್ಮೆ
ಮಹಡಿ ಮನೆ ಹೊಕ್ಕುಬಿಡು
ನಿನ್ನ ಕ್ರೂರತೆ
ಅವರಿಗೂ ಅರ್ಥವಾಗಲಿ

* * *

ಹಸಿದಾಗ
ಹಿತವೆನಿಸುತ್ತದೆ
ಮತ್ತೆ!
ಹೊಟ್ಟೆ ತುಂಬುವವರೆಗೆ

* * *

ಹಸಿವು
ದೇಶದ ಎಲ್ಲಾ ಬಂದೀಖಾನೆ
ಮುರಿಯಬಲ್ಲದು
ಗಡಿಯನ್ನು ಒಡೆಯಬಲ್ಲದು
ಮನಸ್ಸನ್ನು ಬೆಸೆಯಬಲ್ಲದು

* * *

ಕಾಲವು ತನ್ನ ಕಾಲನ್ನು
ಸೂರ್ಯನಿಗೆ ಅರ್ಪಿಸಿದಾಗ
ಗುಡಿಸಲಲ್ಲಿ ಇಣುಕುವ ಬಿಸಿಲು
ಬೆಳದಿಂಗಳಾಗಿರುತ್ತದೆ

* * *

'ಹಸಿವು' ಎಂದಾಗ
ಕತ್ತಲಲ್ಲಿ ಸೆರಗು ಹಾಸಿ
ಬೆತ್ತಲಾಗಿ ಬೆವರು ಹರಿಸಿ
ಜೀತಕ್ಕಿರುವ ಅನನ್ಯತೆ

* * *

ಹಸಿವು
ಬೇಡವಾದ
ಕೆಲಸಕ್ಕೆ ಒಗ್ಗಿಸಿ ಹಿಂಸಿಸುತ್ತಿರುವ
ದೊಡ್ಡ ಶತ್ರು

* * *

ಒಡಲು
ಬರಸೆಳೆದಾಗ
ಗುಲಾಬಿ ಹಾವಾಗುವುದು

* * *

ಪ್ರಿಯೆ
ನೀನು ನಕ್ಕೆ !
ನಾನು ಅರ್ಥಮಾಡಿಕೊಂಡೆ
ನಾನು ನಗಲಿಲ್ಲ!
ನೀನು ಅರ್ಥಮಾಡಿಕೊಳ್ಳಲಿಲ್ಲ

**ರಾಮಪ್ಪ ಮಾದರ**
ಜನವಿದ್ಯಾ ಪ್ರಸಾರಾಂಗ, ಎನ್.ಟಿ.ಸಿ. ಕಾಲೇಜು, ಶಶಿಧರ ಶೆಟ್ಟಿ ಕಾಂಪ್ಲೆಕ್ಸ್, ಹೂವಿನ ಹಡಗಲಿ - ೫೮೩ ೨೧೯

# ಹದಿನೈದು ಚಿಂತನಗಳು

ತೆಲುಗು ಮೂಲ

ಡಾ॥ ರಾವೂರಿ ಭರದ್ವಾಜ



- ೧ -

"ಹಸಿದಿರುವ ನಿನ್ನನ್ನು ನೋಡಿ ನನಗೆ ಕರುಣೆ ಉದಿಸಿತು. ಆದ್ದರಿಂದ ಎರಡೇ ಎರಡು ಕಾಳನ್ನು ನಿನ್ನ ಮುಂದಿಟ್ಟೆ. ಅದನ್ನು ತಿಂದಮೇಲೆ ನಿನ್ನ ಕಣ್ಣಲ್ಲಿ ಹೊಳೆಯುವ ಸಂತೃಪ್ತಿಯನ್ನು ಕಾಣಬೇಕೆಂದುಕೊಂಡೆ. ಆ ಎರಡು ಕಾಳನ್ನು ನೋಡಿ ನೀನು ಸಣ್ಣದಾಗಿ ನಿಟ್ಟುಸಿರುಬಿಟ್ಟೆ. ನಿನ್ನ ಪಕ್ಕದಲ್ಲಿ ಇರುವ ಬಿರುಕಿನಲ್ಲಿ ಕಾಳನ್ನು ಉರುಳಿಸಿ ಮೇಲೆ ಮಣ್ಣುಮುಚ್ಚಿದೆ. ಮುಚ್ಚಿ ಆಯಾಸದಿಂದ ಹೊರಟುಹೋದೆ. ಓ ಇರುವೆ ತಾಯಿ, ನೀನೇಕೆ ಹಾಗೆ ಮಾಡಿದೆಯಮ್ಮಾ ?" ಎಂದರು ಅವರು.

"ಆ ಎರಡು ಕಾಳನ್ನು ನಾನೇ ತಿಂದರೆ ನನ್ನ ಹಸಿವು ಮಾತ್ರವೇ ಇಂಗುತ್ತದೆ. ಅದೇ ಎರಡು ಕಾಳು ಮೊಳೆದು ಬೆಳೆದು ಹತ್ತು ತೆನೆಗಳನ್ನು ಹೊತ್ತರೆ ಅದನ್ನು ತಿಂದು ನೂರಾರು ಪ್ರಾಣಗಳು ಬದುಕುತ್ತವೆ. ನಾನು ಬದುಕುವುದಕ್ಕೋಸ್ಕರ ನೂರು ಜೀವಗಳು ಬದುಕುವ ಅವಕಾಶವನ್ನು ಒರೆಸಿಬಿಡುವುದು ನನಗಿಷ್ಟವಿಲ್ಲ" ಎಂದು ಉತ್ತರಿಸಿತು ಆ ಇರುವೆ.

- ೨ -

ಚೆನ್ನಾಗಿ ತಿಳಿದಿದೆಯೆಂದು ನಾವು ಭಾವಿಸುವ ಅನೇಕ ಅಂಶಗಳನ್ನು ಕುರಿತು ನಮಗೆ ತಿಳಿದಿರುವುದು ಸ್ವಲ್ಪ ಎಂದು, ಸ್ವಲ್ಪಾತಿಸ್ವಲ್ಪ ಎಂದು ಎಷ್ಟೋ ಕಾಲದವರೆಗೆ ತಿಳಿಯದು. ಕೆಲವು ಸಂದರ್ಭಗಳಲ್ಲಿ ಒಂದು ಸಣ್ಣ ವಿಚಾರವನ್ನು ಕುರಿತು ಏನೋ ಸ್ವಲ್ಪ ಮಾತ್ರ ಅಲ್ಲದೆ, ಇನ್ನೇನೂ ಸಹ ತಿಳಿಯದು. ಅವುಗಳನ್ನು ಕುರಿತು, ಇವುಗಳನ್ನು ಕುರಿತು ಬಹು ಸ್ವಲ್ಪ ತಿಳಿಯುವುದನ್ನು ಕುರಿತು ಕೂಡ ಬಿಟ್ಟುಬಿಟ್ಟರೆ ನಮ್ಮನ್ನು ಕುರಿತು ಮಾತ್ರ ನಮಗೇನು ಗೊತ್ತು? ಎಷ್ಟು ಗೊತ್ತು? ನಮ್ಮನ್ನು ಕುರಿತ ಪರಿಪೂರ್ಣವಾದ ಅವಗಾಹನೆ ಇಲ್ಲದ ನಾವು ಮತ್ತೊಬ್ಬರನ್ನು ಕುರಿತು ಏನು ತಿಳಿಯಬಲ್ಲವರಾಗುತ್ತೇವೆ ? ಹೇಗೆ ತಿಳಿಯಬಲ್ಲವರಾಗುತ್ತೇವೆ ?

- ೩ -

ನನಗೊಂದು ಹಿಡಿ ಮಿದುವಾದ ನಿದ್ದೆ ಬೇಕು. ನನಗೊಂದು ಚಿಟಿಕೆ ತಾಜಾ ಕನಸು ಬೇಕು. ಮಿದುವಾಗಿರುವ ಆ ನಿದ್ದೆಯಮ್ಮನ ಭುಜದ ಮೇಲೆ ಹೊಸದಾದ ಈ ಚಿನ್ನಾರಿ ಪುಟ್ಟಿ ಕನಸಿನಿಂದ ಕಮ್ಮನೆಯ ಜೋಗುಳ ಹಾಡುವ ಒಬ್ಬ ಅಮ್ಮ ನನಗೆ ಬೇಕು.

- ೪ -

ಅದು ಹಾಗೆ ನಡೆಯಬೇಕು ಎಂದು, ಹಾಗೆ ನಡೆದರೆ ಇನ್ನೂ ಚೆನ್ನಾಗಿರುತ್ತದೆ ಎಂದು ಅಂದುಕೊಳ್ಳುತ್ತಿರುತ್ತೇವೆ. ಇದು ಹೀಗೆ ನಡೆಯಬೇಕು ಎಂದು, ಹೀಗೆ ನಡೆದರೆ ಇನ್ನೂ ಇನ್ನೂ ಚೆನ್ನಾಗಿರುತ್ತದೆ ಎಂದು ಅಂದುಕೊಳ್ಳುತ್ತಿರುತ್ತೇವೆ.

ನಾವು ಬಯಸಿದ್ದನ್ನು ಹೊಂದಬೇಕೆಂದು ನಾನಾ ಅವಸ್ಥೆಗಳನ್ನು ಪಡುತ್ತೇವೆ. ಅಷ್ಟೇ ಅಲ್ಲ, ಬಹಳವಾಗಿ ಕಳೆದುಕೊಳ್ಳುತ್ತೇವೆ ಸಹ. ಈ ಅವಸ್ಥೆಗಳನ್ನು ಪಟ್ಟೂ ಪಟ್ಟೂ ಇದ್ದವುಗಳನ್ನು ಕಳೆದುಕೊಂಡೂ ಕಳೆದುಕೊಂಡೂ ಚೆನ್ನಾಗಿ ದಣಿದುಹೋಗುತ್ತೇವೆ. ನಿರಾಶೆಯಿಂದ ಕುಸಿದುಹೋಗುತ್ತೇವೆ. ಇನ್ನು ಮಾಡುವುದೇನೂ ಇಲ್ಲದ ಸ್ಥಿತಿಯಲ್ಲಿ , ಸ್ವಲ್ಪವೇ ದೂರದಲ್ಲಿ ನಿಮಗೆ ಮಸುಕು ಮಸುಕಾಗಿ ವಿಜಯಾಂಕುರ ಕಾಣಿಸಿದಾಗಿನ ಸಂಚಲನೆ ಅನುಭವಕ್ಕೆ ಹೊರತು ಅಕ್ಷರಕ್ಕೆ ನಿಲುಕದು.

- ೫ -

"ಕಳೆದ ಮೂರು ನಾಲ್ಕು ದಿನಗಳಿಂದ ನೋಡುತ್ತಿದ್ದೇನೆ ! ಸುತ್ತಲೂ ಇರುವ ಸಣ್ಣ ಸಣ್ಣ ಬಳ್ಳಿಗಳೂ ದೊಡ್ಡ ದೊಡ್ಡ ಮರಗಳೂ ಚೆನ್ನಾಗಿಯೇ ಇವೆ. ಈ ಬಳ್ಳಿ ಮಾತ್ರ ಹೆದರಿದಂತೆ ಕಾಣುತ್ತದೆ. ಕರೆದರೂ ಮಾತನಾಡುವುದಿಲ್ಲ. ಏನಾಯಿತು ?" ಎಂದು ಪ್ರಶ್ನಿಸಿದೆ, ಸುತ್ತಮುತ್ತಲ ಸಸಿಗಳ ಹತ್ತಿರಕ್ಕೆ ಸರಿಯುತ್ತಾ.

"ಮಕ್ಕಳಿಗಾಗಿ ಆಕೆ ಬಹಳ ಕಾಲದಿಂದ ಕನಸು ಕಾಣುತ್ತಿದ್ದಳು. ತನ್ನ ಕನಸುಗಳನ್ನು ಫಲಪ್ರದ ಮಾಡು ಎಂದು ಪ್ರಭುವನ್ನು ಪ್ರಾರ್ಥಿಸಿದಳು. ದಯಾಮಯನಾದ ಪ್ರಭು ಬಳ್ಳಿತಾಯಿಯ ಕೋರಿಕೆಯನ್ನು ನೆರವೇರಿಸಿದನು. ಚೆಲುವಾದ ಹೂಮಗುವನ್ನು ಈಕೆಗೆ ದಯಪಾಲಿಸಿದನು. ಆ ಮಗುವನ್ನು ತೃಪ್ತಿಯಾಗುವಷ್ಟು ನೋಡುವ ಮೊದಲೇ ಯಾರೋ ಬಂದು ಆ ಹೂವನ್ನು ಕಿತ್ತು ಒಯ್ದರು. ಆ ಮಗುವಿನ ಮೇಲಿನ ಮಮಕಾರದಿಂದ ಈ ಬಳ್ಳಿತಾಯಿ ಅನ್ನಪಾನೀಯಗಳನ್ನು ಸಹ ಮುಟ್ಟುತ್ತಿಲ್ಲ" ಎಂದಳು ಪಕ್ಕದಲ್ಲಿದ್ದ ತಾಯಿ ತುಂಗೆ ನನಗೆ ಮಾತ್ರ ಕೇಳಿಸುವಷ್ಟು ಮೆಲ್ಲಗೆ.

- ೬ -

ತಿಳಿದುಕೊಳ್ಳಬೇಕು ಎನ್ನುವುದು ಮುಖ್ಯ.

ಈ ಮುಖ್ಯವಾದ ಗುರಿಯನ್ನು ಸೇರುವುದು ಅಂದುಕೊಂಡಷ್ಟು ಸುಲಭವಲ್ಲ. ನಿಮ್ಮಂತಹ ಅಸಾಮಾನ್ಯರು ಸ್ವಯಂಕೃಷಿಯಿಂದ ಆ ಗಮ್ಯವನ್ನು ಸೇರಿಕೊಳ್ಳುತ್ತೀರಿ.

ನನ್ನಂತಹ ಸಾಮಾನ್ಯರು ಜ್ಞಾನಸಂಪನ್ನರ ಸಹಾಯದಿಂದ ಆ ಲಕ್ಷ್ಯವನ್ನು ಸೇರಿಕೊಳ್ಳಬಹುದು. ನೋಡಲು ಇದು ಸರಳವಾಗಿಯೂ ಸುಲಭಸಾಧ್ಯವಾಗಿಯೂ ಕಾಣುತ್ತದೆ.

ಮುಂದೆ ಹೋದಂತೆ, ಹೋಗುತ್ತಿದ್ದಂತೆ ಈ ಗುರಿ ಅತಿ ಕ್ಲಿಷ್ಟವಾಗಿಯೂ ಕಷ್ಟಭೂಯಿಷ್ಠವಾಗಿಯೂ ಗೋಚರಿಸುತ್ತದೆ. ಹಾಗೆಂದು ನಮ್ಮ ಪ್ರಯತ್ನಗಳನ್ನು ಬಿಟ್ಟುಬಿಟ್ಟರೆ ಎಂದಿಗೂ ಯಾವ ಸಣ್ಣ ಅಂಶವನ್ನೂ ಕುರಿತು ಏನನ್ನೂ ತಿಳಿದುಕೊಳ್ಳಲಾರೆವು.

- ೭ -

"ಬಹಳ ಕಾಲದಿಂದ ನಿಮ್ಮನ್ನು ನೋಡುತ್ತಿದ್ದೇನೆ. ಯಾವಾಗ ನೋಡಿದರೂ ಏನನ್ನಾದರೂ ಹುಡುಕುವ ಸ್ಥಿತಿಯಲ್ಲೇ ಕಾಣಿಸಿಕೊಳ್ಳುತ್ತೀರಿ. ನೀವು ಯಾವುದನ್ನಾದರೂ ಕಳೆದುಕೊಂಡಿದ್ದೀರಾ ? ಹಾಗೆ ಕಳೆದುಕೊಂಡಿದ್ದು ಅಮೂಲ್ಯವಾದದ್ದೇ ? ಆತ್ಮೀಯವಾದದ್ದೇ ? ಅಥವಾ ಯಾವುದಾದರೂ ನೂತನ ವಿಷಯವನ್ನು ಕಂಡುಹಿಡಿಯಲು ಅನ್ವೇಷಿಸುತ್ತಿದ್ದೀರಾ ?" ಎಂದೆ.

"ಹಾಗೇನಿಲ್ಲ ಇವರೇ. ಪ್ರಭುವಿಗಾಗಿ ಹುಡುಕುತ್ತಿದ್ದೇನೆ" ಎಂದರು ಅವರು.

ಒಂದು ಕ್ಷಣ ನಿಶ್ಶಬ್ದ. ಅನಂತರ ಕಿರುನಗೆ.

"ನಿನ್ನೊಳಗೇ ಇರುವ ನನ್ನನ್ನು ಗುರುತಿಸಲಾರದ ಸ್ಥಿತಿಯಲ್ಲಿ ಇರುವ ನೀನು, ಎಲ್ಲಿ ಹುಡುಕಿದರೇನು ಲಾಭ ? ಸತ್ಯದಲ್ಲಿ, ಸಹನೆಯಲ್ಲಿ, ಕಾರುಣ್ಯದಲ್ಲಿ, ಪರೋಪಕಾರದಲ್ಲಿ, ಸಾಂತ್ವನದಲ್ಲಿ ನಾನು ಇದ್ದೇನೆಂದು ನಿನಗೆ ತಿಳಿಯದೇ ?" ಎಂದರು ಮತ್ತೊಬ್ಬರು.

ವಾಸ್ತವವಾಗಿ ಮೊದಲ ಬಾರಿ ಪ್ರಶ್ನಿಸಿದವರು ಯಾರು ? ಅದಕ್ಕೆ ಉತ್ತರಿಸಿದವರು ಯಾರು ? ಆ ಪ್ರತ್ಯುತ್ತರವನ್ನು ವ್ಯಾಖ್ಯಾನಿಸಿದವರು ಯಾರು ?

- ೮ -

ಗಾಳಿಯಲ್ಲಿ ತೇಲುತ್ತ ತೊನೆಯುತ್ತ ನಿಮ್ಮಲ್ಲಿಗೆ ಬಂದ ಸುಗಂಧ, ನೀವು ಬಹಳ ಇಷ್ಟಪಡುವ ಹೂಗಿಡ ನಿಮ್ಮ ಸಮೀಪ ಇದೆ ಎಂದು ಸೂಚಿಸುವುದೇ ಹೊರತು, ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುವುದಿಲ್ಲ.

ಅಲ್ಲಿಗೆ ಹೋಗುವುದೋ ಬಿಡುವುದೋ ಎಂಬುದು ನಿಮ್ಮಿಷ್ಟದ ಮೇಲೆ, ನಿಮ್ಮ ಅಗತ್ಯದ ಮೇಲೆ ಆಧಾರಿತವಾಗಿರುತ್ತದೆ.

ಧ್ಯಾನ ಸಹ ಈ ಪರಿಮಳದಂತೆಯೇ.

ಈ ಧ್ಯಾನಮಾರ್ಗವನ್ನು ಅನುಸರಿಸಿದರೆ, ನೀವು ಪ್ರಭುವನ್ನು ಸೇರಬಹುದು.

ಪರಿಮಳವು ಹೂವಿನ ಗಿಡದ ಅಸ್ತಿತ್ವವನ್ನು ತಿಳಿಸುತ್ತದೆಯೇ ಹೊರತು, ಅದೇ ಹೂವಿನ ಗಿಡವಲ್ಲ.

ಹಾಗೆಯೇ,

ಧ್ಯಾನವು ಈಶ್ವರನನ್ನು ಸೇರುವ ಮಾರ್ಗವನ್ನು ಸೂಚಿಸುತ್ತದೆಯೇ ಹೊರತು, ಧ್ಯಾನವೇ ಈಶ್ವರನಲ್ಲ.

- ೯ -

ಅನಿರೀಕ್ಷಿತವಾಗಿ ಹಠಾತ್ತಾಗಿ ಆ ಶಬ್ದ ಸ್ವಲ್ಪ ಸ್ವಲ್ಪವಾಗಿಯೇ ಆರಿಹೋಯಿತು. ಆರಿಹೋದ ಮರುಕ್ಷಣವೇ ನನ್ನ ತುಂಬ, ನನ್ನ ಪರಿಸರದ ತುಂಬ ನಿಶ್ಶಬ್ದಾಂಧಕಾರವು ಮೊಳೆಯಿತು.

- ೧೦ -

ನಿಮ್ಮ ಮುಂದಿರುವ ಕನ್ನಡಿ, ನಿಮಗಿರುವ ಸೌಂದರ್ಯವನ್ನು ನಿಮ್ಮಲ್ಲಿನ ವಿಕಾರಗಳನ್ನು ಯಥಾವತ್ತಾಗಿ ನೀವು ಕಾಣುವಂತೆ ಮಾಡುತ್ತದೆ. ಹೊಸ ಚೆಲುವನ್ನು ಅದು ನಿಮಗೆ ಒದಗಿಸುವುದಿಲ್ಲ. ಇರುವ ಸೌಂದರ್ಯಹೀನತೆಯನ್ನು ಅದು ತೊಲಗಿಸುವುದಿಲ್ಲ. ಕನ್ನಡಿಯಲ್ಲಿ ನೀವು ನೋಡುತ್ತಿರುವ ಬಿಂಬದೊಂದಿಗೆ ಕನ್ನಡಿಗೆ ಯಾವ ಸಂಬಂಧವೂ ಇಲ್ಲ.

- ೧೧ -

''ಪಾತಿಯಲ್ಲಿಯೇ ಇರದೆ ಆ ಕಡೆ ಈ ಕಡೆ ಏಕೆ ತಿರುಗುತ್ತಿದ್ದೀ ?'' ಎಂದೆ.

''ಇದ್ದಕಡೆಯೇ ಇದ್ದುಬಿಟ್ಟವರಿಗೆ ಬೆಳವಣಿಗೆ ಇರುವುದಿಲ್ಲ ಎಂದು ನಿನ್ನೆಯೋ ಮೊನ್ನೆಯೋ ಯಾರೋ ಹೇಳುವುದನ್ನು ಕೇಳಿಸಿಕೊಂಡೆ. ಇಲ್ಲೇ ಈ ಪಾತಿಯಲ್ಲೇ ಹೀಗೆ ಇದ್ದು ಸೊಂಪಾಗಿ ಬೆಳೆಯದೆ ಪುಷ್ಟಿಹೀನವಾಗಿ ಇರುವುದು ನನಗಿಷ್ಟವಿಲ್ಲ. ಹೊರಗೆ ಬರುವುದರಿಂದ ಬಹಳ ಇಕ್ಕಟ್ಟುಗಳು ಬರಬಹುದು. ಅವುಗಳನ್ನೆಲ್ಲ ನಾನು ಸಂತೋಷವಾಗಿ ಭರಿಸುತ್ತೇನೆ, ನನ್ನ ಭವಿಷ್ಯತ್ತಿಗಾಗಿಯೂ ನನ್ನ ನಂತರದವರಿಗಾಗಿಯೂ'' ಎಂದಿತು ಆ ಹೂವಿನ ಗಿಡ.

- ೧೨ -

''ನನಗೇಕೆ ನಮಸ್ಕಾರ ಮಾಡುತ್ತಿದ್ದೀರಿ ?'' ಎಂದಿತು ಆ ದೀಪ ಆತನೆಡೆಗೆ ಕಣ್ಣು ಮಿಟುಕಿಸುತ್ತ.

''ನನಗೆ ಒಂದು ಗಮ್ಯವಿದೆ. ಅದನ್ನು ಸೇರಿಕೊಳ್ಳಬೇಕೆಂಬ ಹಂಬಲವೂ ಇದೆ. ಆದರೆ ದಾರಿಯುದ್ದಕ್ಕೂ ಕಪ್ಪುಕತ್ತಲೆ ಮುಸುಕಿರುವ ಕಾರಣದಿಂದ ಹಾದಿ ಏನೇನೂ ಕಾಣಿಸುತ್ತಿಲ್ಲ. ಅದಕ್ಕಾಗಿ ಆ ಕಡೆಗೆ ಈ ಕಡೆಗೆ ನೋಡಿದೆ. ಆ ಪಕ್ಕ ಈ ಪಕ್ಕ ಹುಡುಕಿದೆ. ನೋಡಿ ನೋಡಿ, ಹುಡುಕಿ ಹುಡುಕಿ ದಣಿದುಹೋದೆ. ಆದರೂ ಗಮ್ಯವನ್ನು ಸೇರಿಕೊಳ್ಳಬೇಕೆಂಬ ನನ್ನ ಆಶೆಯನ್ನು ಮಾತ್ರ ಬಿಡಲಿಲ್ಲ. ಆ ಅವಸ್ಥೆಯಲ್ಲಿ ನೀವು ಪ್ರತ್ಯಕ್ಷರಾದಿರಿ. ನಿಮ್ಮ ಸಹಾಯದಿಂದ ದಾರಿಯನ್ನು ತಿಳಿಯಬಲ್ಲವನಾದೆ. ನನ್ನ ಕೋರಿಕೆ ಫಲಪ್ರದವಾಗಲು ಸಹಾಯ ಮಾಡಿದ ನಿಮಗೆ ಇದಕ್ಕಿಂತ ಹೆಚ್ಚಾಗಿ ಕೊಡಬಲ್ಲದ್ದು ಏನೂ ನನ್ನ ಬಳಿಯಿಲ್ಲ'' ಎಂದರು ಅವರು.

ಆ ದೀಪದ ಮುಖ ವಿಕಸಿಸಿತು.

''ನಿಮ್ಮಂತಹ ದೀಕ್ಷಾದಕ್ಷರಿಗೆ ಸಹಾಯ ಮಾಡುವ ಮಹೋನ್ನತ ಅವಕಾಶವನ್ನು ದಯಪಾಲಿಸಿದ ಪ್ರಭುವಿಗೆ ನಮಸ್ಕರಿಸುವುದಕ್ಕಿಂತಲೂ ಮೀರಿ ನಾನು ಕೊಡಬಲ್ಲಂತಹುದು ಸಹ ಏನೂ ಇಲ್ಲ'' ಎಂದಿತು ಆ ದೀಪ ಕೈಗಳನ್ನು ಜೋಡಿಸುತ್ತ.

- ೧೩ -

''ನಿಮ್ಮ ಕಣ್ಣುಗಳು ಭಯದಿಂದ ತಬ್ಬಿಬ್ಬಾಗುತ್ತಿವೆ. ನಿಮ್ಮ ಶರೀರ ತತ್ತರಿಸುತ್ತಿದೆ. ನಾನು ಮಾಡಬಲ್ಲ ಸಹಾಯವೇನಾದರೂ ಇರಬಹುದೇನೋ ಎಂದು ನಿಮ್ಮ ಎದುರಿಗೆ ಬಂದೆ. ಈಗ ನೀವು ಮಾಮೂಲಾಗಿಯೇ ಇದ್ದೀರಿ. ಆಗ ಏಕೆ ಹಾಗೆ ಭಯಪಟ್ಟಿರಿ ?'' ಎಂದಿತು ಆ ಅಳಿಲುಮರಿ, ಅವರನ್ನು ಸೌಮ್ಯದೃಷ್ಟಿಯಿಂದ ನೋಡುತ್ತಾ.

''ಯಾಕೋ ಏನೋ ನನ್ನ ಸುತ್ತಮುತ್ತಲಿದ್ದ ಯಾವುವೂ ನನಗೆ ಕಾಣಿಸುತ್ತಿಲ್ಲ. ನನಗೆ ನಾನೇ ಕಾಣಿಸುತ್ತಿಲ್ಲ. ಇನ್ನಷ್ಟು ಒಂಟಿಯಾಗಿಬಿಟ್ಟೆ ಎಂಬ ಆಲೋಚನೆ ನನ್ನನ್ನು ಭಯದಲ್ಲಿ ಮುಳುಗಿಸಿಬಿಟ್ಟಿತು. ಅಷ್ಟರಲ್ಲಿ, ಏನೋ ಚಲಿಸುತ್ತಿದೆ ಎಂದು ಕಿವಿಗಳು ನನಗೆ ಹೇಳಿದವು. ಕಣ್ಣುಗಳು ಆ ಸಪ್ಪಳ ಬಂದ ಕಡೆಗೆ ನೋಡಿದವು. ನೀವು ಕಾಣಿಸಿಕೊಂಡಿರಿ. ಆಗ, ''ನಾನು ಅಷ್ಟೊಂದು ಒಂಟಿಯಲ್ಲ'' ಎಂಬ ಆಲೋಚನೆ ಹುಟ್ಟಿ ನನ್ನ ಭಯವನ್ನು ಹೋಗಲಾಡಿಸಿತು'' ಎಂದರು ಅವರು.

''ಏನೂ ಕಾಣದ ಸ್ಥಿತಿಯಲ್ಲೂ 'ಕಾಣಿಸುತ್ತಿಲ್ಲ' ಎಂದುಕೊಳ್ಳುವವರೊಬ್ಬರು ಸುಸ್ಥಿತಿಯಲ್ಲಿ ನಿಮ್ಮೊಳಗೇ ಇದ್ದಾರಲ್ಲ. ಇನ್ನು ಒಂಟಿ ಹೇಗೆ ಆಗುತ್ತೀರಿ ?'' ಎಂದರು ಯಾರೋ.

ಹಾಗೆ ಹೇಳಿದವರಿಗಾಗಿ ಸುತ್ತಲೂ ನೋಡಿದರು ಅವರು. ಯಾರೂ ಕಾಣಿಸಲಿಲ್ಲ. ಈವರೆಗೆ ಎದುರಿಗೇ ಇದ್ದ ಅಳಿಲುಮರಿ ಸಹ ಕಾಣಲಿಲ್ಲ.

- ೧೪ -

''ಈ ಮರದಲ್ಲಿನ ಹೀಚುಗಳೆಲ್ಲ ಕೊಂಬೆಗಳ ಮರೆಯಲ್ಲಿ, ರೆಂಬೆಗಳ ಮರೆಯಲ್ಲಿ, ಎಲೆಗಳ ಮರೆಯಲ್ಲಿ ಕಾಣಿಸಿಯೂ ಕಾಣಿಸದಂತೆ ಇವೆ. ಕಾಯಿಗಳಾದರೋ ಕೊಂಬೆಗಳಲ್ಲಿ ನೇತಾಡುತ್ತ ಅತ್ತಿತ್ತ ತೂಗಾಡುತ್ತಿವೆ. ಈ ಹೀಚುಗಳೇ ಆಗಲಿ, ಈ ಕಾಯಿಗಳೇ ಆಗಲಿ ಒಂದೇ ಮರದ್ದು ತಾನೆ ? ಇವುಗಳ ಮಧ್ಯೆ ಈ ವ್ಯತ್ಯಾಸ ಏಕೆ ?'' ಎಂದು ಅವರನ್ನು ಕೇಳಿದೆ.

ಅವರು ನನ್ನ ಕಡೆಗೆ ನೋಡಿದರು. ಸ್ವಲ್ಪ ಹೊತ್ತು ಆಲೋಚಿಸಿದರು. ಸಣ್ಣಗೆ ನಕ್ಕರು. ಇನ್ನೂ ಚಿಕ್ಕದಾಗಿ ತಲೆಯಾಡಿಸಿದರು.

''ನನಗೂ ಸರಿಯಾಗಿ ತಿಳಿಯದು. ನೀವು ಕೇಳುವ ಮೊದಲು ನನಗೆ ಇಂತಹ ಅನುಮಾನ ಸಹ ಬರಲಿಲ್ಲ. ನನಗೇನು ಅನ್ನಿಸುತ್ತಿದೆಯೋ ಹೇಳುತ್ತೇನೆ. ಅದು ನಿಜ ಆಗದಿರಬಹುದು. ಹೀಚುಗಳೇನೋ ಹಸುಕಂದಗಳು. ಅದಕ್ಕೆಂದು ಎಲೆ ಎದೆಗೆ ಅಪ್ಪಿಕೊಂಡು ಬಚ್ಚಿಟ್ಟುಕೊಳ್ಳುವ ಹಾಗೆ ಮಾಡಿದ್ದಾಳೆ ಆ ಮರತಾಯಿ. ಕಾಯಿಗಳಿಗೆ ಸ್ವಲ್ಪ ವಯಸ್ಸಾಗಿದೆ. ಬೆಳೆದ ಮಕ್ಕಳು ಹೆತ್ತವರನ್ನು ಅಂಟಿಕೊಂಡು ಬಹುಕಾಲ ಇರುವುದಿಲ್ಲ ಎಂದು ಮರತಾಯಿಗೆ ಗೊತ್ತು. ಅದಕ್ಕಾಗಿಯೇ ಕಾಯಿಗಳಿಗೆ ಆ ಮಟ್ಟಿನ ಸ್ವಾತಂತ್ರ್ಯವನ್ನು ಕೊಟ್ಟಿದ್ದಾಳೆ ಎಂದು ನನ್ನ ಭಾವನೆ'' ಎಂದರು ಅವರು.

- ೧೫ -

''ನಾನು ಬಹಳ ಹೊತ್ತಿನಿಂದ ಗಮನಿಸುತ್ತಿದ್ದೇನೆ. ನೀವು ನಿರಂತರವಾಗಿ ಆ ಚಿಗುರೆಲೆಯ ಕಡೆಗೆ ನೋಡುತ್ತಿದ್ದೀರಿ. ನೋಡುತ್ತಾ ನೋಡುತ್ತಾ ನಡುನಡುವೆ ಕಿರಿದಾಗಿ ನಗುತ್ತಿದ್ದೀರಿ. ಕೂಡಲೇ ಭಯಪಡುತ್ತಿದ್ದೀರಿ. ತಕ್ಷಣವೇ ತಲೆಯಾಡಿಸುತ್ತಿದ್ದೀರಿ. ಆ ತರುವಾಯ ನಿಟ್ಟುಸಿರು ಬಿಡುತ್ತಿದ್ದೀರಿ. ಕಾರಣ ಏನೆಂದು ನನಗೆ ತೋಚಲಿಲ್ಲ'' ಎಂದೆ ಮೆಲ್ಲಗೆ.

''ಆ ಚಿಗುರೆಲೆಯನ್ನು ನೋಡಿದ ಕೂಡಲೇ ನನ್ನ ಬಾಲ್ಯದ ಜ್ಞಾಪಕ ಬಂತು. ಆಗಿನ ಸಂಗತಿಗಳೂ ನೆನಪಾದುವು. ಅದಕ್ಕೆ ಮೀರಿದ ಬೇರೆ ಕಾರಣವೇನೂ ಇಲ್ಲ'' ಎಂದಿತು ಆ ಹಣ್ಣೆಲೆ.

ಕನ್ನಡಕ್ಕೆ : **ಡಾ|| ಎಚ್. ಎಸ್. ಸುಜಾತಾ**
೫೩, 'ಸುಹಾಸ', ೪ನೇ ಮುಖ್ಯರಸ್ತೆ, ಮಾರುತಿ ದೇವಸ್ಥಾನದ ಬೀದಿ, ಕುವೆಂಪುನಗರ, ಮೈಸೂರು - ೯

# ಹಾಸನದ ಜನವರಿ ಜಾತ್ರೆ

## [ದನಗಳ ಜಾತ್ರೆ]

**ಡಾ|| ವಸಂತಕುಮಾರ್ ಹ್ಯಾರಾನೆ**

**ಜಾ**ತ್ರೆಗಳು ಮಾನವ ಜನಾಂಗದ ಸಾಂಸ್ಕೃತಿಕ ಶ್ರೀಮಂತಿಕೆಯ ಪ್ರತೀಕವಾಗಿದ್ದು, ಮಾನವನ ಸಂತೋಷ ಹಾಗೂ ಅವನಲ್ಲಿರುವ ಕಲೆಯ ಅಭಿವ್ಯಕ್ತಿಗೆ ಉತ್ತಮ ಮಾಧ್ಯಮವಾಗಿವೆ.

ಜಾತ್ರೆಗಳು ಎಂದಾಕ್ಷಣ ನಮ್ಮ ಮನಸ್ಸು ಹಳ್ಳಿಗಳ ಕಡೆ ವಾಲುತ್ತದೆ. ಆದರೆ ನಗರಗಳಲ್ಲಿಯೂ ಜಾತ್ರೆಗಳು ಇರುತ್ತವೆ ಎಂಬುದನ್ನು ಅಷ್ಟಾಗಿ ಗಮನಿಸುವುದಿಲ್ಲ. ಹಳ್ಳಿ ಜಾತ್ರೆಗಳಷ್ಟು ಜೀವಂತಿಕೆಯನ್ನು ನಗರ ಜಾತ್ರೆಗಳು ತುಂಬುವುದಕ್ಕೆ ಆಗದಿದ್ದರೂ, ಅದಕ್ಕೆ ಹತ್ತಿರವಾಗುವಂತಹ ಸಂಸ್ಕೃತಿಯನ್ನು ಮಾತ್ರ ಹೊಂದಿವೆ ಎಂಬುದನ್ನು ಮರೆಯುವಂತಿಲ್ಲ. 'ಹಳ್ಳಿಯಿಂದ ದಿಲ್ಲಿ' ಎಂಬ ಗಾದೆಯೂ ಕೂಡ ಈ ಹಿನ್ನೆಲೆಯಲ್ಲಿಯೇ ಬಂದಿರುವಂಥದ್ದು. ಆದ್ದರಿಂದ ನಗರವಾದರೂ ಕೂಡ ಹಳ್ಳಿಯ ಸಾಂಸ್ಕೃತಿಕ ಬೇರು ಇದ್ದೇ ಇರುತ್ತದೆ.

ನಮ್ಮ ಸುತ್ತಮುತ್ತಲು ನಡೆಯುವ ಜಾತ್ರೆಗಳನ್ನು ಸದಾ ನೋಡಿರುತ್ತೇವೆ, ಕೇಳಿರುತ್ತೇವೆ. ನಮ್ಮ ಗಮನಕ್ಕೆ ಬಾರದೆ ಇರುವ, ಎಲ್ಲರ ದೃಷ್ಟಿಗೂ ಬೀಳದೆ ಇರುವ, ಎಷ್ಟೋ ಜಾತ್ರೆಗಳನ್ನು ಕಾಣಬಹುದಾಗಿದೆ.

ಜಾತ್ರೆಗಳು ಜನಪದರ ಜೀವನದ ಅವಿಭಾಜ್ಯ ಅಂಗಗಳಾಗಿ ಕಂಡುಬರುತ್ತವೆ. ಸಮಾಜದ ಏಳಿಗೆಗಾಗಿ, ದೇವತೆಗಳ ಸಂಪ್ರೀತಿಗಾಗಿ, ಜನರ ಸಂತೋಷಕ್ಕಾಗಿ ಬಹಳ ಹಿಂದಿನಿಂದಲೂ ನಡೆಯುತ್ತ ಬಂದಿರುವುದು ಎಲ್ಲರಿಗೂ ತಿಳಿದಿರುವ ವಿಚಾರವಾಗಿದೆ. ಜಾತ್ರೆಗಳು ಒಂದು ಕಡೆ ಸಂಭ್ರಮ ಮೂಡಿಸಿದರೆ ಮತ್ತೊಂದು ಕಡೆ ಹಬ್ಬದ ವಾತಾವರಣ ಮೂಡಿಸಿ ವೈಶಿಷ್ಟ್ಯಪೂರ್ಣವಾದ ಸಂಸ್ಕೃತಿಯತ್ತ ನಮ್ಮನ್ನು ಕೊಂಡೊಯ್ಯುತ್ತವೆ.

ಪ್ರಾಚೀನ ಮಾನವ ಕಾಡಿನಲ್ಲಿ ವಾಸಿಸುತ್ತಿದ್ದ. ಇವನಿಗೆ ಪ್ರಕೃತಿಯಲ್ಲಿನ ವೈವಿಧ್ಯಮಯ ವಿಶಿಷ್ಟಾನುಭವಗಳನ್ನು ಕಂಡು ಅಚ್ಚರಿಯಾಗಿ ಇವೆಲ್ಲವುಗಳ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಿದ. ಮಳೆ ಬರುವುದು, ಮಿಂಚುವುದು, ಗುಡುಗುವುದು, ಮರಗಳ ತಿಕ್ಕಾಟದಿಂದ ಬೆಂಕಿ ಹೊತ್ತಿಕೊಳ್ಳುವುದು, ಉಲ್ಕೆ ಬೀಳುವುದು, ಹೀಗೆ ಹಲವಾರು ರೀತಿಯ ವಿಸ್ಮಯದ ಸಂಗತಿಗಳು ಇವನಿಗೆ ಗೋಚರವಾದವು. ಇವುಗಳೆಲ್ಲವುಗಳನ್ನು ಯಾವುದೋ ಒಂದು ಶಕ್ತಿ ಮಾಡುತ್ತಿದೆಯೆಂದು ಭಾವಿಸಿ ಅದಕ್ಕೆ ಗೌರವಪೂರ್ವಕವಾಗಿ ನಡೆದುಕೊಳ್ಳಲಾರಂಭಿಸಿದ. ಹೀಗಾಗಿ ಪ್ರಾಚೀನ ಮಾನವ ಪ್ರಕೃತಿಯ ಆರಾಧಕನಾದ. ಸೂರ್ಯ, ಚಂದ್ರ, ಮರ, ನದಿ, ಕಲ್ಲು, ಬೆಟ್ಟಗುಡ್ಡ ಮುಂತಾದವುಗಳನ್ನು ಪೂಜಿಸುತ್ತ ಬಂದ. ಅವನು ಬೌದ್ಧಿಕವಾಗಿ ಬೆಳೆದಂತೆಲ್ಲ ಹೊಸ ಬದುಕಿನತ್ತ ಕಾಲಿಟ್ಟು ನಡೆಯಲಾರಂಭಿಸಿದ.

ದೈನಂದಿನ ಬದುಕಿನತ್ತ ಹೊರಟವನು ತನಗೆ ಅಗತ್ಯವಾದ ವಸತಿಗಳನ್ನು ನಿರ್ಮಿಸಿಕೊಳ್ಳುತ್ತಾ ಕೌಟುಂಬಿಕ ಜೀವನವನ್ನು ಒಂದು ವ್ಯವಸ್ಥಿತವಾದ ರೂಪದಲ್ಲಿ ಅನುಭವಿಸಲು ತನ್ನ ದೈನಂದಿನ ಆಗುಹೋಗುಗಳಿಗೆ ಆಧಾರವಾಗುವ ನಿಸರ್ಗವನ್ನು ಅದರ ಬಹುಮುಖಗಳಲ್ಲಿ ಪೂಜಿಸುತ್ತ ಬಂದು ವಿಶಿಷ್ಟ ಜೀವನ ಪದ್ಧತಿಯನ್ನು ರೂಢಿಸಿಕೊಂಡ. ಹೀಗಾಗಿ ಅವನ ಜೀವನಕ್ರಮದಲ್ಲಿ ಬೆಳವಣಿಗೆಯನ್ನು ಸಾಧಿಸಿಕೊಳ್ಳುತ್ತಾ ಬಂದಂತೆ ಹಬ್ಬ, ಹರಿದಿನ, ಜಾತ್ರೆ, ಸಂತೆ ಇತ್ಯಾದಿ ಪರಿಕಲ್ಪನೆಗಳು ಅವನಲ್ಲಿ ಒಡಮೂಡಿದವು. ಅವನ ಜೀವನದಿಂದ ಹುಟ್ಟಿದ ಮತ್ತು ಜೀವನಕ್ಕೆ ಪೋಷಕವಾದ ಈ ಎಲ್ಲ ಪದ್ಧತಿಗಳು ಸಾಮಾಜಿಕ ಚಿಂತನೆ ಮತ್ತು ಕ್ರಿಯೆ ಹಾಗೂ ಆಚರಣೆಯ ಫಲವಾಗಿ ಸಂಸ್ಕೃತಿ ಎನಿಸಿಕೊಂಡವು. ಈ ಎಲ್ಲಾ ಸಂಸ್ಕೃತಿಯ ಮೂಲ ಹೆಜ್ಜೆ, ಮೂಲ ಸಾಮಗ್ರಿ ಮತ್ತು ಮೂಲ ಚಿಂತನೆ ಆ ಪರಿಸರದಿಂದ ಜನ್ಯವಾದವುಗಳೇ ಆದವು.

ಮಾನವ ತನ್ನ ಬೆಳವಣಿಗೆಯ ಆರಂಭದ ದಿನಗಳಲ್ಲಿ ನಡೆಸುತ್ತಿದ್ದ ಆಚರಣೆ ಪದ್ಧತಿಗಳಲ್ಲಿ ಧಾರ್ಮಿಕ ಭಾವನೆಯೇ ಪ್ರೇರಕವಾಗಿತ್ತು. ದೇವರು, ಧರ್ಮದಲ್ಲಿ ಭೀತಿ-ಶ್ರದ್ಧೆಯುಳ್ಳ ಮಾನವ ದೇವರನ್ನು ಒಲಿಸಿಕೊಂಡು, ಬದುಕಿನಲ್ಲಿ ಶಾಂತಿ ನೆಮ್ಮದಿ ಸುಖ ಕಾಣಲು ನಂಬಿಕೆಗಳನ್ನು ಆಶ್ರಯಿಸಿದ. ನಂಬಿಕೆಗಳಿಗೆ ಪೂರಕವಾಗಿ ಹಲವಾರು ಆಚರಣೆ ಮತ್ತು ಸಂಪ್ರದಾಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡ. ದೈವದ ಮೊರೆಹೋದ. ದೈವಾರಾಧನೆಯಲ್ಲೇ ಹಬ್ಬ ಹರಿದಿನಗಳನ್ನು ಪ್ರಾರಂಭಿಸಿದ. ಅಷ್ಟೇ ಅಲ್ಲದೆ, ತಾನು ಪೂಜಿಸುವ ದೇವತೆಗಳಲ್ಲೇ ಕೆಲವನ್ನು ಗ್ರಾಮದೇವತೆಗಳಾಗಿ ಮಾಡಿಕೊಂಡು ಆ ಗ್ರಾಮದೇವತೆಗಳನ್ನು ನಂಬಿ ನಡೆಯತೊಡಗಿದ. ಪ್ರಾಕೃತಿಕ ವಿಕೋಪದಿಂದ ಪಾರಾಗುವಂತಹ ಹಲವು ಆಚರಣೆಗಳಲ್ಲಿ ದೇವರನ್ನು ಒಲಿಸಿಕೊಳ್ಳಲು ಅಥವಾ ಸಂಪ್ರೀತಿಗೊಳಿಸಲು ಹರಕೆ ಮುಡಿ-ಹರಿಸೇವೆಯಲ್ಲದೆ ವೈವಿಧ್ಯಮಯ ರೀತಿ-ನೀತಿಗಳನ್ನು ರೂಢಿಗೆ ತಂದ. ಈ ಹರಕೆಗಳನ್ನು ತೀರಿಸುವ ಸಲುವಾಗಿ ವರ್ಷಕ್ಕೊಮ್ಮೆ ಒಂದೆಡೆ ಸೇರಿ ಸಂತೋಷ ಮತ್ತು ಸಂಭ್ರಮದಿಂದ ಕಲೆತ. ಹೀಗಾಗಿ ಹಬ್ಬ ಜಾತ್ರೆಗಳ ಉಗಮಕ್ಕೆ ನಾಂದಿಯಾಯಿತು.

ಪ್ರತಿವರ್ಷ ಕೃಷಿ ಕೆಲಸಗಳು ಮುಗಿದು, ಅದರ ಫಲ ಕೈ ಸೇರಿದ ಮೇಲೆ ರೈತನು ಬಿಡುವಾಗಿರುವ ಕಾಲದಲ್ಲಿ ಕೃಷಿಯಿಂದ ಕೈಗೆ ಬಂದ ಫಲಕ್ಕಾಗಿ ದೇವರಿಗೆ ಕೃತಜ್ಞತೆ ಸಲ್ಲಿಸುವುದು ಮತ್ತು ಮುಂದಿನ ವರ್ಷವೂ ಇದೇ ರೀತಿ ಫಲ ಸಿಗುವಂತೆ ಪ್ರಾರ್ಥನೆ ಸಲ್ಲಿಸುವುದು ಮೊದಲಾದ ಕಾರಣಗಳಿಗಾಗಿ ಯಾವುದೋ ಒಂದು ಸ್ಥಳದ ಜನರು ಮಾತ್ರವಲ್ಲದೆ, ಅವರ ಬಂಧು-ಬಾಂಧವರು ಸೇರಿದಂತೆ ಎಲ್ಲರೂ ಒಂದೆಡೆ ಸೇರಿ, ಸಂತೋಷ ಸಡಗರದಿಂದ ಕಲೆತು, ಪ್ರೀತಿ ವಿಶ್ವಾಸಗಳಿಂದ ಅನುಭವಗಳನ್ನು ಹಂಚಿಕೊಳ್ಳುವ ದೃಷ್ಟಿಯಿಂದ ಜನಸಮೂಹಗಳು ಸೇರಲ್ಪಟ್ಟವು. ಆ ಸಮೂಹಗಳೇ ಮುಂದೆ ಬೃಹದಾಕಾರದ ಜಾತ್ರೆಗಳಾಗಿ ವೈವಿಧ್ಯಮಯ ರೀತಿಯಲ್ಲಿ ರೂಪತಳೆದವೆನಿಸುತ್ತದೆ.



ಹಾಸನದಲ್ಲಿ ನಡೆಯುವ ಪ್ರಮುಖ ಜಾತ್ರೆಗಳಲ್ಲಿ ದನಗಳ ಜಾತ್ರೆಯೂ ಒಂದು. ನಾವು ಜನಗಳ ಜಾತ್ರೆಯನ್ನು ನೋಡಿರುತ್ತೇವೆ. ಜನ ಸೇರಿದರೆ ಜಾತ್ರೆ ಎನ್ನುತ್ತೇವೆ. ಜನರಿಂದ ಜನರಿಗಾಗಿ ಜನ ಕೂಡುವ ಒಂದು ಸಾಮಾಜಿಕ ಚಟುವಟಿಕೆ ಜಾತ್ರೆ ಎನ್ನುತ್ತೇವೆ, ಅದರಲ್ಲಿ ಭಾಗವಹಿಸುತ್ತೇವೆ. ಆದರೆ ದನಗಳಿಗಾಗಿಯೂ ಜಾತ್ರೆಗಳು ಇವೆಯೆಂಬುದು ಅಚ್ಚರಿಯಾದರೂ ಸತ್ಯ. ಹಾಸನದ ದನಗಳ ಜಾತ್ರೆ ಇಡೀ ಕರ್ನಾಟಕಕ್ಕೆ ಹೆಸರುವಾಸಿ. "ಕ್ರಿ.ಶ. ೧೯೦೦ರಲ್ಲಿ ಅಂದಿನ ಬ್ರಿಟಿಷ್ ಆಡಳಿತಾಧಿಕಾರಿ ವೆದುರಾಲ್ ಹಾಗೂ ಉಪವಿಭಾಗಾಧಿಕಾರಿ ಅಪ್ಪಣ್ಣ ಅಯ್ಯಂಗಾರ್ ಹಾಸನದ ದನಗಳ ಜಾತ್ರೆಯನ್ನು ಆರಂಭಿಸಿದರು." ಡಿಸೆಂಬರ್ ತಿಂಗಳ ಮಾಗಿ ಚಳಿಯಲ್ಲಿ ಪ್ರಾರಂಭವಾಗುವ ಈ ಜಾತ್ರೆಗೆ ಹಾಸನದ ಸುತ್ತಮುತ್ತಲ ಜಿಲ್ಲೆಗಳಿಂದ ರೈತರು ತಮ್ಮ ತಮ್ಮ ಜಾನುವಾರುಗಳೊಂದಿಗೆ ಪಾಲ್ಗೊಳ್ಳುತ್ತಾರೆ. ಇದಕ್ಕೂ ಮೊದಲು ನಡೆಯುವ ರಾಮನಾಥಪುರದ ಜಾತ್ರೆ ಮುಗಿದ ತಕ್ಷಣ ಅಲ್ಲಿ ಹೋರಿ ಕಟ್ಟಿದ್ದವರು ಸೀದಾ ಇಲ್ಲಿಗೆ ತಂದು ಕಟ್ಟುತ್ತಾರೆ. ಹೀಗಾಗಿ ಜನವರಿಯಲ್ಲಿ ನಡೆಯಬೇಕಾದ ಜಾತ್ರೆ ಡಿಸೆಂಬರ್‌ನಲ್ಲಿಯೇ ಶುರುವಾಗುತ್ತದೆ.

ಜಾತ್ರೆಗಳು ಒಂದು ಗ್ರಾಮಕ್ಕೆ ಸೀಮಿತವಾಗಿದ್ದರೂ, ಕೆಲವೊಂದು ಜಾತ್ರೆಗಳನ್ನು ಸುತ್ತಮುತ್ತಲಿನ ಗ್ರಾಮಗಳವರು ಸೇರಿ ಆಚರಿಸುತ್ತಾರೆ. ಸಾಮಾನ್ಯವಾಗಿ ಇಂತಹ ಜಾತ್ರೆಗಳು ಎಲ್ಲರಿಗೂ ಗೊತ್ತಿರುತ್ತವೆ. ಎಲ್ಲರೂ ಒಟ್ಟಿಗೆ ಭಾಗವಹಿಸಿ ಜಾತ್ರಾಮಹೋತ್ಸವವನ್ನು ಶ್ರದ್ಧೆಯಿಂದ ಆಚರಿಸುತ್ತಾರೆ.

ಕನ್ನಡ ನಾಡು ಬಹು ವಿಸ್ತಾರವಾದ ಸುಂದರ ನಾಡು. ಈ ಸುಂದರ ನಾಡಿನ ಸಂಪದ್ಭರಿತ ಜಿಲ್ಲೆಗಳಲ್ಲಿ ಹಾಸನ ಜಿಲ್ಲೆಯು ಒಂದು. ಹಾಸನವು 'ಬಡವರ ಊಟಿ' ಎಂದೇ ಹೆಸರು ಪಡೆದಿದೆ. ಅರೆಮಲೆನಾಡಿನ ಸೆರಗನ್ನು ಹೊಂದಿರುವ ಹಾಸನ ನಗರದಲ್ಲಿ ವಿವಿಧ ಜನರು ವಾಸಿಸುತ್ತಿದ್ದಾರೆ. ಬ್ರಾಹ್ಮಣ, ವೈಶ್ಯ, ಗೌಡ, ಹರಿಜನ, ಬೆಸ್ತ, ವೀರಶೈವ, ಮುಸ್ಲಿಂ, ಜೈನ, ಮಾರ್ವಾಡಿ, ಸೇಟುಗಳು... ಇತ್ಯಾದಿ. ಪ್ರಧಾನವಾಗಿ ಗೌಡ ಹಾಗೂ ವೀರಶೈವ ಜನಸಮುದಾಯದವರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇವರೆಲ್ಲಾ ಅವರವರದೇ ಆದ ಭಾಷೆ, ಸಂಸ್ಕೃತಿ, ಧರ್ಮ ನಡೆನುಡಿಗಳನ್ನು ಮೈಗೂಡಿಸಿಕೊಂಡಿದ್ದಾರೆ.

ಹಾಸನ ನಗರವು ಅಭಿವೃದ್ಧಿ ಹೊಂದಿದಂತೆ ಕೈಗಾರಿಕೆಗಳು, ಉದ್ಯಮಗಳು, ಶಾಲಾ ಕಾಲೇಜುಗಳು ಪ್ರಾರಂಭವಾಗಿ ಜನಾಕರ್ಷಣೆಗೊಳ್ಳುತ್ತಿದೆ. ವೈದ್ಯಕೀಯ ಸೌಲಭ್ಯಗಳನ್ನು ಪಡೆಯಲು ಹಾಗೂ ಉದ್ಯೋಗಗಳನ್ನು ಅರಸಿ ಬರುವವರ ಸಂಖ್ಯೆ ಹೆಚ್ಚಾಗುತ್ತಲಿದೆ. ಇತ್ತೀಚೆಗೆ ವೈದ್ಯಕೀಯ ಮಹಾವಿದ್ಯಾಲಯವು ಆರಂಭಗೊಂಡಿರುವುದರಿಂದ ಹೊರಗಿನಿಂದ ಬರುವವರ ಸಂಖ್ಯೆ ಅಧಿಕವಾಗಿದೆ. ಆದ್ದರಿಂದಲೇ ನಗರದ ವಿಸ್ತೀರ್ಣವು ಸಹ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಲಿದೆ. ಹೀಗೆ ವಿಸ್ತಾರಗೊಂಡಂತೆ ನಗರಕ್ಕೆ ಹಲವಾರು ಹಳ್ಳಿಗಳು ಸೇರ್ಪಡೆಯಾಗಿ ವೈವಿಧ್ಯಮಯ ಹಬ್ಬ-ಹರಿದಿನ, ಜಾತ್ರೆ ಉತ್ಸವಗಳು ನಡೆಯಲು ಕಾರಣವಾಗಿದೆ.

ಹಾಸನದಲ್ಲಿ ನಡೆಯುವ ಪ್ರಮುಖ ಜಾತ್ರೆಗಳಲ್ಲಿ ದನಗಳ ಜಾತ್ರೆಯೂ ಒಂದು. ನಾವು ಜನಗಳ ಜಾತ್ರೆಯನ್ನು ನೋಡಿರುತ್ತೇವೆ. ಜನ ಸೇರಿದರೆ ಜಾತ್ರೆ ಎನ್ನುತ್ತೇವೆ. ಜನರಿಂದ ಜನರಿಗಾಗಿ ಜನ ಕೂಡುವ ಒಂದು ಸಾಮಾಜಿಕ ಚಟುವಟಿಕೆ ಜಾತ್ರೆ ಎನ್ನುತ್ತೇವೆ, ಅದರಲ್ಲಿ ಭಾಗವಹಿಸುತ್ತೇವೆ. ಆದರೆ ದನಗಳಿಗಾಗಿಯೂ ಜಾತ್ರೆಗಳು ಇವೆಯೆಂಬುದು ಅಚ್ಚರಿಯಾದರೂ ಸತ್ಯ. ಹಾಸನದ ದನಗಳ ಜಾತ್ರೆ ಇಡೀ ಕರ್ನಾಟಕಕ್ಕೆ ಹೆಸರುವಾಸಿ. ''ಕ್ರಿ.ಶ. ೧೯೦೮ರಲ್ಲಿ ಅಂದಿನ ಬ್ರಿಟಿಷ್ ಆಡಳಿತಾಧಿಕಾರಿ ವೆದುರಾಲ್ ಹಾಗೂ ಉಪವಿಭಾಗಾಧಿಕಾರಿ ಅಪ್ಪಣ್ಣ ಅಯ್ಯಂಗಾರ್ ಹಾಸನದ 'ದನಗಳ ಜಾತ್ರೆಯನ್ನು ಆರಂಭಿಸಿದರು.'' ಡಿಸೆಂಬರ್ ತಿಂಗಳ ಮಾಗಿ ಚಳಿಯಲ್ಲಿ ಪ್ರಾರಂಭವಾಗುವ ಈ ಜಾತ್ರೆಯಲ್ಲಿ ಹಾಸನದ ಸುತ್ತಮುತ್ತಲ ಜಿಲ್ಲೆಗಳಿಂದ ರೈತರು ತಮ್ಮ ತಮ್ಮ ಜಾನುವಾರುಗಳೊಂದಿಗೆ ಪಾಲ್ಗೊಳ್ಳುತ್ತಾರೆ. ಇದಕ್ಕೂ ಮೊದಲು ನಡೆಯುವ ರಾಮನಾಥಪುರದ ಜಾತ್ರೆ ಮುಗಿದ ತಕ್ಷಣ ಅಲ್ಲಿ ಹೋರಿ ಕಟ್ಟಿದ್ದವರು ಸೀದಾ ಇಲ್ಲಿಗೆ ತಂದು ಕಟ್ಟುತ್ತಾರೆ. ಹೀಗಾಗಿ ಜನವರಿಯಲ್ಲಿ ನಡೆಯಬೇಕಾದ ಜಾತ್ರೆ ಡಿಸೆಂಬರ್‌ನಲ್ಲಿಯೇ ಶುರುವಾಗುತ್ತದೆ.

ಜಾತ್ರೆಗೋಸ್ಕರವೇ ಬಹಳ ಮುತುವರ್ಜಿಯಿಂದ ದನಗಳನ್ನು ಸಾಕಲಾಗುತ್ತದೆ. ಕೆಲವರು ಮಾರುವ ಇಚ್ಛೆ ಇಲ್ಲದಿದ್ದರೂ ಒಳ್ಳೆ ಬೆಲೆ ಸಿಕ್ಕರೆ ನೋಡೋಣ ಎಂದು ಜಾತ್ರೆಗೆ ಎತ್ತುಗಳನ್ನು ಕಟ್ಟುತ್ತಾರೆ. ಎತ್ತುಗಳಿಗೂ ಹೋರಿಗಳಿಗೂ ಸ್ವಲ್ಪ ವ್ಯತ್ಯಾಸವಿರುತ್ತದೆ. ಎತ್ತುಗಳು ಸ್ವಲ್ಪ ವಯಸ್ಸಾದಂಥವು. ಹೋರಿಗಳು ಆಗಿನ್ನೂ ಹಲ್ಲಿಕ್ಕುತ್ತಿರುವ ಅಥವಾ ಎರಡು ಹಲ್ಲಿನ ಕರುಗಳು. ನಾಲ್ಕು ಹಲ್ಲಿನವು ಆಗಬಹುದು. ಆದರೆ ಆರು ಹಲ್ಲಿನವು ಎತ್ತುಗಳಾಗಿಬಿಡುತ್ತವೆ.

ಜಾತ್ರೆಗೆ ದನ ಹೊಡೆಯುವುದೆಂದರೆ ರೈತರಿಗೆ ಎಲ್ಲಿಲ್ಲದ ಹಿಗ್ಗು. ಅದಕ್ಕಾಗಿಯೇ ಮೂರ್‍ನಾಲ್ಕು ದಿನಗಳಿಂದಲೇ ತಯಾರಿ ನಡೆಸಿರುತ್ತಾರೆ. ಏಕೆಂದರೆ ಅದೊಂದು ರೀತಿಯ ಯಾತ್ರೆ ಇದ್ದಂತೆ. ಜಾತ್ರೆ ನಡೆಯುವ ಒಂದರಿಂದ ಒಂದೂವರೆ ತಿಂಗಳ ಕಾಲವೂ ದನಗಳ ಜೊತೆಗೆ ಒಂದಿಬ್ಬರು ವಾಸ್ತವ್ಯ ಹೂಡುವುದು ಅಗತ್ಯವಾಗಿರುವುದರಿಂದ ಗಾಡಿ ಕಟ್ಟಿಕೊಂಡು ದನಗಳಿಗೆ ಬೇಕಾದ ಹುಲ್ಲು-ಹಿಂಡಿ, ಕಲಗಚ್ಚಿಗಾಗಿ ಬಾನಿ, ನೀರಿಗಾಗಿ ಕೊಡ, ಸಾರಿಗೆ (ಸಾಂಬಾರಿಗೆ) ಕಾರ, ತಿರುವಲು ಕುಂದ, ಕುಂದಕ್ಕೆ ದಡಿ (ಇದು ರಕ್ಷಣೆಯ ದೃಷ್ಟಿಯಿಂದಲೂ ಅಗತ್ಯ), ಚಳಿಗಾಲವಾದ್ದರಿಂದ ತಾವು ಹೊದೆಯಲು ಕಂಬಳಿ, ಬಟ್ಟೆ-ಬರೆ, ಪಾತ್ರೆ-ಪಡಗ ಇವುಗಳೆಲ್ಲವನ್ನೂ ಜತೆಮಾಡಿಕೊಂಡು ಹೊರಡಬೇಕಾಗುತ್ತದೆ. ನಂತರ ಮೊದಲೇ ಗುರುತುಮಾಡಿದ ಜಾಗ ಸೇರಿ ತಮ್ಮ ಠಿಕಾಣಿ ಹೂಡುತ್ತಾರೆ. ಇಲ್ಲಿ ಹೆಚ್ಚಿನವರಿಗೆ ಬಯಲೇ ಮನೆಯಾದರೆ ಇನ್ನು ಕೆಲವರಿಗೆ ಗಾಡಿಗಳ ಕೆಳಗಿನ ಗುಡಾರವೇ ಮನೆ.

ಜಾತ್ರೆಯಲ್ಲಿ ದಿನಸಿ ತರಕಾರಿಗಳಿಂದ ಹಿಡಿದು ಬೀಡಿ ಬೆಂಕಿಪೊಟ್ಟಣ, ಎಲೆ-ಅಡಿಕೆ, ಹೊಗೆಸೊಪ್ಪು ಎಲ್ಲವೂ ದೊರೆಯುವುದುಂಟು. ಬೀದಿಬದಿಯ ಚಾದಂಗಡಿಗಳು, ಜ್ಯೂಸ್ ಎಂಬ ಬಣ್ಣದ ನೀರು, ಕಬ್ಬಿನಹಾಲು, ವಡೆ-ಪಕೋಡ, ಬಜ್ಜಿ-ಉಪ್ಪಿಟ್ಟು ಮೊದಲಾದ ತಿನಿಸುಗಳ ಡೇರೆ ಹೋಟೆಲುಗಳು ಉಂಟು. ಗಡ್ಡ ಬೆಳೆಯಿತೇ? ಗಿರಾಕಿಗಳನ್ನು ಹುಡುಕುತ್ತಾ ಸುತ್ತಾಡುವ ಕ್ಷೌರಿಕರು, ಮನುಷ್ಯರ ಕಾಲಿನ ಚಪ್ಪಲಿ ರಿಪೇರಿ ಮಾಡುವಂತೆ ದನಗಳ ಕಾಲುಗಳಿಗೆ ಹಲ್ಲೇ ಹೊಡೆಯುವ ಹಲ್ಲೆಯವರೂ ಕೂಡ ಇಲ್ಲಿ ದೊರೆಯುವುದುಂಟು.

ಹಾಸನದ ದನಗಳ ಜಾತ್ರೆಗೆ ಸುಮಾರು ಹತ್ತರಿಂದ ಹದಿನೈದು ಸಾವಿರ ರಾಸುಗಳು ಸೇರುತ್ತವೆಯೆಂಬ ಅಂದಾಜಿದೆ. ಒಂಟೆತ್ತು, ಕರುಗಳು, ಹೋರಿ, ಬೀಜದೋರಿ ಹೀಗೆ ಒಂದೊಂದು ಒಂದೊಂದು ತರಹ ಇದ್ದು, ಬಣ್ಣ ಗಾತ್ರ ಆಕಾರಗಳಲ್ಲಿ ವೈವಿಧ್ಯಮಯವಾಗಿರುತ್ತವೆ. ಹಿಂದೆ ಅಮೃತ್ ಮಹಲ್ ತಳಿಗಳು ಜಾತ್ರೆಗೆ ವಿಶೇಷ ಮೆರುಗು ನೀಡುತ್ತಿದ್ದವು. ಇವುಗಳನ್ನು ನಂಬರಿನ ಹೋರಿಗಳು, ಸರ್ಕಾರಿ ದನಗಳು ಎಂದೂ ಕರೆಯುತ್ತಿದ್ದರು. ಏಕೆಂದರೆ ಸರ್ಕಾರವೇ ಇವುಗಳ ತಳಿಯನ್ನು ಅಭಿವೃದ್ಧಿಪಡಿಸಿ ಹರಾಜಿನ ಮೂಲಕ ಕರುಗಳನ್ನು ರೈತರಿಗೆ ನೀಡುತ್ತಿತ್ತು. ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಬೀರೂರು, ಅಜ್ಜಂಪುರದಲ್ಲಿ ಇಂತಹ ತಳಿಗಳನ್ನು ಅಭಿವೃದ್ಧಿಪಡಿಸಲಾಗುತ್ತಿತ್ತು. ಈ ತಳಿಯ ಹೋರಿಗಳನ್ನು ಪಳಗಿಸಿ ಉಳುಮೆಗೆ ಬಳಸುತ್ತಿದ್ದರು. ಉಳುಮೆಗಿಂತಲೂ ಹೆಚ್ಚಾಗಿ ಇವುಗಳನ್ನು ಶೋಕಿಗೋಸ್ಕರ, ಪ್ರತಿಷ್ಠೆಗೋಸ್ಕರ ಸಾಕುತ್ತಿದ್ದವರೇ ಹೆಚ್ಚು.

ಸಾಮಾನ್ಯವಾಗಿ ಊರಿನ ಪಟೇಲರು, ಊರಿನ ಗೌಡಿಕೆ ಇದ್ದವರು, ಹಣಕಾಸಿನಲ್ಲಿ ಉತ್ತಮ ಸ್ಥಿತಿಯಲ್ಲಿದ್ದವರು ಹಾಗೂ ಹೋರಿ ಸಾಕಬೇಕೆಂಬ ಚಪಲ ಇದ್ದವರು ಮಾತ್ರ ಇಂತಹ ಹೋರಿಗಳನ್ನು ಸಾಕುತ್ತಿದ್ದರು. ಇವುಗಳನ್ನು ಸಾಕಬೇಕೆಂದರೆ ಖರ್ಚು ಬಹಳ. ಇವುಗಳು ಹುಟ್ಟಿದ ಹಸುಗಳಿಂದ ಸ್ವಲ್ಪವೂ ಹಾಲು ಕರೆಯುವಂತಿರಲಿಲ್ಲ. ಪೂರ್ಣ ಪ್ರಮಾಣದಲ್ಲಿ ಆ ಕರುಗಳಿಗೇ ಹಾಲುಣಿಸಬೇಕು. ಹೊತ್ತುಹೊತ್ತಿಗೆ ಹಿಂಡಿ, ನೀರು ನೀಡುವುದರ ಜೊತೆಗೆ ಮೈ ತೊಳೆದು ಶುಭ್ರಗೊಳಿಸಬೇಕು. ಕೊಟ್ಟಿಗೆ ಸ್ವಚ್ಛವಾಗಿಡಬೇಕು. ದಿನವೂ ಮೈಯುಜ್ಜಬೇಕು. ಹೆಸರೇ ಸೂಚಿಸುವಂತೆ ನೋಡಲಿಕ್ಕೆ ಅಂದವಾಗಿದ್ದ ಇವುಗಳನ್ನು ಸಾಕುವುದು ಪ್ರತಿಷ್ಠೆಯ ಸಂಕೇತವಾಗಿತ್ತು.

ಹಾಗಾಗಿಯೇ ಹತ್ತಾರು ಹಳ್ಳಿಗಳಲ್ಲಿ ಎಲ್ಲೋ ಒಬ್ಬಿಬ್ಬರು ಇಂತಹ ಹೋರಿಗಳನ್ನು ಸಾಕುತ್ತಿದ್ದರು. ಮಾವಿನಹಳ್ಳಿ ಚಿನ್ನಪ್ಪ, ಹೆರಗಿನ ಗಾಡಿಗುಡ್ಡೇಗೌಡ, ಗಂಡಸಿ ಸೊಂಬೇಗೌಡ ಮೊದಲಾದವರು ಹತ್ತಾರು ವರ್ಷಗಳ ಹಿಂದೆಯೇ ಇಂತಹ ಹೋರಿಗಳನ್ನು ಸಾಕಿ ಜನವರಿ ಜಾತ್ರೆಗೆ ಕಟ್ಟುತ್ತಿದ್ದರು. ಕರೆಡೇವು, ಆಲದಹಳ್ಳಿ, ಬಾಚೇನಹಳ್ಳಿ ಮೊದಲಾದ ಹಾಸನ ಜಿಲ್ಲೆಯಾದ್ಯಂತ ಹತ್ತಾರು ಹಳ್ಳಿಗಳಲ್ಲಿ ಇಂತಹ ಹೋರಿಗಳನ್ನು ಸಾಕಿ ಜಾತ್ರೆಗೆ ತಂದು ಕಟ್ಟುತ್ತಿದ್ದುದರಿಂದ ಜಾತ್ರೆಗೆ ಒಂದು ರೀತಿಯ ಕಳೆ ತುಂಬುತ್ತಿತ್ತು. ಇಂದು ಈ ತಳಿಯ ಹೋರಿಗಳ ಸಂತತಿ ಕ್ಷೀಣಿಸುತ್ತಿದೆ. ಸರ್ಕಾರವೂ ಸಹ ಈ ತಳಿಯ ಅಭಿವೃದ್ಧಿಯನ್ನು ಕಡೆಗಣಿಸಿದಂತಿದೆ. ಜೊತೆಗೆ ಸರ್ಕಾರಿ ಬೋರೆ ಅಥವಾ ಹುಲ್ಲುಗಾವಲುಗಳನ್ನು ನೀಲಗಿರಿ ತೋಪುಗಳನ್ನಾಗಿ ಪರಿವರ್ತಿಸುತ್ತಿರುವುದರಿಂದ ಎದುರಾಗಿರುವ ಮೇವಿನ ಕೊರತೆ, ಸಾಕಲಿಕ್ಕಾಗುವ ದುಬಾರಿ ವೆಚ್ಚ, ವಯಸ್ಸಾದ ನಂತರದ ಅವುಗಳ ನಿರ್ವಹಣಾ ವೆಚ್ಚ ಇವೆಲ್ಲವುಗಳಿಂದಾಗಿ ಈ ಹೋರಿಗಳ ಸಂತತಿ ಇಲ್ಲವಾಗುತ್ತಿದೆ.

ಈ ಜಾತ್ರೆಗೆ ನೂರಾರು ಮೈಲಿಗಳಿಂದ ರೈತರು, ವ್ಯಾಪಾರಸ್ಥರು ದನಗಳನ್ನು ಕೊಳ್ಳಲು ಬರುವುದುಂಟು. ಅದರಲ್ಲೂ ಉತ್ತರ ಕರ್ನಾಟಕದ ಜನ ಹೆಚ್ಚು ಬರುತ್ತಾರೆ. ಅವರುಗಳು ಬಂದರೆ ವ್ಯಾಪಾರ ಹೆಚ್ಚು. ''ಸೀಮೇರ್ ಜಾಸ್ತಿ ಬಂದವ್ರೆ ಕನ್ಲಾ ಅದ್ಕೆ ಈ ಸಾರಿ ಏನ್ ವ್ಯಾಪಾರ ಅಂತಿಯಾ ಬೆಂಕಿ ಬೆಂಕಿ''ಎಂದು ಮಾತಾಡಿಕೊಳ್ಳುವುದುಂಟು. ಹಳ್ಳಿಗಳಲ್ಲಿ ಕಡಿಮೆ ಬೆಲೆಗೆ ಕೇಳಿದ್ದ ಎತ್ತು ಹೋರಿಗಳೂ ಕೂಡ ಇಲ್ಲಿ ಒಳ್ಳೆ ಬೆಲೆಗೆ ಮಾರಾಟವಾಗುತ್ತವೆ.

ದಲ್ಲಾಳಿಗಳಿಗೂ ಕೂಡ ಇಲ್ಲಿ ಸುಗ್ಗಿ. ದನಗಳನ್ನು ಮಾರಿಸಿದ್ದಕ್ಕೆ ಮಾರುವವನಿಂದ, ಒಳ್ಳೆಯ ದನಗಳನ್ನು ಕೊಡಿಸಿದ್ದಕ್ಕೆ ಕೊಂಡವನಿಂದ, ಹೀಗೆ ಎರಡೂ ಕಡೆಯಿಂದಲೂ ಲಾಭ. ಹಣವಿದ್ದರಂತೂ ಇನ್ನೂ ಲಾಭ. ಜಾತ್ರೆ ಪೂರ್ಣ ಪ್ರಮಾಣದಲ್ಲಿ ಕಟ್ಟುವ ಮೊದಲೇ ''ಈ ವರ್ಷ ಏನೂ ಸುಕುವಿಲ್ಲ, ಯಾಪಾರ ಏನೂ ಏರೈತೆ ಅಂತ ತಿಳಿಬೇಡಿ. ಸೀಮೆಗಿರಾಕಿ ಬರೋ ಹಂಗ್ ಕಾಣ್ತಿಲ್ಲ'' ಎಂದು ಹೇಳಿ ಜಾತ್ರೆ ರಂಗೇರುವ ಮೊದಲೇ ಜಾತ್ರೆಗೆ ಬಂದಿರುವವರಿಂದ ಕಡಿಮೆ ಬೆಲೆಗೆ ರಾಸುಗಳನ್ನು ಕೊಂಡು ಕೊನೆವರೆಗೂ ಕಾದು ಒಳ್ಳೆಯ ಲಾಭ ಮಾಡಿಕೊಳ್ಳುತ್ತಾರೆ.

ಜಾತ್ರೆಯಲ್ಲಿ ಕೊಳ್ಳಲು ಮಾರಲು ಬರುವ ರೈತರು ತಮಗಿಂತ ಹೆಚ್ಚಿನ ಅನುಭವವುಳ್ಳವರನ್ನು ಕರೆತರುತ್ತಾರೆ. ಇಲ್ಲವೇ ಅನುಭವಸ್ಥ ದಲ್ಲಾಳಿಗಳ ಮೊರೆಹೋಗುತ್ತಾರೆ. ಏಕೆಂದರೆ, ದನಗಳ ಹಲ್ಲು ನೋಡುವುದು, ಸುಳಿನೋಡುವುದು - ಕಾಕ್‌ಸುಳಿ, ಮುಕ್ಕಣ್‌ಸುಳಿ, ಹೀನ್‌ಸುಳಿ ಇತ್ಯಾದಿ (ಹೀನ್ ಸುಳಿ ಇದ್ದರೆ ಹೋರಿಗಳು ಬಲಕಾಸುವುದಿಲ್ಲ – ಅಂದರೆ ಹೆಚ್ಚು ದಷ್ಟಪುಷ್ಟವಾಗುವುದಿಲ್ಲ, ಶುಭವಲ್ಲ ಎಂಬ ನಂಬಿಕೆ ಇದೆ. ಹಾಗೆಯೇ ಕಪ್ಪುಮಚ್ಚೆ ಇರುವ ಎತ್ತುಗಳನ್ನು, ತಲೆತೂಗುವ ಎತ್ತುಗಳನ್ನು ತರಬಾರದು, ಅವು ಬಂದ ಗಳಿಗೆ ಸರಿ ಇಲ್ಲದಿದ್ದರೆ ಇಡೀ ಮನೆ ಹಾಳಾಗುತ್ತದೆ. ಹಾಗಾಗಿ ಇಂತಹ ಎತ್ತು ಹೋರಿಗಳು ಶುಭವಲ್ಲ ಎಂಬ ನಂಬಿಕೆಯೂ ಇದೆ.) ಎತ್ತು ಹೋರಿಗಳ ವಯಸ್ಸು ಅಂದಾಜುಮಾಡುವುದು ಇವೆಲ್ಲವೂ ಅನುಭವಸ್ಥರಿಗೆ ಮಾತ್ರ ತಿಳಿಯುವಂಥದು. ಇವುಗಳೆಲ್ಲದರ ಆಧಾರದ ಮೇಲೆಯೇ ಬೆಲೆ ನಿರ್ಧಾರವಾಗುವಂತದ್ದು. ಹೀಗೆ ನಿರ್ಧಾರವಾಗುವಾಗ ಬಟ್ಟೆ ಮರೆಯಲ್ಲಿನ ಕೈಬೆರಳುಗಳ ಪ್ರಾಮುಖ್ಯತೆ ಹೆಚ್ಚು. ಕೈ ಕೈ ಹಿಡಿದು ಬಟ್ಟೆ ಮರೆಯಲ್ಲಿ ಒಂದೊಂದು ಬೆರಳುಗಳಿಗೆ

ಇಂತಿಷ್ಟು ಹಣವೆಂದು ನಿಗದಿಪಡಿಸಿ ಮಾರಾಟಮಾಡುವ ವ್ಯಾಪಾರ ರಾಜ್ಯಾದ್ಯಂತ ಚಾಲ್ತಿಯಲ್ಲಿದೆ. ''ಹೆಬ್ಬೆರಳಿಡಿದರೆ ಹತ್ತುಸಾವಿರ, ಪಕ್ಕದ ಒಂದೊಂದು ಬೆರಳಿಗೂ ಒಂದೊಂದು ಸಾವಿರ ಜಾಸ್ತಿ, ಹೆಬ್ಬೆರಳು ಮಡಿಸಿ ಉಳಿದವು ನಾಲ್ಕು ಸಾವಿರ ರೂ., ಅರ್ಧ ಬೆರಳು ಹಿಡಿದರೆ ಐದುನೂರು ರೂ. ಎಂದು ನಿಗದಿಯಾಗಿರುತ್ತದೆ.''

'ಜನವರಿ ಜಾತ್ರೆ' ಎಂದು ಹೆಸರು ಪಡೆದಿದ್ದರೂ ಡಿಸೆಂಬರ್ ತಿಂಗಳಲ್ಲೇ ಪ್ರಾರಂಭವಾಗಿ ಸುಮಾರು ಒಂದರಿಂದ ಒಂದೂವರೆ ತಿಂಗಳು ನಡೆಯುವ ಈ ಜಾತ್ರೆ ನಾಡಿನಾದ್ಯಂತ ಪ್ರಖ್ಯಾತಿ ಗಳಿಸಿದೆ.

ಹಾಸನದ ಜನವರಿ ಜಾತ್ರೆ ಪುರಾತನ ಪರಂಪರೆಯ ಪ್ರತೀಕದಂತಿದ್ದು, ಈ ನಗರದ ಸಾಂಸ್ಕೃತಿಕ ಪರಂಪರೆಯು ಕೂಡ ಆಗಿದೆ. ಹಾಸನ ನಗರದ ಪ್ರಸಿದ್ಧಿಗೆ ಹಾಸನಾಂಬೆ ಒಂದು ರೀತಿಯಲ್ಲಿ ಹೇಗೆ ಕಾರಣಕರ್ತಳೊ ಅದೇ ರೀತಿ ಜಾತ್ರೆಯೂ ಕೂಡ ಕಾರಣವಾಗಿದೆ ಎಂದರೆ ತಪ್ಪಾಗಲಾರದು.

ಈ ಜಾತ್ರೆಯ ವೈಶಿಷ್ಟ್ಯವೆಂದರೆ ರೈತನಿಗೆ ಗೇಣು ಅನ್ನ ನೀಡುವ ಎತ್ತು, ಹೋರಿಗಳನ್ನು ವಿಜೃಂಭಣೆಯಿಂದ ಸಾಕುವುದು ಮತ್ತು ಮಾರುವುದು. ಹಾಸನದ ಜಾತ್ರೆ ದನಗಳ ವ್ಯಾಪಾರಕ್ಕೆ ಪ್ರಸಿದ್ಧಿಯಾಗಿದ್ದು, ದಕ್ಷಿಣ ಕರ್ನಾಟಕದ ನಾನಾ ಮೂಲೆಗಳಿಂದ ಹೋರಿಗಳನ್ನು ಮಾರಲು ಮತ್ತು ಕೊಳ್ಳಲು ಈ ಜಾತ್ರೆಗೆ ಬರುತ್ತಾರೆ. ಈ ಸಂದರ್ಭದಲ್ಲಿ ಉತ್ತಮ ರಾಸುಗಳಿಗೆ ಬಹುಮಾನವನ್ನು ನೀಡಲಾಗುತ್ತದೆ. ಎಲ್ಲ ಹೋರಿಗಳಿಗಿಂತ ತನ್ನ ಹೋರಿಗಳನ್ನು ತಾನು ಚೆನ್ನಾಗಿ ಸಾಕಬೇಕೆಂಬ ಹಂಬಲದಿಂದ ರೈತರು ಹುರುಳಿ, ಹಿಂಡಿ, ಡಾಲ್ಡತುಪ್ಪ ಮುಂತಾದವುಗಳನ್ನು ಹಾಕಿ ಬೆಳೆಸುತ್ತಾರೆ. ಅಕ್ಕಪಕ್ಕದವರಿಗೆ ''ಯಂಗವಿ ನನ್ನೋರಿ ಜನವರಿ ಜಾತ್ರಿಗೆ ಹೊಡಿಲೇನಿ'' ಎಂದು ಕೇಳುವುದನ್ನು ನೋಡಬಹುದು.

ಜಾತ್ರೆಯ ಸಂದರ್ಭದಲ್ಲಿ ವಿಶಾಲವಾದ ಮೈದಾನದಲ್ಲಿ ವಿವಿಧ ಅಲಂಕಾರಗಳಿಂದ ಅಲಂಕೃತಗೊಂಡ ಎತ್ತುಗಳು ಸಾಲುಸಾಲಾಗಿ ದಾವಣಿಯಲ್ಲಿ ಕಟ್ಟಿದಾಗ ನೋಡಲು ಮನಸ್ಸಿಗೆ ಆಗುವ ಆನಂದ ಅಷ್ಟಿಷ್ಟಲ್ಲ. ಅಲ್ಲಿಯೇ ಗಾಡಿಯ ತಳಭಾಗದಲ್ಲಿ ಮಾಂಸದ ಅಡುಗೆ ಮಾಡುವ ದೃಶ್ಯಗಳು (ಅದರಲ್ಲೂ ಹಂದಿಮಾಂಸದ ಅಡುಗೆ ಈ ಜಾತ್ರೆಯಲ್ಲಿ ಪ್ರಸಿದ್ಧ), ಜೊತೆಗೆ ಇದು ಅವರೇಕಾಳಿನ ಸೀಸನ್ ಆದುದರಿಂದ ಜಾತ್ರೆಯ ಎಲ್ಲೆಡೆ ಅವರೇಕಾಯಿನ ಸೊಗಡು, ಸಾಂಬಾರಿನ ಗಮಗಮ, ಹೋರಿಗಳ ಮೈ ಒರೆಸುವ, ಹುಲ್ಲುಹಾಕುವ, ಎತ್ತುಗಳಿಗೆ ಬಿಸಿಲು ಬೀಳದಂತೆ ಚಪ್ಪರ ಹಾಕುವ, ಸೊಳ್ಳೆ ಕಡಿಯದಂತೆ ನಿಗಾವಹಿಸುವ ದೃಶ್ಯಗಳು ಕಣ್ಣಿಗೆ ಕಟ್ಟುವಂತಿದ್ದು ಜಾತ್ರೆಯ ಸೊಬಗನ್ನು ಹೆಚ್ಚಿಸುತ್ತವೆ. ಜಾತ್ರೆಗೆ ವಿವಿಧ ರೀತಿಯ ಹೋರಿಗಳು ನಾಡಿನಾದ್ಯಂತ ಬಂದಿದ್ದು ಹೋರಿಗಳ ಬೆಲೆಯಂತೂ ಸಾಮಾನ್ಯವಾಗಿ ಹತ್ತರಿಂದ ಎಪ್ಪತ್ತೈದುಸಾವಿರ ರೂಪಾಯಿಗಳವರೆಗೂ ಇರುತ್ತದೆ. ಇತ್ತೀಚಿನ ವರ್ಷಗಳಲ್ಲಿ ಲಕ್ಷವನ್ನು ದಾಟಿರುವುದನ್ನು ನೋಡಬಹುದು.

ಎತ್ತು ಹೋರಿಗಳನ್ನು ಸಾಕುವುದು ಒಂದು ಕಲೆ. ದಿನಬೆಳಗಾದರೆ ಅವುಗಳ ಆರೈಕೆಯಲ್ಲಿ ತೊಡಗಬೇಕಾಗುತ್ತದೆ. ಮಕ್ಕಳನ್ನು ಸಾಕಿದಂತೆ ಸಾಕಬೇಕಾಗುತ್ತದೆ. ಹೊತ್ತುಹೊತ್ತಿಗೆ ಹಿಂಡಿ, ಹುರುಳಿ, ಹುಲ್ಲು-ನೀರು ನೀಡಿ ವಾರಕ್ಕೆ ಮೂರುಬಾರಿಯಾದರೂ ಮೈ ತೊಳೆಯಬೇಕಾಗುತ್ತದೆ. ರಾತ್ರಿ ಮಲಗುವ ಮುನ್ನ ಮೈಯುಜ್ಜಬೇಕಾಗುತ್ತದೆ. ಅವುಗಳು ಮಲಗುವ ಜಾಗವನ್ನು ದಿನವೂ ಶುಭ್ರಗೊಳಿಸಿ ಬತ್ತದ ಹುಲ್ಲು ಅಥವಾ ಹೊಟ್ಟು ಹರಡಬೇಕಾಗುತ್ತದೆ. ಆರೈಕೆಯಲ್ಲಿ ಕೊಂಚವೂ ಏರುಪೇರಾಗದಂತೆ ಎಚ್ಚರವಹಿಸಿ ಕೂದಲು ಕೊಂಕದಂತೆ ಸಾಕಿದರೆ ಮಾತ್ರ ಅವುಗಳಿಗೆ ಒಳ್ಳೆಯ ಬೆಲೆ. ಇತ್ತೀಚೆಗೆ ಅವುಗಳ ಸಾಕಣೆ ವೆಚ್ಚವು ಅಧಿಕವಾಗಿರುವುದರಿಂದ ಲಾಭಾಂಶವು ಕಡಿಮೆಯಾಗುತ್ತಿದೆ. ಎಲ್ಲೋ ಹಣವಿದ್ದ ರೈತರು ಕೆಲವರು ಅವುಗಳಿಂದ ಲಾಭ ಬರದಿದ್ದರೂ ಕೂಡ ತೆವಲಿಗಾಗಿ ಇಂತಹ ಹೋರಿಗಳನ್ನು ಸಾಕುವುದುಂಟು. ಹಾಸನದ ಜಾತ್ರೆಯಲ್ಲಿ ಸಾಮಾನ್ಯವಾಗಿ ಮಾವಿನಳ್ಳಿ ಚೆನ್ನಪ್ಪ, ಚಿಗಳ್ಳಿ ದೊಡ್ಡನಾಯಕ (ಆರ್. ಡಿ. ಗೌಡ), ಬಸಟ್ಟಿಕೊಪ್ಪಲ್ ಮೀಸೆವೆಂಕಟೇಶ, ಹಾಸನದ ಚಲುವಪ್ಪ, ಪಿರುಮೇನಹಳ್ಳಿ ರಿ॥ ಸ್ಕೂಲ್ ಮಾಸ್ಟರ್ ನಿಂಗೇಗೌಡ, ಚಿಕ್ಕೇಗೌಡ ಇಂತಹ ಹೋರಿಗಳನ್ನು ಸಾಕಿ ಮೆರೆಸುತ್ತಿದ್ದರು. ಇವರೆಲ್ಲಾ ಎರಡರಿಂದ ಐದು ಜೊತೆವರೆಗೂ ಜಾತ್ರೆಗೆ ಎತ್ತು ಹೋರಿಗಳನ್ನು ಕಟ್ಟುತ್ತಿದ್ದರು.

ಈ ಹೋರಿಗಳನ್ನು ಹಾವೇರಿ, ರಾಣೆಬೆನ್ನೂರು, ಧಾರವಾಡ, ಹುಬ್ಬಳ್ಳಿ, ದಾವಣಗೆರೆ ಸೇರಿದಂತೆ ಉತ್ತರ ಕರ್ನಾಟಕದ ಬಹುಭಾಗದ ಜನರು ತಂಡ ತಂಡದೋಪಾದಿಯಲ್ಲಿ ಕೊಳ್ಳಲು ಬರುತ್ತಾರೆ. ಬಂದವರು ಸಾಮಾನ್ಯವಾಗಿ ಇಲ್ಲಿ ತಂಗುತ್ತಾರೆ. ಹೀಗೆ ತಂಗುವವರ ಬೇಸರ ನೀಗಿಸಲೆಂದೇ ನಗರಸಭೆಯ ವಸ್ತುಪ್ರದರ್ಶನ ಶುರುವಾದದ್ದು. ಜಾತ್ರೆಯಲ್ಲಿ ಸೇರುವ ಜನಗಳಿಗಾಗಿ ಮನರಂಜನೆಯನ್ನು ಕೊಡುವುದಕ್ಕಾಗಿ ನಾಟಕ ಕಂಪನಿಗಳು ಬರುತ್ತಿದ್ದವು. ಮಾಸ್ಟರ್ ಹಿರಣ್ಣಯ್ಯನವರ 'ಲಂಚಾವತಾರ' ಅತ್ಯಂತ ಯಶಸ್ವಿಯಾಗಿ ಇಲ್ಲಿ ಪ್ರದರ್ಶನಗೊಳ್ಳುತ್ತಿತ್ತು. ಚಿತ್ರದುರ್ಗದ ಕುಮಾರಸ್ವಾಮಿ ನಾಟಕ ಕಂಪನಿಯ ಮುದುಕನ ಮದುವೆ, ಗೌಡ್ರುಗದ್ದಲ, ಕೃಷ್ಣಾರ್ಜುನರ ಕಾಳಗ, ರಾಮಾಂಜನೇಯ ಯುದ್ಧ ಮೊದಲಾದ ನಾಟಕಗಳು ಇಲ್ಲಿ ಯಶಸ್ವಿ ಪ್ರದರ್ಶನ ಕಾಣುತ್ತಿದ್ದವು. ಹೊರರಾಜ್ಯಗಳಿಂದಲೂ ನಾಟಕ ಕಂಪನಿಗಳು ಬಂದು ಇಲ್ಲಿ ಪ್ರದರ್ಶನ ನೀಡುತ್ತಿದ್ದವು ಎಂಬುದಿದೆ. ಇತ್ತೀಚೆಗೆ ಜಾತ್ರೆಯ ಸಂದರ್ಭದಲ್ಲಿ ಸರ್ಕಸ್ ಕಂಪನಿಗಳು ಬಂದು ಪ್ರದರ್ಶನ ನೀಡುತ್ತವೆ.

ಹಾಸನ ಜಾತ್ರೆಯ ಮತ್ತೊಂದು ವೈಭವದ ಸಂಕೇತವೆಂದರೆ ದೀಪಗಳಿಂದ ಅಲಂಕರಿಸಿದ ಬಸವನ ಪ್ರತಿಮೆ ಮತ್ತು ವಸ್ತು ಪ್ರದರ್ಶನ. ವಸ್ತುಪ್ರದರ್ಶನ ಹಿಂದೆ ಬಹಳ ಅದ್ದೂರಿಯಾಗಿ ಹಾಸನ ಜಿಲ್ಲೆಯ ಸಾಂಸ್ಕೃತಿಕ ಸಂಕೇತವಾಗಿ ಜರುಗುತ್ತಿತ್ತು. ಜಿಲ್ಲೆಯಲ್ಲಿ ತಯಾರಾಗುವ ಕೈಗಾರಿಕಾ ವಸ್ತುಗಳು, ಜಿಲ್ಲೆಯನ್ನು ಪ್ರತಿನಿಧಿಸುವ ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಪ್ರದರ್ಶನಗಳು ವಸ್ತುಪ್ರದರ್ಶನಕ್ಕೊಂದು ಮೆರುಗು ತಂದುಕೊಟ್ಟಿದ್ದವು. ವಸ್ತುಪ್ರದರ್ಶನದಲ್ಲಿ ಹೊನಲು ಬೆಳಕಿನಲ್ಲಿ ನಡೆಯುತ್ತಿದ್ದ ರಾಜ್ಯ ಮಟ್ಟದ ವಾಲಿಬಾಲ್ ಮತ್ತು ಕೊಕ್ಕೊ, ಕಬಡ್ಡಿ ಪಂದ್ಯಾಟಗಳು ಜನಮನ್ನಣೆ ಗಳಿಸಿದ್ದವು.

ಆದರೆ ಇಂದು ಈ ಯಾವ ಸಾಂಸ್ಕೃತಿಕ ಪ್ರದರ್ಶನಗಳೂ ಇಲ್ಲದೆ ಜಾತ್ರೆ ತನ್ನ ವೈಭವ ಕಳೆದುಕೊಂಡಿದೆ. ಇದಕ್ಕೆ ಕಾರಣ ಹೊರ ಸಂಸ್ಕೃತಿಯ ಪ್ರಭಾವ, ಶ್ರಮವಿಲ್ಲದೆ ಬದುಕಬೇಕೆಂಬ ರೈತರ ಭಾವನೆ, ನಗರಸಭೆಯ ಆಡಳಿತದ ವೈಖರಿ, ಹಾಗೂ ದೂರದೃಷ್ಟಿ ಇಲ್ಲದ ರಾಜಕಾರಣ, ರಾಜಕೀಯ ನಾಯಕರುಗಳಿಗೆ ನಾಡು-ನುಡಿ, ಸಂಸ್ಕೃತಿಯನ್ನು ಉಳಿಸಬೇಕೆಂಬ ಕಾಳಜಿ ಇಲ್ಲದಿರುವುದೇ ಆಗಿದೆ. ಈ ಎಲ್ಲಾ ಕಾರಣಗಳಿಂದ ಜಾತ್ರೆ ನಡೆಯುತ್ತಿದ್ದ ಜಾಗದ ಅರ್ಧ ಭಾಗ ವಿದ್ಯುಚ್ಛಕ್ತಿ ಮಂಡಳಿಯ ಪಾಲಾಗಿದ್ದರೆ ಉಳಿದ ಜಾಗ ಕಸದ ತಿಪ್ಪೆಯಾಗಿದೆ. ಇಂದು ಆ ತಿಪ್ಪೆಯ ಮೇಲೆಯೇ ದನಗಳ ಜಾತ್ರೆ ನಡೆಯುತ್ತಿದೆ.

ಇಂದು ವಸ್ತು ಪ್ರದರ್ಶನದಲ್ಲಿ ದೀಪಗಳ ಅಬ್ಬರವನ್ನು ಬಿಟ್ಟರೆ ಬೇರೇನೂ ಇರುವುದಿಲ್ಲ. ಜಾತ್ರೆಯಲ್ಲಿ ಸಿಗುತ್ತಿದ್ದ ಖರ್ಜೂರವಂತೂ ಈಗ ಎಲ್ಲಾ ಕಾಲದಲ್ಲಿಯೂ ಸಿಗುವಂತಾಗಿದೆ. ಪಾತ್ರೆಗಳಂತೂ ನೋಡಲು ಸಿಗುವುದಿಲ್ಲ. ಹಿಂದೆ ''ಜನವರಿ ಜಾತ್ರೆ ಕೈಲೊಂದ್ ಪಾತ್ರೆ'' ಎಂಬ ಜಾತ್ರೆ ಕುರಿತ ಹಾಡು ಪ್ರಸಿದ್ಧವಾಗಿತ್ತು. ಅದಕ್ಕೆ ಕಾರಣವೂ ಇತ್ತು. ಇಲ್ಲಿ ಜನ-ದನಗಳಿಗೆ ಬೇಕಾಗುವ ಎಲ್ಲಾ ಪದಾರ್ಥಗಳು ಸಿಗುತ್ತಿದ್ದವು. ಹುಲ್ಲು-ಹಿಂಡಿ, ಬೂಸಾ ಒಂದು ಕಡೆಯಾದರೆ, ಹಗ್ಗ-ಮೂಗುದಾರ, ಗಂಟೆ, ಹಣಸು, ವಿವಿಧ ರೀತಿಯ ಚಾಟಿಕೋಲು ಇನ್ನಿತರ ಅಲಂಕರಣ ಸಾಮಗ್ರಿಗಳು ಮತ್ತೊಂದು ಕಡೆ. ಜೊತೆಗೆ ಕುಡಿಕೆಯಿಂದ ಕಡಾಯಿವರೆಗಿನ ಎಲ್ಲಾ ಗಾತ್ರದ ವಿವಿಧ ರೀತಿಯ ಪಾತ್ರೆ-ಪಡಗಗಳು ಇಲ್ಲಿ ಹೇರಳವಾಗಿ ದೊರೆಯುತ್ತಿದ್ದು, ಜಾತ್ರೆಗೆ ಬಂದವರೆಲ್ಲಾ ಸಾಮಾನ್ಯವಾಗಿ ಒಂದಲ್ಲ ಒಂದು ಪಾತ್ರೆ ಕೊಂಡೊಯ್ಯುತ್ತಿದ್ದರು. ಆದರೆ ಇಂದು ಇದಾವುದರ ಪಳೆಯುಳಿಕೆಯೂ ಅಲ್ಲಿರುವುದಿಲ್ಲ. ಚನ್ನಪಟ್ಟಣದ ಕೆರೆ ಹಾಸನದ ಜಾತ್ರೆಗೆ ಪ್ರಾಕೃತಿಕ ಸೊಬಗನ್ನು ನೀಡುವಂತಿತ್ತು. ಆದರೆ ಇಂದು ಅದು ಸಹ ಅಭಿವೃದ್ಧಿಯ ನೆಪದಲ್ಲಿ ಇಲ್ಲದಂತಾಗಿದೆ.

ಒಟ್ಟಾರೆ ಹಾಸನ ಜಿಲ್ಲೆಯ ಸಾಂಸ್ಕೃತಿಕ ವೈಭವವನ್ನು ಸಾರುತ್ತಿದ್ದ ಜಾತ್ರೆ ಇಂದು ಮೆರುಗನ್ನು ಕಳೆದುಕೊಂಡು ಬಟ್ಟೆಯಿಲ್ಲದ ಬೆತ್ತಲು ದೇಹದಂತಾಗಿದೆ. ಆದರೂ ಸಹ ಹಾಸನದ ಸಾಂಸ್ಕೃತಿಕ ಇತಿಹಾಸದಲ್ಲಿ ಹಾಸನದ ದನಗಳ ಜಾತ್ರೆ 'ಜನವರಿ ಜಾತ್ರೆ' ಎಂದೇ ಗುರುತಿಸಿಕೊಂಡು ಅಚ್ಚಳಿಯದ ಪ್ರಭಾವ ಬೀರುತ್ತಿದೆ.

**ಡಾ॥ ವಸಂತಕುಮಾರ್ ಹ್ಯಾರಾನೆ**
ಶಂಕರಿಪುರಂ, ಹಾಸನ

# ಗೋರಖ್‌ಪುರದಲ್ಲಿ ತಯಾರಾದ ದೊಂಬಿ

**[ಉತ್ತರ ಪ್ರದೇಶದ ಪೂರ್ವಭಾಗ (ಪೂರ್ವಾಂಚಲ)ದಲ್ಲಿ ಜನವರಿ ೨೬-೩೧ರ ಮಧ್ಯೆ ಜರುಗಿದುದು ಮತೀಯ ಘರ್ಷಣೆಯಲ್ಲ. ಆದರೆ ಸಂಸತ್ಸದಸ್ಯ ಯೋಗಿ ಆದಿತ್ಯನಾಥ್ ಮತ್ತವರ ಹಿಂಬಾಲಕರು ಹರಿಬಿಟ್ಟ ಗಲಭೆ-ಹಿಂಸಾಚಾರ.]**

**ಪೂ**ರ್ವಾಂಚಲ ಪ್ರದೇಶದಲ್ಲಿ ಜನವರಿ ತಿಂಗಳ ಕೊನೆಯ ಭಾಗದಲ್ಲಿ ಜರುಗಿದ ಘಟನೆಗಳು ಮಾಧ್ಯಮದ ದೃಷ್ಟಿಯಲ್ಲಿ ಕೇವಲ ಘರ್ಷಣೆ ಎನಿಸಿಕೊಂಡರೂ, ವಾಸ್ತವವಾಗಿ ಅವು ಬಿ.ಜೆ.ಪಿ. ಸಂಸತ್ಸದಸ್ಯ ಯೋಗಿ ಆದಿತ್ಯನಾಥ್ ಮತ್ತವನ ಹಿಂಬಾಲಕರು ಹರಿಬಿಟ್ಟ ಘೋರ ಕೋಮುವಾದಿ ದೊಂಬಿ-ಹಿಂಸಾಚಾರಗಳಾಗಿದ್ದುವು. ಆದಿತ್ಯನಾಥನು ಗೋರಖನಾಥ್ ದೇವಾಲಯದ ಗುರುಪೀಠಕ್ಕೇರಲು ಹೊಂಚು ಹಾಕುತ್ತಿರುವ ಬಾಲ್ ಠಾಕರೆಯ ಒಬ್ಬ ಬಾಲಬಡುಕ. ಈತ ಸಂಸತ್ಸದಸ್ಯನಾಗಿರುವುದು ಒಂದು 'ತಾಂತ್ರಿಕ' ಹುನ್ನಾರವಷ್ಟೇ. ಬಿ.ಜೆ.ಪಿ. ಸದಸ್ಯತ್ವವೂ ಅಷ್ಟೇ. ಅದು ಅವನಿಗೆ ಮೇಲಕ್ಕೇರುವ ಒಂದು ಏಣಿಯಷ್ಟೆ. ಶಿಸ್ತು, ನಿಯಮ ಇವೆಲ್ಲ ಮತಾಂಧನಿಗೆ ಸಲ್ಲ. ಆದ್ದರಿಂದಲೇ ಈತ ಲಕ್ನೋದಲ್ಲಿ ಬಿ.ಜೆ.ಪಿ. ರಾಷ್ಟ್ರೀಯ ಸಮಾಲೋಚನ ಸಮಿತಿ ಸಭೆ ನಡೆಯುತ್ತಿದ್ದಾಗಲೇ ತಾನು ಅದನ್ನು ಅಣಕಿಸುವಂತೆ ವಿಶ್ವ ಹಿಂದೂ ಮಹಾ ಸಮ್ಮೇಳನವನ್ನು ಸಂಘಟಿಸಿದ್ದ. ಆ ಪ್ರದೇಶದಲ್ಲಿ, ಈತನ ಹಿಡಿತ ಎಷ್ಟು ಭಾರಿಯದೆಂದರೆ ಬಿ.ಜೆ.ಪಿ.ಯೂ ಅವನ ಮೇಲೆ ಶಿಸ್ತುಕ್ರಮ ಜರುಗಿಸುವ ಸಾಹಸ ಮಾಡಲಾಗದು. ಇವನೊಬ್ಬ ಠಾಕೂರ್. ಪೂರ್ವಾಂಚಲ ಪ್ರದೇಶ ಇವನ ಪಾಳೆಯಪಟ್ಟು. ಮುಖ್ಯಮಂತ್ರಿ ಈ ಪ್ರದೇಶಕ್ಕೆ ಭೇಟಿ ನೀಡಿದಾಗಲೆಲ್ಲ ಈ ಪಾಳೆಯಗಾರ ಬಂದ್‌ಗೆ ಕರೆ ನೀಡಿದುದುಂಟು.

'ಪೂರ್ವಾಂಚಲದಲ್ಲಿ ಇರಬೇಕೆನಿಸಿದರೆ ಯೋಗಿಯ ಜಪಮಾಡಿ' ಎಂಬುದು ಆತನ ಪಟಾಲಂಗಳ ಘೋಷಣೆ. ಆದರೆ ಇದು ಎಷ್ಟು ನಿಜ? ಪೂರ್ವಾಂಚಲ ಹೋಗಲಿ, ಗೋರಖ್‌ಪುರದಲ್ಲೇ ಇವನ ಹಿಡಿತ ನಿಜಕ್ಕೂ ಎಷ್ಟು ಬಿಗಿ? ವಾಸ್ತವವಾಗಿ ಅಲ್ಲಿ ನಡೆದ ಎಲ್ಲ ಸ್ಥಳೀಯ ಚುನಾವಣೆಗಳಲ್ಲೂ ಈತ ಸೋತಿದ್ದಾನೆ. ಆದರೆ ಹೇಗೋ ಏನೋ ಸಮಾಜವಾದಿ ಪಾರ್ಟಿಯ ಮೇಯರ್ ಸ್ಥಾನಕ್ಕೆ ಉಮೇದುವಾರನಾದ ಅಂಜು ಚೌಧರಿಯನ್ನು ತನ್ನ ಪಕ್ಷಕ್ಕೆ ಒಲಿಸಿಕೊಂಡಿರುವುದು ಈತನಿಗೆ ಇಲ್ಲದ ಶಕ್ತಿ ನೀಡಿದೆ.

ಕಳೆದ ೧೫ ವರ್ಷಗಳಿಂದ ಈ ಆದಿತ್ಯನಾಥನ ಸುತ್ತ ಅನೇಕ ಮಿಥ್ಯೆಗಳನ್ನು ಹೆಣೆಯಲಾಗಿದೆ. ಅವನನ್ನು 'ಯುವ ಹಿಂದೂ ಸಾಮ್ರಾಟ', 'ಪೂರ್ವಾಂಚಲದ ನರೇಂದ್ರ ಮೋದಿ', 'ಪೂರ್ವಾಂಚಲ ಹಿಂದೂ ರಾಷ್ಟ್ರದ ಪ್ರಧಾನಿ' ಎಂದೆಲ್ಲ ಹೊಗಳಲಾಗಿದೆ. ಅವನು ಗೋರಖನಾಥ್ ದೇವಸ್ಥಾನದ ಸಂಪತ್ತನ್ನೆಲ್ಲ ತನ್ನ ಬಾಲಬಡುಕರ ಸಂವರ್ಧನೆಗೆ ಬಳಸಿಕೊಂಡಿದ್ದಾನೆ. 'ಹಿಂದೂ ಯುವ ವಾಹಿನಿ', 'ಶ್ರೀರಾಮ ಶಕ್ತಿ ಪ್ರಕೋಷ್ಠ', 'ಗೋರಖನಾಥ್ ಪೂರ್ವಾಂಚಲ ವಿಕಾಸ ಮಂಚ್', 'ಹಿಂದೂ ಮಹಾಸಭ' ಹಾಗೂ 'ವಿಶ್ವ ಹಿಂದೂ ಮಹಾಸಂಘ' ಎಂಬಂತಹ ಅನೇಕ ಸಂಘಸಂಸ್ಥೆಗಳನ್ನು ಹುಟ್ಟುಹಾಕಿದ್ದಾನೆ. 'ಬಜರಂಗ ದಳ' ಹಾಗೂ 'ಹಿಂದೂ ಜಾಗರಣ ಮಂಚ್' ಸಂಸ್ಥೆಗಳೂ ಇವನ ಕೈಗಳಲ್ಲಿವೆ. ಇವನು ದೇವಸ್ಥಾನದ ಆವರಣದಲ್ಲೇ ತನ್ನ ದರ್ಬಾರು ನಡೆಸುತ್ತಾನೆ. ಸ್ಥಳೀಯ ಪೊಲೀಸರೂ ಅಧಿಕಾರಿಗಳೂ ಇದರಲ್ಲಿ ಮೂಕರಾಗಿ ಹಾಜರಿರುತ್ತಾರೆ.

ಆದಿತ್ಯನಾಥನು ದೊಂಬಿ ಗಲಭೆಗಳನ್ನು ತಯಾರಿಸುವ ತಂತ್ರದಲ್ಲಿ ಸಿದ್ಧಹಸ್ತ. ಯಾರೋ ಒಬ್ಬ ಮುಸ್ಲಿಮನ ಉಗುಳಿನ ಒಂದು ಹನಿ ಒಬ್ಬ ಹಿಂದೂವಿನ ಬಟ್ಟೆಯ ಮೇಲೆ ಅಕಸ್ಮಾತ್ತಾಗಿ ಬಿದ್ದರೆ ಅಷ್ಟೇ ಸಾಕು. ಅದನ್ನು ಹಿಂದೂಗಳಿಗಾದ ಅವಮಾನ ಎಂದು ಬಿಂಬಿಸಲಾಗುತ್ತದೆ. ಮುಸ್ಲಿಮ್ ಯುವಕನೊಬ್ಬ ಒಬ್ಬ ದಲಿತ ಯುವತಿಯ ಮೇಲೆ ನಡೆಸಿದ ಆಕಸ್ಮಿಕ ಅತ್ಯಾಚಾರವೊಂದು 'ಹಿಂದೂ ಸ್ತ್ರೀಯರ ಮೇಲೆ ಮುಸ್ಲಿಮರ ಅತ್ಯಾಚಾರ'ವೆನಿಸಿಕೊಂಡು ಮುಸ್ಲಿಮರ ಮೇಲೆ ಹಿಂಸಾಕೃತ್ಯ ಹರಿಬಿಡಲಾಗುತ್ತದೆ. ಕಳೆದ ಹನ್ನೊಂದು ವರ್ಷಗಳಲ್ಲಿ ಇಂಥ ಎಷ್ಟೋ ಕೃತ್ಯಗಳು ನಡೆದಿವೆ. ೧೯೯೯ರಲ್ಲಿ ಸಮಾಜವಾದಿ ಪಾರ್ಟಿ ನಾಯಕ ತಲತ್ ಅಜೀಜ್ ಜೊತೆಯಲ್ಲಿದ್ದ ಒಬ್ಬ ಪೊಲೀಸ್ ಪೇದೆಯ ಕೊಲೆಯಾದಾಗಲಷ್ಟೇ ಮಹಾರಾಜ್ ಗಂಜ್‌ನಲ್ಲಿ ಆದಿತ್ಯನಾಥನ ಮೇಲೆ ಒಂದು ನಾಮಕಾವಾಸ್ತೇ ಮೊಕದ್ದಮೆ ಹೂಡಲಾಯಿತು. ಅಧಿಕಾರದಲ್ಲಿರುವ ಸಮಾಜವಾದಿ ಪಾರ್ಟಿಯು ಮಾಯಾವತಿಯ ಬ್ರಾಹ್ಮಣ-ಎಲೆಗೆ ಪ್ರತಿಯಾಗಿ ತನ್ನದೇ ಈ ಠಾಕೂರ್-ಎಲೆಯನ್ನು ಬಳಸಿಕೊಳ್ಳುತ್ತಿರುವಂತಿದೆ. ಕಾಂಗ್ರೆಸ್ ಕೂಡ ಈತನ ವಿರುದ್ಧ ನಿಲ್ಲಲಾಗದಂತಿದೆ.

ಇಷ್ಟೆಲ್ಲ ಇದ್ದರೂ ಜನವರಿ ೨೬-೨೭ರ ರಾತ್ರಿ ಜರುಗಿದ ಘಟನೆಯಲ್ಲಿ ಇವನ ಹಂಚಿಕೆ ಏರುಪೇರಾಯಿತು. ಅಂದು ಪಂಕಜರಾಜ್ ಮತ್ತವನ ಹಿಂಬಾಲಕರು ಒಂದು ವಿವಾಹದ ನೃತ್ಯತಂಡದವರ ಮೇಲೆ ದಾಳಿ ನಡೆಸಿದಾಗ ಆ ನೃತ್ಯತಂಡದವರು ಮೊಹರಮ್ ಮೆರವಣಿಗೆಯೊಂದರ ಜೊತೆ ಸೇರಿಕೊಂಡರು. ಆ ಮೆರವಣಿಗೆಯವರು ತಮ್ಮ ಮೇಲೆ ದಾಳಿ ಮಾಡಲಾಗುತ್ತಿದೆ ಎಂದು ಭಾವಿಸಿಕೊಂಡರು. ಆ ಗಲಭೆ ಸನ್ನಿವೇಶದಲ್ಲಿ ಹಿಂದೂ-ಮುಸ್ಲಿಮ್ ಎರಡು ಬಣದವರೂ ಪೆಟ್ಟುತಿಂದರು. ರಾಜ್‌ಕುಮಾರ್ ಅಗ್ರಹಾರಿ ಎಂಬ ಯುವಕ ಗಾಯಗೊಂಡು ಆಸ್ಪತ್ರೆಗೆ ದಾಖಲಾದ. ಗಲಭೆ ಪ್ರದೇಶಕ್ಕೆ ಭೇಟಿ ನೀಡಕೂಡದೆಂದು ಜಿಲ್ಲಾ ಮ್ಯಾಜಿಸ್ಟ್ರೇಟರು ಆದಿತ್ಯನಾಥನಿಗೆ ತಿಳಿಸಿದರು. ಮೊದಲು ಅವನು ಇದಕ್ಕೆ ಒಪ್ಪಿಕೊಂಡ. ಆದರೆ ಆಸ್ಪತ್ರೆಗೆ ದಾಖಲಾಗಿದ್ದ ಅಗ್ರಹಾರಿ ಸತ್ತನೆಂದು ಸುದ್ದಿ ಬಂದಾಗ, ಹಿಂದೂವನ್ನು ಕೊಂದುದಕ್ಕಾಗಿ ಮುಸ್ಲಿಮರ ವಿರುದ್ಧ ಸೇಡುತೀರಿಸಲು ತಾನು ಅಲ್ಲಿಗೆ ಹೋಗೇ ತೀರುವುದಾಗಿ ಘೋಷಿಸಿದ. ಅವನೂ ಅವನ ಹಿಂಬಾಲಕರೂ ಜಿಲ್ಲಾಧಿಕಾರಿಯ ಮುಂದೆ ಕತ್ತಿ ಝಳಪಿಸಿದರು. ಜಿಲ್ಲಾಧಿಕಾರಿ ದೃಢ ನಿರ್ಧಾರ ಕೈಗೊಂಡು ಕತ್ತಿಗಳನ್ನು ಬಲಾತ್ಕಾರದಿಂದ ವಶಪಡಿಸಿಕೊಳ್ಳುವಂತೆ ಪೊಲೀಸರಿಗೆ ಆಜ್ಞಾಪಿಸಿದರು. ಇದರಿಂದ ಧೃತಿಗೆಟ್ಟ ಆದಿತ್ಯನಾಥ ರಾಜಿಗೆ ಸಿದ್ಧನಾದ. ಕರ್ಫ್ಯೂ ಘೋಷಿಸುವಂತೆ ಕೇಳಿಕೊಂಡ. ಹಿಂಸಾಚಾರವು ಮೊಹರಮ್ ಮೆರವಣಿಗೆಯನ್ನು ಭಂಗಗೊಳಿಸಬಹುದೆಂದು ಭಾವಿಸಿದ ಜಿಲ್ಲಾಧಿಕಾರಿ ಅಂತೆಯೇ ಕರ್ಫ್ಯೂ ಘೋಷಿಸಿದರು.

ಆದರೆ ಅನಂತರ ಆದಿತ್ಯನಾಥ ಟಾರ್ಚ್‌ಲೈಟ್ ಮೆರವಣಿಗೆ ಘೋಷಿಸಿದ. ಆಡಳಿತಾಧಿಕಾರಿಗಳು ಅದನ್ನು ತಪ್ಪಿಸಿದರು. ಮಾರನೆಯ ದಿನ ನಗರದ ಜನಭರಿತ ಕ್ಷೇತ್ರವೊಂದರಲ್ಲಿ ಶ್ರದ್ಧಾಂಜಲಿ ಸಭೆಯನ್ನು ಘೋಷಿಸಿದ. ಜಿಲ್ಲಾಧಿಕಾರಿ ಅದನ್ನು ನಿಷೇಧಿಸಿ ಆದಿತ್ಯನಾಥನನ್ನು ದಸ್ತಗಿರಿ ಮಾಡಿ ಪೊಲೀಸ್ ವ್ಯಾನಿನಲ್ಲಿ ಕಾರಾಗೃಹದತ್ತ ಕರೆದೊಯ್ದು. ರಸ್ತೆಯಾದ್ಯಂತ ಕಲ್ಲುತೂರಾಟ ನಡೆದರೂ ಆದಿತ್ಯನಾಥ ಮೊತ್ತಮೊದಲ ಬಾರಿಗೆ ಬಂಧಿತನಾದ.

ಜನವರಿ ೨೯ರಂದು ಆದಿತ್ಯನಾಥನ ಹಿಂಬಾಲಕರು ಗೋರಖನಾಥ ದೇವಾಲಯದಲ್ಲಿ ಗುಂಪುಗೂಡಿ ಸಮೀಪದ ಮುಸ್ಲಿಮ್ ಮನೆಗಳತ್ತ ಕಲ್ಲಿನ ಮಳೆಗರೆದರು. ಆದರೆ ಮುಸ್ಲಿಮರ ಕಡೆಯಿಂದ ಒಂದು ಕಲ್ಲೂ ಬರಲಿಲ್ಲವೆಂದು ಜಿಲ್ಲಾಧಿಕಾರಿ ಡಾ|| ಹರಿ ಓಮ್‌ರವರೇ ದಾಖಲಿಸಿದ್ದಾರೆ. ಆದರೆ ಮಾಧ್ಯಮಗಳು ಮಾತ್ರ ಗೋರಖಪುರ ನಗರ ಹೊತ್ತಿ ಉರಿಯುತ್ತಿದೆಯೆಂದೂ, ಗೋರಖನಾಥ್ ದೇವಾಲಯವನ್ನು ಧ್ವಂಸಗೊಳಿಸಲಾಯಿತೆಂದೂ ಸುಳ್ಳುಸುಳ್ಳೇ ಪ್ರಚಾರ ಮಾಡಿದವು. ಅನಂತರ ಇದ್ದಕ್ಕಿದ್ದಂತೆ ಜಿಲ್ಲಾಧಿಕಾರಿಯನ್ನೂ ಪೊಲೀಸು ಸೂಪರಿಂಟೆಂಡೆಂಟ್‌ನನ್ನೂ ಬೇರೆಡೆಗೆ ವರ್ಗಾಯಿಸಲಾಯಿತು. ತದನಂತರ ರಷೀದ್ ಎಂಬ ಮುಸ್ಲಿಮ್ ಯುವಕನನ್ನು ಕೊಲ್ಲಲಾಯಿತು. ಹಿಂದೂ ಯುವ ವಾಹಿನಿಯ ವ್ಯಕ್ತಿಯೊಬ್ಬನ ಕಾಲಿಗೆ ಗಾಯದ ಪಟ್ಟಿ ಕಟ್ಟಿ ಆ ಕಾರಣಕ್ಕಾಗಿಯೇ ಮುಸ್ಲಿಮ್ ಯುವಕನನ್ನು ಕೊಲ್ಲಲಾಯಿತೆಂದು ಸುಳ್ಳು ಸಾಕ್ಷ್ಯ ನೀಡಲಾಯಿತು. ಇದನ್ನೇ ಮಾಧ್ಯಮಗಳೂ ಬಿಂಬಿಸಿದವು.

ಮಾಧ್ಯಮಗಳು ಪ್ರಚಾರ ಮಾಡಿದಂತೆ ಗಲಭೆ-ಘರ್ಷಣೆ ಏನೂ ಜರುಗಲಿಲ್ಲವೆಂದೇ ಜಿಲ್ಲಾಧಿಕಾರಿ ಹರಿ ಓಮ್ ಸ್ಪಷ್ಟಪಡಿಸಿದ್ದಾರೆ. ಮುಸ್ಲಿಮರಿಂದ ಪ್ರಚೋದನೆ ಇಲ್ಲದೆಯೇ ಆದಿತ್ಯನಾಥನೂ ಅವನ ಬಾಲಬಡುಕರೂ ಗೋರಖಪುರಕ್ಕೆ ಮುತ್ತಿಗೆ ಹಾಕಿದರು. ಮಸೀದಿಗಳನ್ನೂ ಮುಸ್ಲಿಮರ ಅಂಗಡಿಗಳನ್ನೂ ಸುಟ್ಟುಹಾಕಿದರು. ಎರಡು ಗುಂಪುಗಳ ನಡುವೆ ಘರ್ಷಣೆ ಇಲ್ಲದೆಯೇ ಇಷ್ಟೆಲ್ಲ ಅನಾಹುತ ನಡೆದುಹೋಯಿತು. ಬಿ.ಜೆ.ಪಿ. ಸಂಸತ್ ಸದಸ್ಯ ಆದಿತ್ಯನಾಥನನ್ನು ಸೆರೆಗೈಯ್ದ ಅಧಿಕಾರಿಗಳನ್ನು ಮುಖ್ಯಮಂತ್ರಿ ಮುಲಾಯಮ್ ಸಿಂಗ್ ಯಾದವ್ ತಕ್ಷಣವೇ ವರ್ಗಾಯಿಸಿದುದೇಕೆ? ಅವರ ನಂತರ ಬಂದ ಅಧಿಕಾರಿಗಳು ನೇರವಾಗಿ ಆದಿತ್ಯನಾಥನ ಬಳಿಗೆ ಹೋಗಿ ಕ್ಷಮೆ ಕೋರಿದುದೇಕೆ?

ಜನವರಿ ೨೯ರಂದು ಘೋಷಿಸಿದ್ದ ಕರ್ಫ್ಯೂ ನಡುವೆಯೂ ಮೊಹರಮ್ ಮೆರವಣಿಗೆ ನಡೆಯಲು ೭-೮ ಗಂಟೆಗಳ ವಿನಾಯಿತಿ ನೀಡುವುದಾಗಿ ಮಾತುಕೊಟ್ಟು ತಪ್ಪಿದುದಕ್ಕಾಗಿ ಜಿಲ್ಲಾಧಿಕಾರಿ ಹರಿ ಓಮ್ ವಿಷಾದ ವ್ಯಕ್ತಪಡಿಸಿದ್ದಾರೆ. ಈ ಯುವ ಅಧಿಕಾರಿ ಒಂದು ಪ್ರಶ್ನೆ ಕೇಳುತ್ತಾರೆ: ಸಮುದಾಯವೊಂದು ದಾಳಿಗೊಳಗಾದಾಗ ರಕ್ಷಣೆಯ ಹೊಣೆಹೊತ್ತ ಅಧಿಕಾರಿಗಳು ಕಣ್ಣುಮುಚ್ಚಿ ಕುಳಿತರೆ ದೇಶದಲ್ಲಿ ಸಮಾಜದಲ್ಲಿ ಶಾಂತಿ ಉಳಿದೀತು ಎಂತು?

ಹೀಗಿದೆ ಉತ್ತರ ಪ್ರದೇಶದ ಕಥೆ: ಘಟಿಸದ ಅನೇಕ ಗಲಭೆ-ಘಟನೆಗಳ ನಿಜಕಥೆ. ಮಾಧ್ಯಮಗಳು ಬಿಂಬಿಸಿದ ಘಟನೆ-ಗಲಭೆಗಳೆಲ್ಲ ವಾಸ್ತವವಾಗಿ ಆಸಕ್ತ ಶಕ್ತಿಗಳು ಮೊದಲೇ ತಯಾರಿಸಿದ ದೊಂಬಿಗಳೇ ಆಗಿವೆ.

*(ಸೌಜನ್ಯ : ತೆಹೆಲ್ಕಾ ಪತ್ರಿಕೆ)*

ಮೂಲ : **ಅಪೂರ್ವಾನಂದ್**, ಅಧ್ಯಾಪಕ, ದಿಲ್ಲಿ ವಿಶ್ವವಿದ್ಯಾಲಯ
ಕನ್ನಡಕ್ಕೆ : **ಕೆ. ಎಲ್. ಗೋಪಾಲಕೃಷ್ಣ ರಾವ್**, ನಂ. ೨೬೧, ೨ನೇ ಕ್ರಾಸ್, ಬನಶಂಕರಿ ೨ನೇ ಹಂತ ೩ನೇ ಬ್ಲಾಕ್, ಸಿ.ಟಿ. ಬೆಡ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# "ಅಮ್ಮನೋ ಅಥವಾ ಕಾಲೇಜು ಹುಡುಗಿಯೊ?"






ಹೊಸ ಸಂತೂರ್, ಅರಿಶಿಣ ಹಾಗೂ ಚಂದನದ ಪೋಷಣೆಯುಕ್ತ.




ಹೊಸ ಸಂತೂರ್ ವೈಟ್, ಚಂದನ ಹಾಗೂ ಬಾದಾಮಿ ಹಾಲಿನ ಮ್ಯಾಶ್ಚರೈಸಿಂಗ್ ಗುಣಯುಕ್ತ.

ಈಗ ಎಲ್ಲರೂ ಪಡೆಯುಬಲ್ಲರು ನೋಡುವವರನ್ನು ಚಕಿತಗೊಳಿಸುವಂತಹ ತ್ವಚೆ. ಪ್ರಸ್ತುತವಿದೆ ಸಂತೂರ್, ಎರಡು ಆಕರ್ಷಕ ಹೊಸ ರೂಪಗಳಲ್ಲಿ. ನಿಮ್ಮ ತ್ವಚೆಯನ್ನು ವರ್ಷಾನುವರ್ಷ ತಾರುಣ್ಯಪೂರ್ಣವಾಗಿ ಇರಿಸುವ ರಹಸ್ಯವನ್ನು ಕಂಡುಕೊಳ್ಳಿ ಮತ್ತು ಎಲ್ಲರೂ ಉದ್ಗರಿಸಲಿ, ನಿಜವಾದ ಸ್ಟಾರ್ ಎಂದರೆ ಈ ಸಂತೂರ್ ಮಮ್ಮಿ.



## ಸಂತೂರ್

**ಈಗ ಎರಡು ಹೊಸ ರೂಪಗಳಲ್ಲಿ!**

FCB•ULKA-750145


Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna


© All rights reserved. Reproduction in whole or in part without permission is prohibited.

**HOSATHU** Kannada Monthly / April 2007 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.




# ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

ವನ್ಯಜೀವಿ-ಪರಿಸರ
ಕುರಿತ ಮೂರು ಕೃತಿಗಳು !
ವನ್ಯಜೀವಿ ಮತ್ತು ನಿಸರ್ಗಪ್ರಿಯರು
ಓದಲೇಬೇಕಾದ ಸಚಿತ್ರ ಪುಸ್ತಕಗಳು !




ಬೆಲೆ : ರೂ. 80 ಪುಟ : 104

**ವನ್ಯಜೀವಿಗಳ ರಮ್ಯಲೋಕ**

*ಸಂಪಾದಕರು : ಟಿ. ಎಸ್. ಗೋಪಾಲ್*
*ಸಂಜಯ ಗುಬ್ಬಿ*
*ಸುಮಂಗಲಾ ಎಸ್. ಮುಮ್ಮಿಗಟ್ಟಿ*

ವನ್ಯಜೀವಿಗಳ ವಿಷಯಕ್ಕೆ ಸಂಬಂಧಿಸಿದಂತೆ ಬಾನುಲಿಯಲ್ಲಿ ಪ್ರಸಾರವಾದ ಸುಮಾರು ಇಪ್ಪತ್ತೇಳು ವಿಷಯ ತಜ್ಞರ ಸಂವಾದ.

...ಆದಿವಾಸಿಗಳ ಹಿತವನ್ನು ವನ್ಯಜೀವಿಗಳ ರಕ್ಷಣೆಯನ್ನು ಒಟ್ಟಾಗಿ ಸಾಧಿಸುವ ಕ್ರಮಗಳಿಗಾಗಿ ನಾವೆಲ್ಲರೂ, ಆದಿವಾಸಿಗಳನ್ನೂ ಜೊತೆಯಲ್ಲಿರಿಸಿಕೊಂಡು ಈ ಪುಸ್ತಕದ ಕರ್ತೃಗಳ ಜೊತೆ ಅತ್ಯಂತ ಜರೂರಾಗಿ ಸಂವಾದ ಮಾಡುವುದು ಅಗತ್ಯವೆಂದು ನಾನು ತಿಳಿದಿದ್ದೇನೆ.

– ಯು. ಆರ್. ಅನಂತಮೂರ್ತಿ




ಬೆಲೆ : ರೂ. 110 ಪುಟ : 144

**ಹುಲಿಯ ಬದುಕು**

*ಲೇಖಕ : ಕೆ. ಉಲ್ಲಾಸ ಕಾರಂತ*
*ಅನುವಾದ : ಎಚ್. ಆರ್. ಕೃಷ್ಣಮೂರ್ತಿ*

ಅಪಾಯದ ಅಂಚಿನಲ್ಲಿರುವ ದೊಡ್ಡ ಮಾರ್ಜಾಲದ ಪ್ರಾಕೃತಿಕ ಇತಿಹಾಸ ಮತ್ತು ಸಂರಕ್ಷಣೆ.




ಬೆಲೆ : ರೂ. 200 ಪುಟ : 272

**ಹುಲಿರಾಯನ ಆಕಾಶವಾಣಿ**

*ಲೇಖಕ : ಕೆ. ಉಲ್ಲಾಸ ಕಾರಂತ*
*ನಿರೂಪಣೆ : ಟಿ. ಎಸ್. ಗೋಪಾಲ್*

...ಕಾಡನ್ನು ಉಳಿಸಬೇಕು, ಅದರಲ್ಲಿ ತುಂಬಿ ತುಳುಕುವ ಜೀವರಾಶಿ ನಾಶವಾಗಿ ಹೋಗಕೂಡದು. ಅದೇ ರೀತಿ, ಕಾಡಿನಲ್ಲಿ ಜೀವನ ನಡೆಸುವ ಬುಡಕಟ್ಟಿನವರಿಗೂ ಅವರಿಗೆ ಹಿತವೆನಿಸುವ ಸಾಧನ-ಸೌಕರ್ಯಗಳು ದೊರಕಬೇಕು ಎಂಬುದನ್ನು ಒಪ್ಪಿಕೊಳ್ಳುತ್ತಾರಾದ್ದರಿಂದ ಇದೊಂದು ವಿಜ್ಞಾನಿಯ ಸರಳ ಆತ್ಮಕತೆಯಾಗಬಹುದಾಗಿತ್ತು. ಅದರ ಬದಲಾಗಿ ಇದು ಭ್ರಷ್ಟಾಚಾರ, ಹಿಂಸೆ, ಕಳ್ಳಸಾಗಾಣಿಕೆ, ವಿಧ್ವಂಸಕಗಳ ದಾಖಲೆಯಾಗಿರುವುದು ನಮ್ಮ ಇಂದಿನ ವ್ಯವಸ್ಥೆಯ ದುರಂತಕ್ಕೆ ಸಾಕ್ಷಿಯಾಗಿದೆ.

– ಗಿರೀಶ ಕಾರ್ನಾಡ

**ಮೂರು ಪುಸ್ತಕಗಳ ಒಟ್ಟು ಬೆಲೆ ರೂ. 390**

'ಹೊಸತು' ಮೂರು ವರ್ಷದ ಚಂದಾದಾರರಿಗೆ ಶೇ. 20ರಂತೆ ರಿಯಾಯಿತಿ
ಅಂಚೆ ವೆಚ್ಚ ರೂ. 30 ಪ್ರತ್ಯೇಕ. ಕೂಡಲೇ ಬರೆಯಿರಿ ಅಥವಾ ನಿಮ್ಮ ಊರಿನ ಪುಸ್ತಕದ ಅಂಗಡಿಗಳಲ್ಲಿ ವಿಚಾರಿಸಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ನಂ. 11, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ : 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001
✆ : 22203580, 30578022 e-mail: navakarnataka@vsnl.com web : www.navakarnatakabooks.com

ಶಾಖೆಗಳು : ಬೆಂಗಳೂರು ✆ 22251382 ■ ಮಂಗಳೂರು ✆ 2441016 ■ ಮೈಸೂರು ✆ 2424094 ■ ಗುಲ್ಬರ್ಗಾ ✆ 224302